ಭಾಗ - 2

# ತಿಳಿದಿರೋಣ

(ಆಧ್ಯಾತ್ಮಿಕ ವಿವಿಧ ವಿಷಯಗಳ ಸಂಗ್ರಹ)



: ಪ್ರಕಾಶನ :

ಶ್ರೀಮಾಧ್ವಗ್ರಂಥ ಪ್ರಕಾಶನ,

ಬೆಂಗಳೂರು

# ! ತಿಳಿದಿರೋಣ !

## (ಆಧ್ಯಾತ್ಮಿಕ ವಿವಿಧ ವಿಷಯಗಳ ಸಂಗ್ರಹ)

## ಭಾಗ - 2

ಅಂತರಂಗ

ಮಹಾಭಾರತ ರಾಮಾಯಣಾದಿಗಳಲ್ಲಿಯ

ಸುಮಾರು 750 ಪಾತ್ರಗಳ ಕಿರುನೋಟ

ಶ್ರೀಕೃಷ್ಣಕಥಾಸಾರಸಂಗ್ರಹ

ಪಂಚಪಾಂಡವರ, ಆ ಕಾಲದ ವಿಶೇಷಗಳ ಪರಿಚಯ

ಸೂರ್ಯ-ಚಂದ್ರ ವಂಶಾವಳಿ

ಮಹಾಭಾರತ ಪರ್ವ ಆದ್ಯಂತ ಶ್ಲೋಕಗಳು

ಇತ್ಯಾದಿ ಇತ್ಯಾದಿ..........

ಪ್ರಕಾಶನ :

ಶ್ರೀಮಾಧ್ವಗ್ರಂಥ ಪ್ರಕಾಶನ

ಬೆಂಗಳೂರು - 560 026

**! ತಿಳಿದಿರೋಣ ! ಭಾಗ - 2**

ಮಹಾಭಾರತ, ರಾಮಾಯಣಗಳಲ್ಲಿಯ ಪಾತ್ರಕೋಶ ಹಾಗೂ ಸಂಬಂಧಿಸಿದ ಮಾಹಿತಿಗಳು
(ವಿನೂತನ ಶೈಲಿಯಲ್ಲಿ ಸಂಗ್ರಹಿತ ಮಾಹಿತಿ ಕೋಶ)

ಸಂಗ್ರಹ ಹಾಗೂ ಸಂಪಾದನೆ :

**– ಎ.ಬಿ. ಶ್ಯಾಮಾಚಾರ್ಯ,**

**B.Tech, FTC, DBM, DSQC, MA**

ಮೊದಲ ಮುದ್ರಣ : 2015

ಪ್ರತಿಗಳು : 2000

ಪುಟಗಳು : xvi + 228

**ಬೆಲೆ : ರೂ. 100/-**

ಮುಖಪುಟ : ಶ್ರೀ ಕೆ.ಎಂ. ಶೇಷಗಿರಿ

ಅಕ್ಷರ ಜೋಡಣೆ : ತುಲಸಿ ಇಂಪ್ರೆಷನ್ಸ್

ಮುದ್ರಣ : ವಾಗರ್ಥ ಮುದ್ರಣಾಲಯ

ಪ್ರಕಾಶನ :
**ಶ್ರೀಮಾಧ್ವಗ್ರಂಥಪ್ರಕಾಶನ**
ಬೆಂಗಳೂರು - 560 026.
ಫೋನ್ ನಂ. 080-26754221

ಪುಸ್ತಕಗಳು ಲಭ್ಯ ಸ್ಥಳ
**ಎ.ಎಸ್. ವಿಜಯ ಸಾರಥಿ**
36, ಈಶಾವಾಸ್ಯ, 11ನೇ ಅಡ್ಡರಸ್ತೆ
17ನೇ ಮುಖ್ಯರಸ್ತೆ, ಮುನೇಶ್ವರಬ್ಲಾಕ್
ಬೆಂಗಳೂರು-560 026

# ಮಹಾಭಾರತದ ಮಹತ್ವ

**ನಾರಾಯಣಂ ನಮುಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥**

ಶ್ರೀಮನ್ಮಹಾಭಾರತ ಒಂದು ಸರ್ವೋತ್ತಮ ಶಾಸ್ತ್ರ. ಸರ್ವೋತ್ತಮರಾದ ಶ್ರೀವೇದವ್ಯಾಸರೆ 'ಭಾರತಂ ಸರ್ವಶಾಸ್ತ್ರಾಣಾಂ ಉತ್ತಮಮ್' ಎಂದು, ಅವರಿಂದಲೇ ರಚಿತವಾಗಿ ಸರ್ವಪಾಪ ಪರಿಹಾರಕವಾಗಿ ಎಲ್ಲವನ್ನೂ ನೀಡುವದರಿಂದ ಇದಕ್ಕೆ ಸರಿಸಮಾನವಾದ ಮತ್ತೊಂದು ಶಾಸ್ತ್ರ ಇಲ್ಲವೆಂಬುದು ಇದರ ಮಹತ್ವ.

**ಮಹತ್ವಾತ್ ಭಾರವತ್ವಾಚ್ಚ ಮಹಾಭಾರತ ಮುಚ್ಯತೇ ।**
**ನಿರುಕ್ತಂ ಅಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥**

ಮಹಾಭಾರತದಲ್ಲಿ ಮಹಾವಿಷ್ಣುವಿನ ಅವತಾರನಾದ ಶ್ರೀಕೃಷ್ಣನ ಸರ್ವೋತ್ತಮತ್ವ ಹಾಗೂ ವಾಯುದೇವರ ಅವತಾರರಾದ ಭೀಮಸೇನನ ಜೀವೋತ್ತಮತ್ವ ವ್ಯಾಪಕವಾಗಿ ಪ್ರತಿಪಾದಿತವಾಗಿದೆ. ಈ ಮಹಾಭಾರತಕ್ಕೆ 'ಜಯ' ಎಂಬ ಹೆಸರಿದೆ. ಜಯರೆನಿಸಿದ ಶ್ರೀಕೃಷ್ಣಭೀಮರ ದಿಗ್ವಿಜಯದ ಕಥೆಯಾಗಿ ಮತ್ತು ಈ ಗ್ರಂಥವು ಸರ್ವರಿಗೂ ಸರ್ವರೀತಿಯಲ್ಲಿ ಜಯ ಕೊಡುವಲ್ಲಿ, ಚತುರ್ವಿಧ ಪುರುಷಾರ್ಥ ಸಿದ್ಧಿಸುವಲ್ಲಿ ಅದ್ವಿತೀಯ ಎನಿಸಿದೆ.

**ಜಯೋನಾಮ ಇತಿಹಾಸೋಽಯಂ ಶ್ರೋತವ್ಯೋ ವಿಜಗೀಷುಣಾ ।**
**ಚತುರ್ಣಾಂ ಪುರುಷಾರ್ಥಾನಾಂ ಅಪಿ ಹೇತೌ ಜಯೋಽಸ್ತ್ರಿಯಾಮ್ ॥**

ಈ ಗ್ರಂಥಕ್ಕೆ 'ಭಾರತಂ ಪಂಚಮೋವೇದಃ' ಎಂಬ ಹೆಗ್ಗಳಿಕೆಯಿದೆ. ಅಲ್ಲದೆ ಇದು ಎಲ್ಲ ವೇದಗಳಿಗಿಂತಲೂ ಮಿಗಿಲಾದ ಆಗಮವಾಗಿ ಅತಿಕಡಿಮೆ ಎಂದರೆ ಹತ್ತು ಅರ್ಥಗಳಿಂದ ಕೂಡಿದ್ದಾಗಿದೆ. ಇದನ್ನೇ ಶ್ರೀಮದಾಚಾರ್ಯರು '**ತ್ರ್ಯರ್ಥತಾಂಶ್ರುತಿಷು ವಿತ್ತ ದಶಾರ್ಥಂ ಭಾರತಂ ನನು ಶತಾರ್ಥಮಪಿ ಸ್ಯಾದ್ವೈಷ್ಣವಂ ಪದಸಹಸ್ರತಯುಂ ಹಿ ।**' ಎಂದು ಹೇಳಿರುವುದೇ ಪ್ರಮಾಣವಾಗಿದೆ. ಈ ಇತಿಹಾಸವು ಒಂದು ಲಕ್ಷ ಶ್ಲೋಕಾತ್ಮಕವಾಗಿ ಜಗತ್ತಿನಲ್ಲಿ ಗಾತ್ರ ಹಾಗೂ ಸತ್ವದಲ್ಲಿ ಅತಿ ಶ್ರೇಷ್ಠ ಗ್ರಂಥವಾಗಿ ರಾರಾಜಿಸಿದೆ. ಇಂತಹ ಬೃಹದ್ಗ್ರಂಥದಲ್ಲಿ ಇಲ್ಲದ್ದು ಬೇರೆಲ್ಲೂ ಇರದು. ಜೊತೆಗೆ ಇತರ ಎಲ್ಲ ಆಧ್ಯಾತ್ಮಿಕ ಗ್ರಂಥಗಳು ಇದರಿಂದ ಉಪಜೀವ್ಯವಾಗಿ ಹಾಗೂ ಇಲ್ಲಿ ಅಡಕವಾಗಿರುವ ಅಮೂಲ್ಯ ತತ್ತ್ವಭರಿತ ಶಾಸ್ತ್ರನಿಧಿಗಳು ಅನೇಕವಿದೆ. ಮುಖ್ಯವಾಗಿ ಭಗವದ್ಗೀತಾ ಹಾಗೂ ವಿಷ್ಣುಸಹಸ್ರನಾಮ. ಆದಕ್ಕೆಂದು

**ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ ।**
**ವಿಷ್ಣೋಃ ಸಹಸ್ರನಾಮಾಪಿ ಜ್ಞೇಯಂ ಪಾಠ್ಯಂ ಚ ತದ್ವಯಮ್ ॥**

ಮಹಾಭಾರತದ ವಿಶೇಷವಾಗಿ ಗೀತೆಯ ಬಗ್ಗೆ ಹೇಳುವಾಗ ಅದರ ಮಹತ್ವ ಹೀಗಿದೆ. ಇದರ ಪಠಣ ಪಾಠನಾದಿಗಳು ಎಷ್ಟೇ ಅಲ್ಪವಾದರೂ ಎಲ್ಲವನ್ನೂ ಕೊಡಬಲ್ಲದು.

**ಶ್ಲೋಕಮೇಕಂ ತದರ್ಧಂ ವಾ ಪಾದಂ ಪಾದಾರ್ಧಮೇವ ವಾ ।**
**ನಿತ್ಯಂ ಪಠತಿ ಭಕ್ತ್ಯಾ ಯಃ ಸ ಮೋಕ್ಷಮಧಿಗಚ್ಛತಿ ॥**

ಅಪೌರುಷೇಯವಾದ ವೇದರಾಶಿಯ ಆಂತರ್ಯವನ್ನರಿಯಲು ಮಹಾಭಾರತ ಒಂದೇ ಪ್ರಧಾನವಾದ ಆಕರ ಗ್ರಂಥ. ವೇದರಹಸ್ಯಗಳನ್ನು, ತತ್ತ್ವಗಳನ್ನು ಸದೃಷ್ಟಾಂತಿಕವಾಗಿ ನಿರೂಪಿಸಿರುವ ಗ್ರಂಥರಾಜ ಇದಾಗಿದೆ. ಇಲ್ಲಿಯ ಕಥಾನಕ, ಆಖ್ಯಾನಗಳ, ಅನೇಕ ಪ್ರಸಂಗಗಳಿಂದ ಶಾಸ್ತ್ರಗಳಲ್ಲಿ ನಿರೂಪಿತ ತತ್ತ್ವಗಳ ಮಥಿತಾರ್ಥಗಳನ್ನು ತಿಳಿಯಬಹುದಾಗಿದೆ. ಇಂತಹ ಅದ್ಭುತವಾದ ವೇದ ವ್ಯಾಸ ಪ್ರಣೀತ ಮಹಾಭಾರತವು ಮೂರು ಭಾಷೆಗಳಿಂದ ಕೂಡಿದ್ದಾಗಿದೆ. ದರ್ಶನ, ಗುಹ್ಯ ಹಾಗೂ ಸಮಾಧಿ ಎಂಬ ಭಾಷಾತ್ರೈವಿಧ್ಯಮಯವಾಗಿ ವಿಜೃಂಭಿಸಿದೆ. ಇದು ವೇದವ್ಯಾಸರದ್ದೆ ಆದ ಅಸಾಮಾನ್ಯ ಚಾತುರ್ಯ, ಅದಕ್ಕೆ ಈ ಮಹಾಭಾರತವು ಸೀಮಾತೀತವಾಗಿ ಪಾರಾವಾರ ಎಂದೆನಿಸಿದೆ. ದೀರ್ಘಕಾಲದ ಧಾರಾಕಾರ ಮಳೆಯ ಹನಿಗಳ ಎಣಿಕೆ, ಅನಂತಕಾಲದಿಂದ ಸಾಗುತ್ತಿರುವ ಸಮುದ್ರಗಳ ಅಲೆಗಳ ಎಣಿಕೆ ಹೇಗೆ ಅಸಾಧ್ಯವೋ ಅದಕ್ಕೂ ಮೀರಿನಿಂತಿರುವುದು ಮಹಾಭಾರತದಲ್ಲಿಯ ತತ್ತ್ವಾಂಶಗಳ ಎಣಿಕೆ. ಅಂದರೆ ಅಗಣಿತ ಮಣಿಗಳ ಗಣಿ ಈ ಗ್ರಂಥವಾಗಿದೆ.

ಮಹಾಭಾತರದ ಸಾರಸರ್ವಸ್ವ ಶ್ರೀಕೃಷ್ಣ ಗ್ರಂಥದ ಪ್ರತಿಪಾದ್ಯ ದೇವತೆಯಾಗಿ, ಕುರು ಪಾಂಡವರ ಕಥೆಯ ಸೂತ್ರಧಾರನಾಗಿ ಗ್ರಂಥದಲ್ಲಿ ಓತಪ್ರೋತವಾಗಿ ತುಂಬಿರುವನು. ಗೀತೆಯಲ್ಲಿ 'ಪರಿತ್ರಾಣಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ' ಎಂದಂತೆ ಧರ್ಮ ಸಂಸ್ಥಾಪನಾರ್ಥವಾಗಿ ಬಂದು, ಅವನ ಮಾತಿನ ಔನ್ನತ್ಯವನ್ನು ಸತ್ಯವನ್ನಾಗಿಸಿ, ಹಂತ ಹಂತದಲ್ಲೂ ನಿದರ್ಶನಗಳ ಮೂಲಕ ಸಮರ್ಥಿಸಿರುವುದನ್ನು ಮಹಾಭಾರತದುದ್ದಕ್ಕೂ ಕಾಣಬಹುದು. ಹೀಗಾಗಿ ಮಹಾಭಾರತ ಪ್ರತಿಯೊಬ್ಬನ ಜೀವನಾಡಿಯಾಗಿದೆ. ಜೀವನಾದರ್ಶವಾಗಿ ಸಾರ್ವದೇಶಿಕ ಸಾರ್ವಕಾಲಿಕ ಸತ್ಯವಾಗಿ ಸರ್ವರ ಆದರಣೀಯ ಭಜನೀಯ ಉಪಾಸನೀಯ ಉತ್ಕೃಷ್ಟ ಗ್ರಂಥರಾಜವಾಗಿದೆ. ಅದಕ್ಕೆ ಅಂದದ್ದು

**ಯದಿ ಹಸ್ತಿ ತದನ್ಯತ್ರ ತನ್ನೇ ಹಾಸ್ತಿ ನ ಚ ಕ್ವಚಿತ್ ।** ಎಂದು

"ಜಯೋ ನಾಮೇತಿಹಾಸೋಽಯಂ...." ಎಂದು ಹೇಳುವಾಗ ಇತಿಹಾಸವೆಂಬುದಕ್ಕೆ ಕಾವ್ಯ ಮೀಮಾಂಸಾದಲ್ಲಿ

**ಧರ್ಮಾರ್ಥಕಾಮಮೋಕ್ಷಾಣಾಮುಪದೇಶ ಸಮನ್ವಿತಮ್ ।**
**ಪೂರ್ವವೃತ್ತ ಕಥಾಯುಕ್ತ ಮಿತಿಹಾಸಂ ಪ್ರಚಕ್ಷತೇ ॥**

ಹೀಗೆ ಹೇಳಿ ಇದೇ 'ಜಯ' ಎಂದು ಕರೆಸಿಕೊಂಡು ಅತ್ಯುತ್ಕೃಷ್ಟ ಗ್ರಂಥರಾಜವೆಂದೆನಿಸಿ ಕಾರಣದಿಂದಾಗಿ 'ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ವೇದಕ್ಕೆ ಸಮಾ ಎಲ್ಲವನ್ನೂ ಒಳಗೊಂಡದ್ದಾಗಿ ಅತ್ಯುತ್ತಮ ಸಾಧನವೆನಿಸಿದೆ.

ಮಹಾಭಾರತ ಶ್ರವಣ, ಅಧ್ಯಯಾನಾದಿಗಳಿಂದ ಫಲವನ್ನೂ ವೇದವ್ಯಾಸರೇ ಹೇಳಿರ ಹೀಗಿದೆ.

ಶೃಣೋತಿ ಶ್ರಾವಯೇದ್ವಾಪಿ ಸತತಂ ಚೈವ ಯೋ ನರಃ।
ಸರ್ವಪಾಪವಿನಿರ್ಮುಕ್ತೋ ವೈಷ್ಣವಂ ಪದಮಾಪ್ನುಯಾತ್ ॥

ಮಹಾಭಾರತವನ್ನು ಕೇಳುವ ಹೇಳುವವನು ಸಮಸ್ತ ಪಾಪಗಳಿಂದ ಬಿಡುಗಡೆ ಹ ಮಹಾವಿಷ್ಣುವಿನ ಅನುಗ್ರಹದಿ ಪರಮಪದವಾದ ಮೋಕ್ಷವನ್ನೇ ಹೊಂದುವನು. ಮುಖ್ಯಕಾರಣವನ್ನು ವೇದವ್ಯಾಸರೇ ಹೇಳಿದಂತೆ,

ವೇದೇ ರಾಮಾಯಣೇ ಪುಣ್ಯೇ ಭಾರತೇ ಭರತರ್ಷಭ।
ಆದೌ ಚಾನ್ತೇ ಚ ಮಧ್ಯೇ ಚ ಹರಿಃ ಸರ್ವತ್ರ ಗೀಯತೇ'

ಮಹಾಭಾರತ ವಿಷ್ಣುಮಯವಾದದ್ದು.

ಈ ಮಹಾಭಾರತದಲ್ಲಿ ವೇದವ್ಯಾಸರು ಏನನ್ನು ಹೇಳಿರುವರೆಂಬುದಕ್ಕೆ ಸಂಗ್ರಹವಾಗಿ,

ಧರ್ಮಶಾಸ್ತ್ರಮಿದಂ ಪುಣ್ಯಮರ್ಥಶಾಸ್ತ್ರಮಿದಂ ಪರಮ್।
ಮೋಕ್ಷಶಾಸ್ತ್ರಮಿದಂ ಪ್ರೋಕ್ತಂ ವ್ಯಾಸೇನಾಮಿತಬುದ್ಧಿನಾ ॥

ಪುರುಷಾರ್ಥಬೋಧಕ ಹಾಗೂ ಪುಣ್ಯಪ್ರಾಪಕವಾದ ಗ್ರಂಥವೆಂದು ತಿಳಿಸಲ್ಪಟ್ಟಿದೆ. ಇ ಇನ್ನೊಂದು ಮಾತಿನಲ್ಲಿ ನೋಡುವುದಾದರೆ

ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ।
ಯದಿಹಾಸ್ತಿ ತದನ್ಯತ್ರ ಮನ್ನೇ ಹಾಸ್ತಿ ನ ಕುತ್ರಚಿತ್ ॥

ಇಲ್ಲಿಲ್ಲದ್ದು ಎಲ್ಲೂ ಇರದು. ಜೊತೆಗೆ ಎಲ್ಲವನ್ನೂ ಕೊಟ್ಟು ಅಂತ್ಯದಲ್ಲಿ ನಿತ್ಯ ಸುಖನೀಡ ಏಕೈಕ ಗ್ರಂಥ ಇದಾಗಿದೆ. ಲೌಕಿಕ ಹಾಗೂ ಅಲೌಕಿಕ ಸುಖವನ್ನು ನೀಡಬಲ್ಲ ಈ ಗ್ರಂಥದ ಶ್ರವ ಫಲವನ್ನು ಹೀಗೆ ಹೇಳಿದೆ,

ಯೋ ಗೋಶತಂ ಕನಕಶೃಙ್ಗಮಯಂ ದದಾತಿ
ವಿಪ್ರಾಯ ವೇದ ವಿದುಷೇ ಸುಬಹು ಶ್ರುತಾಯ।

**ಪುಣ್ಯಂ ಚ ಭಾರತ ಕಥಾಂ ಸತಂ ಶೃಣೋತಿ**
**ತುಲ್ಯಂ ಫಲಂ ಭವತಿ ತಸ್ಯ ಚ ತಸ್ಯ ಚೈವ ॥**

**ಅಷ್ಟಾದಶ ಪುರಾಣಾನಾಂ ಶ್ರವಣಧ್ಯತ್ಫಲಂ ಲಭೇತ್ ।**
**ತತ್ಫಲಂ ಸಮವಾಪ್ನೋತಿ ವೈಷ್ಣವೋ ನಾತ್ರ ಸಂಶಯಃ ॥**

ಇಂತಹ ಮಹಾಭಾರತ ಆಧ್ಯಾತ್ಮಮಯವಾದದ್ದು ಪ್ರತಿ ಪಾತ್ರಗಳು, ಪ್ರಸಂಗಗಳು,ಕಥೆಗಳು, ಉಪ ಕಥೆಗಳು, ಉಪದೇಶಗಳು ಏನೆಲ್ಲಾ ಉಲ್ಲೇಖಿಸಲ್ಪಟ್ಟಿವೆ, ಅವೆಲ್ಲವೂ ಪ್ರತಿ ಜೀವಿಗೂ ಉದ್ಬೋಧಕ, ಉದ್ಧಾರಕ. ಎಲ್ಲರೂ ತಿಳಿದಂತೆ ಜಗತ್ತಿನಲ್ಲಿ ಆಧ್ಯಾತ್ಮ ಕ್ಷೇತ್ರಕ್ಕೆ ಮಿಗಿಲಾದ ಸ್ಥಾನ ಇದಕ್ಕಿದೆ. ಇದಕ್ಕೆ ಕಾರಣ ವಿಸ್ತಾರವಾಗಿ ಬೆಳೆದ ತತ್ತ್ವಜ್ಞಾನದ ಚಿಂತನೆ. ಇದಕ್ಕೆ ಮೂಲವೇ ಮಹಾಭಾರತಾದಿ, ವೇದಾದಿ ಆಗಮಗಳು. ಇವು ಭಾರತವನ್ನು ಉತ್ತುಂಗ ಶಿಖರಕ್ಕೆ ತನ್ನ ಸಂಸ್ಕೃತಿ, ಪರಂಪರೆಯಿಂದ ಕೊಂಡೊಯ್ದಿದೆ. ಇಂದಿಗೂ ಭಾರತದ ಪ್ರತಿಯೊಬ್ಬ ಆ ಬಾಲವೃದ್ಧನೂ ರಾಮಾಯಣದ ಮಹಾಭಾರತದ, ಕೃಷ್ಣಕಥಾ, ಪಾಂಡವರಕಥಾ, ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ಕಿಂಚಿತ್ತಾದರೂ ತಿಳಿದೇ ಇರುತ್ತಾನೆ. ಇದು ಇಲ್ಲಿಯ ಸಂಸ್ಕೃತಿಯ ಇತಿಹಾಸ. ಇವು ಭಾರತೀಯರ ಜೀವಾಳ. ಎಲ್ಲರು ತಿಳಿದಂತೆ ಮಹಾಭಾರತ ಕೇವಲ ಪಾಂಡವರ ಕಥೆಯಲ್ಲ, ಇದು ಮಾನವ ಕುಲದ ಇತಿಹಾಸ, ಪ್ರತಿಯೊಬ್ಬರ ಬದುಕಿನ ಕನ್ನಡಿಯಾಗಿದೆ. ಹೀಗಾಗಿ ಶ್ರೀ ಮದಾಚಾರ್ಯರು ತಿಳಿಸಿದಂತೆ ಮಹಾಭಾರತ ಮೂರು ಅರ್ಥಗಳುಳ್ಳದ್ದಾಗಿದೆ. ಒಂದು ಶ್ರೀ ಕೃಷ್ಣನ ಕಥೆ, ಎರಡನೆಯದ್ದು ಕೃಷ್ಣಭಕ್ತರಾದ ಪಾಂಡವಾದಿಗಳ ಹಾಗೂ ಭಗವದ್ವೇಷಿಗಳಾದ ದುರ್ಯೋಧನಾದಿಗಳ ಧರ್ಮ ಅಧರ್ಮಗಳ ವಿಶ್ಲೇಷಣೆ, ಮೂರನೆಯದ್ದು ಮಹಾಭಾರತದ ಆಧ್ಯಾತ್ಮಿಕ ಅರ್ಥ. ಇವೆಲ್ಲವನ್ನೂ ವೇದವ್ಯಾಸರು ಜೊತೆ ಜೊತೆಯಾಗಿ ಹೆಣೆದಿದ್ದಾರೆ.

ಶ್ರೀಮದಾಚಾರ್ಯರು ಮಹಾಭಾರತದ ಅಂದಿನ ಸ್ಥಿತಿ-ಗತಿಗಳ ಬಗ್ಗೆ ಹೇಳುವ ಮುನ್ನ ಅನೇಕ ಪ್ರದೇಶಗಳಿಂದ ಮಹಾಭಾರತದ ಅನೇಕ ಪ್ರತಿಗಳನ್ನು ಸಂಗ್ರಹಿಸಿದ್ದರು. ಸಂಶೋಧಿಸಿ ಕಂಡುಕೊಂಡದ್ದನ್ನು ಉಲ್ಲೇಖಿಸಿದರು.

**ದೇಶೇದೇಶೇ ತಥಾ ಚೈವ ದೃಷ್ಟ್ವಾ ಗ್ರಂಥಾನ್ ಪೃಥಗ್ವಿಧಾನ್ ।**
**ಯಥಾ ಸ ಭಗವಾನ್ ವ್ಯಾಸಃ ಸಾಕ್ಷಾನ್ನಾರಾಯಣಃ ಪ್ರಭುಃ ।**
**ಜಗಾದ ಭಾರತಾದ್ಯೇಷು ತಥಾ ವಕ್ಷ್ಯೇತದೀಕ್ಷಯಾ ॥** -ಮ.ಭಾ.ತಾ.ನಿ.

ಅಸ್ತವ್ಯಸ್ತವಾಗಿದ್ದ ಗ್ರಂಥಗಳ ಸ್ಥಿತಿಯನ್ನು ಕಂಡು ಆಚಾರ್ಯ ಮಧ್ವರು ಪ್ರತಿಜ್ಞೆ ಮಾಡಿದರು. ಲಕ್ಷ ಗ್ರಂಥಾತ್ಮಕವಾದ ಗ್ರಂಥವನ್ನು ರಚಿಸಿದ ವೇದವ್ಯಾಸರ ಅಭಿಪ್ರಾಯವನ್ನೇ ತಿಳಿಸುವುದಾಗಿ. ಹೀಗಾಗಿ ದುರವಸ್ಥೆಯಾಗಿದ್ದ ಗ್ರಂಥವನ್ನು ಸುವ್ಯಸ್ಥೆ ಮಾಡಿದ ಕೀರುತಿ ಶ್ರೀಮದಾಚಾರ್ಯರಿಗೆ ಸಲ್ಲುತ್ತದೆ.

ಸಮಗ್ರ ಮಹಾಭಾರತ ಮೂರು ಭಾಷೆಗಳನ್ನೊಳಗೊಂಡಂತೆ ಅರ್ಥತ್ರಯಗಳಿಂದಲೂ ಕೂಡಿದೆ. ಈ ವಿಷಯವನ್ನು ಮಹಾಭಾರತವೇ ಹೀಗೆ ತೆರೆದಿಟ್ಟಿದೆ.

**ಮನ್ವಾದಿ ಕೇಚಿದ್ ಬ್ರುವತೇ ಹ್ಯಾಸ್ತಿಕಾದಿ ತಥಾ ಪರೇ ।**
**ತಥೋಪರಿಚರಾದ್ಯನ್ಯೇ ಭಾರತಂ ಪರಿಚಕ್ಷತೇ ॥**

ಮನ್ವಾದಿ, ಆಸ್ತಿಕಾದಿ ಹಾಗೂ ಉಪರಿಚರಾದಿ ಹೀಗೆ ಅರ್ಥತ್ರಯಗಳಿಂದೊಳಗೊಂಡಿದೆ. ಇಲ್ಲಿ ಮನ್ವಾದಿ ಎಂಬಲ್ಲಿ ಜೀವನದ ಮೌಲ್ಯಗಳು ಅಂದರೆ ಆಧ್ಯಾತ್ಮ ಪರವಾದದ್ದಾಗಿದೆ. ಪ್ರಧಾನವಾದ ಕುರುಪಾಂಡವರ ಕಥಾನಕಗಳು ಸಂಬಂಧಿಸಿದ ಅಂಶಗಳು ಹೀಗೆ ತಿಳಿಸಲ್ಪಡುವ ಭಾಗವು ಆಸ್ತಿಕಾದಿ ಎಂದೆನಿಸುತ್ತದೆ. ಧರ್ಮಾಧರ್ಮಗಳ ವಿವೇಚನೆ, ಸದ್ವೃತ್ತಿ ಅಸದ್ವೃತ್ತಿಗಳ ತುಮುಲ, ನೀತಿ-ಅನೀತಿ, ಸತ್ಯಾಸತ್ಯಗಳ ಪರಿಕಲ್ಪನೆಗಳ ಬಗ್ಗೆ ಚಿಂತನೆ-ಮಂಥನಗಳನ್ನೊಳಗೊಂಡಿದೆ. ಇನ್ನು ಉಪರಿಚರಾದಿಯಾಗಿ ಎಂಬುದು ಎಲ್ಲಕ್ಕೂ ಎಲ್ಲ ಕಾಲಕ್ಕೂ ಪರಮಶ್ರೇಷ್ಠನೆನಿಸಿದ ಸ್ವತಂತ್ರನಾದ ಭಗವಂತನ ಪರವಾಗಿ ಮಹಾಭಾರತ ನಿರೂಪಿತವಾಗಿದೆ. ಹೀಗೆಂದೆ ಈ ಮಹಾಭಾರತ ಶ್ರೀಕೃಷ್ಣಕಥೆಯೇ ಆಗಿದೆ. ಭಗವಂತನ ಗುಣರೂಪವಾದ ಅಪರೂಪದ ಗ್ರಂಥ. ವೇದಾರ್ಥ ನಿರ್ಣಾಯಕ ಗ್ರಂಥರಾಜ.

ಶ್ರೀಮದಾಚಾರ್ಯರು ವೇದವ್ಯಾಸರ ಹೃದಯವನ್ನು ವಿವಿಧ ಮುಖಗಳಿಂದ ವಿಶ್ಲೇಷಿಸಿ ಪ್ರತಿಬಿಂಬಿಸಿರುವರು. ಮಹಾಭಾರತದಲ್ಲಿ ಅಧ್ಯಾತ್ಮವು ಓತಪ್ರೋತವಾಗಿ ತುಂಬಿದೆ. ಅದಕ್ಕೆ **'ಏವಂ ಅಧ್ಯಾತ್ಮ ನಿಷ್ಠಂ ಹಿ ಭಾರತಂ ಸರ್ವಮುಚ್ಯತೇ'** ಎಂದು ನಿರ್ದೇಶಿಸಿದರು. ಆಧ್ಯಾತ್ಮವೆಂದರೆ ನಮ್ಮ ಶರೀರದ ಒಳಹೊರಗೆ, ಇಂದ್ರಿಯಗಳ ಹಾಗೂ ಅಂತಃಕರಣಗಳಲ್ಲಿ ನಡೆಯುವ ಧರ್ಮಾಧರ್ಮಗಳ, ಸತ್ ದುಷ್ಪ್ರವೃತ್ತಿಗಳ ಬಗ್ಗಿನ ದ್ವಂದ್ವ ಅಥವಾ ಗೊಂದಲ. ಇದು ಕುರುಪಾಂಡವರ, ಕಥಾನಕಗಳ ಪದರಗಳಲ್ಲಿ ಅಡಕವಾಗಿದೆ. ಇವು ನಮ್ಮ ನಿತ್ಯ ಜೀವನದಲ್ಲಿಯೂ ಹಾಸುಹೊಕ್ಕಾಗಿ ವ್ಯಾಪಿಸಿದೆ. ಅಂದರೆ ಮಹಾಭಾರತವು ಒಂದರ್ಥದಲ್ಲಿ ನಮ್ಮ ಜೀವನದ ಸಂಸಾರದ, ರಹಸ್ಯಗಳ ವಿಮರ್ಶೆ, ವಿಶ್ಲೇಷಣೆಯಾಗಿದೆ. ಅದಕ್ಕೆ ಮಹಾಭಾರತ ಒಂದು ಇತಿಹಾಸ ಮಾತ್ರವಾಗಿರದೆ ಸಾರ್ವಜನಿಕ ಸಾರ್ವಕಾಲಿಕ ಮಹದ್ಗ್ರಂಥ ಸಾರ್ವಭೌಮ ಎಂದೆನಿಸಿದೆ.

ವಿಶ್ವಕೋಶವೆಂದೆ ಕರೆಯಲಾದ ಮಹಾಭಾರತದಲ್ಲಿ ಇಲ್ಲದ್ದು ಬೇರೆಲ್ಲೂ ಇರದು ಎಂದು ಹೇಳಿಯಾಗಿದೆ. ಅದಕ್ಕೆ ಹುಟ್ಟಿದ ಮನುಷ್ಯ ತಿಳಿಯಲು ಅಧಿಕಾರಿಯಾದರೂ ಮುಗಿಸಲಾಗದ ಅಲ್ಪಜ್ಞನಾಗುವ. ಈ ಗ್ರಂಥದಲ್ಲಿ ಅಡಕವಾದ ಆಖ್ಯಾಯಿಕೆಗಳು, ಉಪಕಥೆಗಳು, ಪ್ರಾಸಂಗಿಕ ಸಂವಾದಗಳು, ಉಪಾಖ್ಯಾನಗಳು, ಉಪದೇಶಾಂಶಗಳು, ಓದಿ ತಿಳಿಯಲು ಸುಲಭ ಸಾಧ್ಯವಲ್ಲದ್ದು. ಕಾರಣ ಈ ಗ್ರಂಥದ ಆಳ-ವಿಸ್ತಾರ ಅಗಾಧವಾದದ್ದರಿಂದ ಇದೊಂದು ಮಹಾಕಾವ್ಯವಾಗಿ, ಇತಿಹಾಸ-ಪುರಾಣವೆನಿಸಿ, ಭಾರತೀಯರ ಜೀವನಾಡಿಯಾಗಿ, ಸಂಸ್ಕೃತಿ-ಪರಂಪರೆಯ

ದರ್ಶನವೆನಿಸಿ, ಧರ್ಮಾಧರ್ಮಗಳ ಸಂಘರ್ಷದ ಪ್ರತೀಕವಾಗಿ ಅಂದಿನಿಂದ ಇಂದಿಗೂ ಮುಂದೂ ಜನಮನಗಳಲ್ಲಿ ಹಾಸುಹೊಕ್ಕಾಗಿ ನಿಂತಿದೆ. ಮೇಲ್ನೋಟಕ್ಕೆ ಕುರು–ಪಾಂಡವರ ಅಂದರೆ ಅಣ್ಣತಮ್ಮಂದಿರು ಆಸ್ತಿಗಾಗಿ ಬಡದಾಡಿದ ಒಂದು ಕಥೆ ಎಂದು ಅನಿಸಿದರೂ, ಒಳಹೊಕ್ಕಿ ವಿವೇಚಿಸಿದಲ್ಲಿ ಯಾರಿಗೂ ಇರದ ವೈವಿಧ್ಯತೆ, ತಾತ್ತ್ವಿಕ ವಿಚಾರಧಾರೆ ತಿಳಿಯದಿರದು. ಶ್ರೀಮದಾಚಾರ್ಯರು ತಿಳಿಸಿದಂತೆ ಮಹಾಭಾರತ ಒಂದು ಅಧ್ಯಾತ್ಮಮಯ. ಸಕಲವಿದ್ಯಾಸಾಗರ. ಧರ್ಮಾರ್ಥಕಾಮಮೋಕ್ಷ ಏಕತ್ರ ಸಾಧಿಸಬಲ್ಲ ತವನಿಧಿ ಇದಾಗಿದೆ.

ಈ ಹಿನ್ನೆಲೆಯಲ್ಲಿ ಮಹಾಭಾರತದ ಪಾತ್ರಪ್ರಪಂಚವನ್ನು ಗಮನಿಸಿದಲ್ಲಿ ನಿಬಿಡವಾದ ವಿಚಾರಧಾರೆ ಹರಿದು ಬರುತ್ತದೆ. ಇಲ್ಲಿಯ ಒಂದೊಂದು ಪಾತ್ರಗಳು, ಘಟನೆಗಳು, ಪ್ರಸಂಗಗಳು, ಕಾರ್ಯಗಳು ಉದ್ಬೋದಕ, ವೈಶಿಷ್ಟ್ಯಪೂರ್ಣ, ಅನಂತಾರ್ಥಗರ್ಭಿತ. ಈ ಗ್ರಂಥಕ್ಕೆ ಮುಖ್ಯಾಧಿ ಕಾರಿಗಳು ದೇವತೆಗಳೇ. ಯಥಾ ಯೋಗ್ಯವಾಗಿ ಮನುಷ್ಯರು ತಿಳಿಯಲು ಪ್ರಯತ್ನಿಸಬಹುದಾಗಿದೆ. ಒಟ್ಟಿನಲ್ಲಿ ಮಹಾಭಾರತದ ಫಲಶ್ರುತಿ ಎಂದರೆ ಭಾರತಯುದ್ಧದ ನಂತರ ಸಿಕ್ಕ ಜಯ. ಕಾರಣ ಈ ಯುದ್ಧ ನಿರ್ಣಾಯಕ ಯುದ್ಧವಾಗಿತ್ತು. ಧರ್ಮಾಧರ್ಮಗಳ ನಿರ್ಧಾರಿತವಾದ ಅಂತಿಮ ತೀರ್ಪಾಗಿತ್ತು. ಈ ಕೊನೆಯ ಯುದ್ಧದಲ್ಲಿ ಜೀವತ್ರಯರ ಪಾತ್ರವೂ ಇದ್ದದ್ದು ಖಚಿತ. ಪಾಂಡವರ ಕಡೆ ಒಬ್ಬ ಅಸುರನೂ ಇಲ್ಲದೆ ಸಾತ್ವಿಕರಾಜಸರ ಪರಿವಾರವಾಗಿದ್ದರೆ, ಕೌರವರ ಕಡೆ ಅಸುರರೇ ವಿಪುಲವಾಗಿದ್ದರು ಮಹಾಸಾತ್ವಿಕರೂ ಭಾಗವಹಿಸಿದ್ದುದು ಗಮನಾರ್ಹವಾಗಿತ್ತು. ಭೀಷ್ಮದ್ರೋಣ ಕೃಪ ಅಶ್ವತ್ಥಾಮ ಕರ್ಣಾದಿಗಳು ಸೋತ್ತಮರು. ಆದರೆ ಈ ಯುದ್ಧದ ಸೂತ್ರಧಾರಿಯಾದ ಶ್ರೀಕೃಷ್ಣ ನಿಷ್ಪಕ್ಷಪಾತಿಯಾಗಿ ದುಷ್ಟರ ಸಂಗದವರನ್ನೂ ಶಿಕ್ಷಿಸಿ ಧರ್ಮಕ್ಕೆ ಸಾತ್ವಿಕತೆಗೆ ಜಯವನ್ನು ಕೊಡಿಸಿದ.

ಮಹಾಭಾರತದಲ್ಲಿ ಬಂದ ಪಾತ್ರಗಳು ವಿಶಿಷ್ಟಪೂರ್ಣ ಹಾಗೂ ವೈವಿಧ್ಯಮಯ. ಒಂದೊಂದು ಪಾತ್ರಕ್ಕೂ ತನ್ನದೇ ಆದ ಗುಣ ಹೊಂದಿದ್ದು ಚಿಂತನಾರ್ಹವಾಗಿವೆ. ಶ್ರೀಮದಾಚಾರ್ಯರು ನಿರೂಪಿಸಿರುವಂತೆ 'ಏವಂ ಅಧ್ಯಾತ್ಮನಿಷ್ಠಂ ಹಿ ಭಾರತಂ ಸರ್ವಮುಚ್ಯತೇ' ಎಲ್ಲವನ್ನೂ ಒಳಗೊಂಡಿವೆ. ಇಲ್ಲಿ ಸಾತ್ವಿಕ–ರಾಜಸ–ತಾಮಸ ಗುಣಗಳ ಅಭಿವ್ಯಕ್ತಿ ಕಾಣಬಹುದು. ಹೀಗಾಗಿ ಅಂದಿನ–ಇಂದಿನ–ಮುಂದಿನ ಜೀವರಾಶಿಗೆ ಚಿಂತನಾರ್ಹ ವಿಷಯವಾಗಿದೆ. ಅದಕ್ಕೆ ಈ ಗ್ರಂಥ ಸಾರ್ವಕಾಲಿಕ ಹಾಗೂ ಸಾರ್ವಜನಿಕವಾಗಿ ಜನಮನಗಳಲ್ಲಿ ಅಚ್ಚಾಗಿ ನಿಂತಿದೆ. ಉದಾಹರಣೆಗೆ ಕೆಲ ಮುಖ್ಯ ಪಾತ್ರಗಳನ್ನು ಸ್ಥೂಲವಾಗಿ ನೋಡುವ ಪ್ರಯತ್ನ ಇಲ್ಲಿದೆ.

ಶ್ರೀವೇದವ್ಯಾಸರ ಮತ್ತೊಂದು ರೂಪವಾದ ಶ್ರೀಕೃಷ್ಣ ಒಂದು ಪರಮಾದ್ಭುತ. ಮಹಾಭಾರತದ ಸೂತ್ರಧಾರಿ. ಎಲ್ಲ ಲೀಲೆಗಳೂ ಶಿಷ್ಟರಕ್ಷಣೆ ದುಷ್ಟವಿನಾಶಕ್ಕಾಗಿ ಮೀಸಲಾದದ್ದು. ಆಪ್ತ ಕಾಮನೆನಿಸಿದ ಭಗವಂತ ಎಲ್ಲರ ಕಾಮನೆಗಳನ್ನು ಅವರವರ ಯೋಗ್ಯತಾನುಸಾರ ಪೂರೈಸಿ ಅದಕ್ಕನುಗುಣವಾದ

ಫಲಗಳನ್ನು ನೀಡಿದ. ಪಿತಾಮಹರೆಂದೆನಿಸಿದ್ದ ಭೀಷ್ಮರ ಜೀವನ ತ್ಯಾಗಮಯವಾದದ್ದು. ತಂದೆಯ ಬಯಕೆಯನ್ನು ಪೂರೈಸಲು ಎಲ್ಲವನ್ನೂ ತ್ಯಜಿಸಿದರು. ಅವರ ಭೀಷ್ಮಪ್ರತಿಜ್ಞೆ, ಸಾಗಿಸಿದ ದೀರ್ಘ ಜೀವನ, ಅನಿವಾರ್ಯವಾಗಿ ಮಹಾಯುದ್ಧದಲ್ಲಿ ಭಾಗಿತ್ವ ಎಲ್ಲವೂ ವಿಸ್ಮಯವೆ. ಕೃಷ್ಣನಿಗೆ ಅಗ್ರಪೂಜೆಯೆಂದು ಪ್ರತಿಪಾದಿಸಿದ. ಕಡೆಗೆ ತನ್ನ ತಪ್ಪಿಗಾಗಿ ಪಶ್ಚಾತ್ತಾಪಪಟ್ಟು ತತ್ತ್ವಾಂಶಗಳ ಉಪದೇಶವನ್ನು ಶರಶಯ್ಯಾದಿಂದ ನೀಡಿದ. ದ್ರೋಣರು ದೇವಗುರುಗಳ ಅವತಾರ. ಶಿಲೋಂಛವೃತ್ತಿಯಲ್ಲಿದ್ದ ಮಹನೀಯರು. ಮಗುವಿಗೆ ಹಾಲಿಗೆಂದು ಹೋಗಿ ದ್ರುಪದನ ಮೇಲೆ ಸೇಡುತೀರಿಸಲು ಮುಂದಾದರು. ದುರ್ಯೋಧನ ದುಷ್ಟನೆಂದು ತಿಳಿದಿದ್ದರೂ ಅವನ ಪರವಾಗಿ ಯುದ್ಧಕ್ಕೆ ನಿಂತರು. ಇವರನ್ನೇ ಅನುಸರಿಸಿದ ಕೃಪಾಚಾರ್ಯರೂ ಮಾಡಿದ್ದು ಇಷ್ಟೆ. ರುದ್ರದೇವರ ಅವತಾರರೇ ಆದ ಅಶ್ವತ್ಥಾಮಾಚಾರ್ಯರೂ ಕಲಿಗೆ ವಶರಾದರು. ಸಾತ್ವಿಕರಿಂದ ದೂರಾದರು. ಕಡೆಗೆ ಪಾಂಡವ ವಂಶ ನಿರ್ವಂಶ ಮಾಡಲು ಹೊರಟು ಶಿಕ್ಷೆಗೆ ಗುರಿಯಾದರು. ಇನ್ನು ಕರ್ಣ ಸೂರ್ಯಾಂಶ. ಎಲ್ಲರಿಗೂ ಬೆಳಕನ್ನು ಕೊಡುವವನು ಕತ್ತಲೆ ಸ್ವರೂಪನಾದ ದುರ್ಯೋಧನನ ಪರ ನಿಂತರು. ಕುರುಡನೇ ಆದ ಧೃತರಾಷ್ಟ್ರ ಮಗನ ಮೇಲಿನ ವ್ಯಾಮೋಹದಿಂದ ಎಲ್ಲ ಅಕಾರ್ಯಗಳಿಗೆ ಮೂಲನಾದ. ಈ ಎಲ್ಲರೂ ದ್ರೌಪದಿಗಾದ ವಸ್ತ್ರಾಪಹರಣ ಸಂದರ್ಭದಲ್ಲಿ ಮೌನವಹಿಸಿದ್ದೆ ಎಲ್ಲರ ವಿನಾಶಕ್ಕೆ ಕಾರಣವಾಯ್ತು. ಈ ಗುಂಪಿನಲ್ಲಿ ಅಪವಾದ ಪುರುಷ ಎಂತಿದ್ದವನು ವಿದುರ. ಹುಟ್ಟಿನಿಂದ ಧರ್ಮಕ್ಕಾಗಿ ಹೋರಾಡಿದ ಧೀಮಂತ. ಹುಟ್ಟು ಶೂದ್ರನಾದರೂ ಗುಣದಲ್ಲಿ ಶ್ರೇಷ್ಠನೆನಿಸಿದ. ಅದಕ್ಕೆ ಶ್ರೀಕೃಷ್ಣ ಇವನಿದ್ದಲ್ಲಿಗೆ ಹೋದ. ದುರ್ಯೋಧನ ಕಲಿಯ ಸ್ವರೂಪನಾದರೆ, ಇವನ ಸೋದರರು ದುಷ್ಟರು, ಧರ್ಮನಾಶಪಡಿಸಲೆಂದೆ ಹುಟ್ಟಿದವರು, ಕಡೆಗೆ ಎಲ್ಲರೂ ಸಪರಿವಾರರಾಗಿ ಸರ್ವನಾಶ ಹೊಂದಿದರು.

ಪಾಂಡವರು ಹಾಗೂ ಇವರ ಪರಿವಾರ ಸಾತ್ವಿಕತೆಗೆ ಹೆಸರಾದವರು. ಧರ್ಮಕ್ಕಾಗಿ ಹೋರಾಡಿದವರು. ಇವರ ಉತ್ತಮ ಗುಣಗಳಿಂದಾಗಿ ಕಡೆಯವರೆಗೂ ಇವರನ್ನು ಕೃಷ್ಣ ಕಾಪಾಡಿದ. ಧರ್ಮಜ ಹೆಸರಿಗೆ ತಕ್ಕಂತಿದ್ದ. ಜನನದಿಂದ ಸ್ವರ್ಗಾರೋಹಣದವರೆಗೂ ಧರ್ಮರತನಾಗಿ, ಧರ್ಮ ಮೂರ್ತಿಯಾಗಿ ಧರ್ಮದಿಂದ ರಾಜ್ಯಪಾಲನೆ ಮಾಡಿದ ಪುಣ್ಯಾತ್ಮ. ವಾಯುದೇವರ ದ್ವಿತೀಯಾವತಾರಿಯಾದ ಭೀಮಸೇನ ಜ್ಞಾನ-ಬಲ ಜ್ಯೇಷ್ಠನೆನಿಸಿದ. ದುರ್ಯೋಧನಾದಿ ಅಸುರ ಸಮೂಹವನ್ನು ಸಂಹರಿಸಿ ಲೋಕಕಲ್ಯಾಣದಲ್ಲಿ ಪ್ರಧಾನಪಾತ್ರವಹಿಸಿದ್ದು ಭೀಮಸೇನ. ಶ್ರೀಕೃಷ್ಣನ ಮನವರಿತು ಅದರಂತೆ ನಡೆದವನು ಇವನೊಬ್ಬನೆ. ಮಹಾಯುದ್ಧದಲ್ಲಿ ಸಿಂಹಪಾಲು ಇವನದ್ದಾಗಿತ್ತು. ಅರ್ಜುನ ಇಂದ್ರಾವತಾರಿ. ಕೃಷ್ಣನ ಸಂಬಂಧಿಯಾಗಿ ಅವನಿಂದ ದಿವ್ಯೋಪದೇಶ ಪಡೆದ ಧನ್ಯಾತ್ಮ. ಇವನ ವಂಶವೇ ಮುಂದುವರೆಯಿತು. ಈ ಅಣ್ಣಂದಿರನ್ನು ಸರ್ವಾತ್ಮನಾ ಅನುಸರಿಸಿದವರು ನಕುಲ ಸಹದೇವರು. ದ್ರೌಪದಿ ಭೀಮನ ನಿಜಮಡದಿ ಎಂದು ಕಡೆಗೆ ನಿರ್ಣಯವಾಯಿತು. ಅಯೋನಿಜೆಯಾದ ದ್ರೌಪದಿ ಬೆಂಕಿಯಿಂದ ಎದ್ದು ಬಂದ ಅಪ್ಪಟ ಬಂಗಾರ. ಕೃಷ್ಣ ಭೀಮರ

ಕಾರ್ಯಗಳಿಗೆ ಪೂರಕಳಾಗಿ ಅವತರಿಸಿ ಬಂದ ಭಾರತೀದೇವಿ. ಕುಂತಿ ನಿಜಾರ್ಥದಲ್ಲಿ ಮಹಾತಾಯಿ. ಜೀವನದಲ್ಲಿ ಕಷ್ಟನಷ್ಟಗಳನ್ನು ಅನುಭವಿಸಿದರೂ, ಹೀಗೇ ಕಷ್ಟಗಳು ಬರುತ್ತಿರಲೆಂದು ವರಬೇಡಿದ ಪುಣ್ಯಾತ್ಮಳು. ಈ ಪಾಂಡವರ ಅನುಬಂಧಿಗಳು, ,ಅನುಯಾಯಿಗಳು ವಿಶಿಷ್ಟಗುಣ ಸಂಪನ್ನರೆ ಆಗಿದ್ದು ತಮ್ಮ ತಮ್ಮ ಪಾತ್ರಗಳನ್ನು ನಿರ್ವಹಿಸಿದ್ದನ್ನು ಕಾಣಬಹುದು.

ಮಹಾಭಾರತದಲ್ಲಿ ನಿರೂಪಿಸಲ್ಪಟ್ಟ ಇತಿಹಾಸದಲ್ಲಿ ಬಂದು ಹೋದ ಪಾತ್ರಗಳು ಸಾವಿರಾರು. ದುಷ್ಟ-ಶಿಷ್ಟ-ಮಿಶ್ರಿತ ಪಾತ್ರಗಳನ್ನು ಕಾಣುತ್ತೇವೆ. ಶಕುನಿ, ದುಃಶ್ಯಾಸನ, ಕಂಸ, ಜರಾಸಂಧ, ಶಿಶುಪಾಲ, ರುಕ್ಮಿ ಜಯದ್ರಥ, ಕೀಚಕ, ಬಕ ಮುಂತಾದ ದುಷ್ಟಶಕ್ತಿಗಳಾದ ಅಸುರರ ಪರಿವಾರದವರು. ಬಲರಾಮ, ದ್ರುಪದ, ವಿರಾಟ, ದೃಷ್ಟದ್ಯುಮ್ನ ಅಭಿಮನ್ಯು, ಘಟೋತ್ಕಚ, ಶಲ್ಯ ಮೊದಲಾದ ವೀರರು ಸಾತ್ವಿಕರು. ಧರ್ಮಕ್ಕಾಗಿ ಹೋರಾಡಿದವರು. ಮಹಾಭಾರತ ಧರ್ಮಾಧರ್ಮಗಳ ಹೋರಾಟದ ಸಂಕೇತವಾಗಿ 'ಸತ್ಯಮೇವ ಜಯತೇ' ಎಂದಂತೆ ಧರ್ಮ-ಸತ್ಯಗಳಿಗೆ ಅಂತಿಮ ಜಯ ದೊರಕಿತು.

ಎಲ್ಲಕ್ಕೂ ಮಿಗಿಲಾಗಿ ಮಹಾಭಾರತದಲ್ಲಿ ಅಭೂತಪೂರ್ವ ರೀತಿಯಲ್ಲಿ ಕಾಣಿಸಿಕೊಂಡದ್ದು ಭಗವಂತನ ಅವತಾರತ್ರಯಗಳು. ಪರಶುರಾಮ, ವೇದವ್ಯಾಸ ಹಾಗೂ ಕೃಷ್ಣ ರೂಪಗಳು. ಏಕಕಾಲದಲ್ಲಿ ಮಹಾಭಾರತದುದ್ದಕ್ಕೂ ಪಾತ್ರವಹಿಸಿ ದುಷ್ಟಹನನದೊಂದಿಗೆ ಶಿಷ್ಟಪಾಲನೆ ರೂಪದ ಧರ್ಮಸಂಸ್ಥಾಪನೆಗೆ ಅವತರಿಸಿ ಬಂದ ರೂಪಗಳಾಗಿದ್ದವು. ಇಲ್ಲಿ ಜ್ಞಾನಕಾರ್ಯ ಹಾಗೂ ಬಲಕಾರ್ಯ ಏಕಕಾಲದಲ್ಲಿ ನಡೆದದ್ದು ವಿಶೇಷ. ಸ್ವತಂತ್ರನೆಂದೆನಿಸಿದ ಭಗವಂತ ತನ್ನ ಎರಡು ಅವತಾರಗಳನ್ನು ಚಿರಂಜೀವಿ ಎಂದೆನಿಸಿಕೊಂಡು ಕೃಷ್ಣ ರೂಪವನ್ನು ಅಂತರ್ಧಾನ ಮಾಡಿದ.

ಭಾರತ, ಭಾಗವತ, ರಾಮಾಯಣಾದಿಗಳು ಜೀವನಾಡಿಗಳು. ಬದುಕಿನ ದಾರಿ ದೀಪಗಳು. ಅಧ್ಯಯನ ಪಾರಾಯಣ ಉಪಾಸನಾದಿಗಳು ಭಗವಂತನ ಪ್ರೀತಿಜನಕವಾಗಿ ನಿತ್ಯ ಸುಖವನ್ನೂ ಕೊಡಬಲ್ಲ ಸಾಧನಗಳು. ನಿತ್ಯಜೀವನದಲ್ಲಿ ಎಷ್ಟಾದರೂ ಸಾಧ್ಯವಾದಷ್ಟನ್ನಾದರೂ ಆಸ್ವಾದಿಸಲು ಪ್ರಯತ್ನಿಸೋಣ. ಮಹಾಭಾರತದ ಬಗ್ಗೆ ಹಾಗೂ ಅಲ್ಲಿಯ ಪಾತ್ರಗಳ ಬಗ್ಗೆ ಈ ಪುಸ್ತಕದಲ್ಲಿ ಇನ್ನೂ ಕೆಲ ಮಾಹಿತಿಗಳನ್ನು ಸಂಗ್ರಹಿಸಿದೆ. ಇದು ಭಗವಂತ ಗುರುಗಳು ಮಾಡಿಸಿದ ಕಾರ್ಯ. ಈ ಕಿರುಪುಸ್ತಕ ಸಜ್ಜನರ ಅವಗಾಹನೆಗೆ ಸಿಕ್ಕಲ್ಲಿ ನಾನು ಧನ್ಯನೆಂದು ಭಾವಿಸುವೆ. ಇಲ್ಲಿ ಎಲ್ಲವನ್ನೂ ಪರಿಚಯಾತ್ಮಕವಾಗಿ ತಿಳಿಸಲಾಗಿದೆ. ಹಾಗೆ ಏನಾದರೂ ಲೋಪದೋಷಗಳಿದ್ದಲ್ಲಿ ದಯವಿಟ್ಟು ತಿಳಿಸಿದಲ್ಲಿ ಸೂಕ್ತವೆನಿಸಿದ್ದನ್ನು ಸರಿಪಡಿಸುವೆ.

**-ಎ.ಬಿ. ಶ್ಯಾಮಾಚಾರ್ಯ**

# ಈ ಕೃತಿಯ ಬಗ್ಗೆ ಹೀಗೆ ತಿಳಿಯೋಣ

ಸುಯೋಗದಿ ಭಾಗವತ ಮಹಾಭಾರತಾದಿಗಳನ್ನು ಹಾಗೂ ಇತ್ತೀಚಿನ ಕೆಲ ಕೋಶಗಳನ್ನು ನೋಡುತ್ತಿರುವಾಗ ಅಲ್ಲಿ ಉಲ್ಲೇಖಿತ ಪ್ರಧಾನ ಪಾತ್ರಗಳನ್ನು ಎಲ್ಲರೂ ಸುಲಭದಿ ತಿಳಿಯಲುನುವಾಗಲು ಒಂದೆಡೆ ಸಂಗ್ರಹಿಸುವ ಆಶೆಯಾಯ್ತು. ಇದನ್ನು ಕಾರ್ಯರೂಪಕ್ಕೆ ತರುವುದು ಅಷ್ಟು ಸುಲಭ ಸಾಧ್ಯವಲ್ಲ ಎಂಬುದೂ ಗೊತ್ತಿತ್ತು. ಹರಿಗುರುಗಳನ್ನು ಸ್ಮರಿಸುತ್ತಾ ಪ್ರಾರಂಭಿಸಿದೆ. ಅವರ ಅನುಗ್ರಹದಿಂದ ಸ್ವಲ್ಪ ಮಟ್ಟಿಗೆ ಸಾಧ್ಯವಾಗಿ ಈ ರೂಪಕ್ಕೆ ಬಂದಿದೆ. ಸಾವಿರಾರು ವಿಷಯಗಳ ಸಂಗ್ರಹ ಇದರಲ್ಲಿದೆ. ಅಲ್ಪಜ್ಞನಾದ ನಾನು ಬಹಳ ಶ್ರಮವಹಿಸಬೇಕಾಯಿತು. ಆದಷ್ಟು ಸುಲಭೀಕರಿಸುವಲ್ಲಿ ಯಶಸ್ವಿಯಾಗಿದೆ ಎಂದು ನನ್ನ ಅನಿಸಿಕೆ. ಈ ಪುಸ್ತಕ ಪ್ರಧಾನವಾಗಿ ಎರಡು ಭಾಗಗಳನ್ನೊಳಗೊಂಡಿದೆ. ಒಂದು ಪಾತ್ರಪರಿಚಯಕೋಶ ಮತ್ತೊಂದು ಪರಿಶಿಷ್ಟಭಾಗ. ಎರಡೂ ಭಾಗಗಳಿಲ್ಲಿ ಸಂಗ್ರಹಿತ ವಿಷಯಗಳು ವಿದ್ವಾಂಸರು ಹಾಗೂ ಅನೇಕರಿಗೆ ತಿಳಿದದ್ದಾದರೂ ಏಕತ್ರ ಸಂಗ್ರಹಾತ್ಮಕವಾಗಿರುವುದು ವಿಶೇಷ. ಈ ಸಂಗ್ರಹ ಕಾರ್ಯದಲ್ಲಿ ಮುದ್ರಿತ ಪುರಾಣ ಕೋಶಗಳಕ್ಕಿಂತಲೂ ಶ್ರೀಮದಾಚಾರ್ಯರ ಮಹಾಭಾರತ ತಾತ್ಪರ್ಯನಿರ್ಣಯ ಗ್ರಂಥವನ್ನು ಮೂಲವನ್ನಾಗಿ ಇಟ್ಟುಕೊಂಡು ಸಂಗ್ರಹಿಸಲಾಗಿದೆ. ಈ ಕಾರ್ಯದಲ್ಲಿ ಏನಾದರೂ ವಿಷಯದ ಹಾಗೂ ಮುದ್ರಣದ ದೋಷಗಳು ಕಂಡಲ್ಲಿ ಅವು ನನ್ನವೇ. ಸಹೃದಯಿಗಳಾದ ಓದುಗರು ಕ್ಷಮಿಸಿ, ತೋರಿದರೆ ಸೂಕ್ತವೆನಿಸಿದಲ್ಲಿ ತಿದ್ದಿಕೊಳ್ಳಲು ಸರ್ವದಾ ಸಿದ್ಧನಿರುವೆ.

ಈ ಪುಸ್ತಕವನ್ನು ಓದುವ ಮುನ್ನ ಕೆಲ ಸಂಗತಿಗಳನ್ನು ತಿಳಿದಿರುವುದು ಸೂಕ್ತವೆನಿಸುತ್ತದೆ. ಇದೊಂದು ಪ್ರಯೋಗಾತ್ಮಕ ಸಂಗ್ರಹವಾಗಿ ತಮ್ಮ ಮುಂದಿದೆ. ಮೊದಲ ಭಾಗದ ಬಗ್ಗೆ ಈ ರೀತಿ ತಿಳಿಯಬಹುದು.

ಮಹಾಭಾರತ ರಾಮಾಯಣ ಭಾಗವತಾದಿಗಳಲ್ಲಿ ಅಂತರ್ಗತವಾದ ಮುಖ್ಯ ಹಾಗೂ ಅತಿಮುಖ್ಯ ಸುಮಾರು 750 ವ್ಯಕ್ತಿಗಳ (ಸಾತ್ವಿಕ, ರಾಜಸ, ತಾಮಸರು) ಪರಿಚಯವನ್ನು ಕಾಲಂಗಳ ರೂಪದಲ್ಲಿ ಕೊಡಲಾಗಿದೆ. ಇದು ನೋಡಲು ತಿಳಿಯಲು ಜ್ಞಾಪಕದಲ್ಲಿರಿಸಿಕೊಳ್ಳಲು ಸುಲಭವೆಂದು ಯೋಜಿಸಿ ಸಿದ್ಧಪಡಿಸಲಾಗಿದೆ. ಪಾತ್ರಗಳ ಹೆಸರುಗಳು ಅಕಾರಾದಿ ಕ್ರಮದಲ್ಲಿದೆ. ಅವುಗಳ ವಿವರಗಳು ಮೇಲೆ (ಆ ಪುಟಗಳ) ತಿಳಿಸಿದಂತೆ ಕೊಡಲಾಗಿದೆ. ಪ್ರತಿ ಬಲಪುಟದಲ್ಲಿ ಆ

ಪಾತ್ರಗಳ ಕಿರುಪರಿಚಯವನ್ನು ಸ್ಥೂಲವಾಗಿ ಕೊಟ್ಟಿದೆ. ಇಲ್ಲಿ ವಿಸ್ತಾರವಾಗಿ ಬರೆಯುವ ಸಾಹಸಕ್ಕೆ ಹೋಗಿಲ್ಲ. ಅಲ್ಪಮತಿ ಗಾತ್ರ ಆರ್ಥಿಕ ಸ್ಥಿತಿ ಕಾಲ ಮುಂತಾದವು ಅಡ್ಡಿಯಾದವು.

ಈ ವಿಸ್ತೃತವಾದ ಪಟ್ಟಿಯನ್ನು ನೋಡುವಾಗ ಕೆಲ ಸಂಶಯಗಳು ಬರುವ ಸಾಧ್ಯತಗಳಿವೆ. ಒಂದೇ ಹೆಸರಿನ ಪಾತ್ರಗಳು ಇರುವಾಗ ಪ್ರಧಾನರಾದವರ ಬಗ್ಗೆ ಮಾತ್ರ ಸೂಚಿಸಲ್ಪಟ್ಟಿರುತ್ತದೆ. ಅವತಾರ ಎಂಬಲ್ಲಿ ಸಂಬಂಧಿಸಿದ ಪ್ರಖ್ಯಾತಿ ಪಡೆದ ಹೆಸರು ಇರುತ್ತಿದೆ. ಯಾರು ? ಎಂಬಲ್ಲಿ ಆ ವ್ಯಕ್ತಿಯ ಮೂಲ ರೂಪ ಅಥವಾ ಸ್ಥಾನ ಅಥವಾ ಸ್ವರೂಪವನ್ನು ಕೊಟ್ಟಿರುವುದಾಗಿದೆ. ನಂತರದ ಅಂಶ ಆವೇಶ ಎಂಬಲ್ಲಿ ಆ ವ್ಯಕ್ತಿಗೆ ಸಂಬಂಧಪಟ್ಟಂತೆ ಅವನಲ್ಲಿ ಸೇರಿದ, ಇತರರ ಅಂಶ ಅಥವಾ ಆವೇಶಾದಿ ಗಳನ್ನು ಸೂಚಿಸಿರುವುದಾಗಿರುತ್ತದೆ. ಕಾಲದ ವಿಷಯದಲ್ಲಿ ಸ್ವಲ್ಪ ಗೊಂದಲ ಎನ್ನಬಹುದು. ಕೆಲವರು ಒಂದು ಯುಗದವರಾದರೆ ಕೆಲವರು 2-3-4 ಯುಗ ದವರಾಗಿರುತ್ತಾರೆ. ಹೀಗಾಗಿ ಅದರಲ್ಲಿ ವ್ಯತ್ಯಾಸಗಳಿರುವ ಸಂಭವ ಇದ್ದೆ ಇದೆ. ಇದೇ ರೀತಿ ಆಯಾಕಾಲದಲ್ಲಿಯ ಪಾತ್ರದ ಬಗ್ಗೆ. ಮಹಾಭಾರತ ಹಾಗೂ ರಾಮಾಯಣ ಕಾಲದಲ್ಲಿ ಬರುವ ಕೆಲವು ಪಾತ್ರಗಳು ಹೀಗೇ ಎಂದು ನಿರ್ಣಯಿಸಲಾಗದು. ಆದ್ದರಿಂದ ದಯವಿಟ್ಟು ಈ ಎರಡು ಕಾಲಂನಲ್ಲಿರುವುದನ್ನು ಸೂಕ್ಷ್ಮವಾಗಿ ಗಮುನಿಸುವುದು ದುಸ್ತರವೆ ಆಗುವುದು. ಇನ್ನು ತಂದೆ-ತಾಯಿ, ಹೆಂಡತಿ ಗಂಡ ಕಾಲಂಗಳಲ್ಲಿ ನನಗೆ ಸಿಕ್ಕದ್ದನ್ನು ಮಾತ್ರ ಕೊಡಲಾಗಿದೆ. ಇದೇ ರೀತಿಯಲ್ಲಿ ಸಂತಾನ.

ಪ್ರತಿಯೊಬ್ಬ ವ್ಯಕ್ತಿಯ ಬಗ್ಗೆ ಸಂಪೂರ್ಣ ಮಾಹಿತಿ ಲಭ್ಯವೆಂದು ಮಾತ್ರ ಭಾವಿಸಬಾರದು. ಎಷ್ಟು ಸಾಧ್ಯವೊ ಅಷ್ಟನ್ನು ಪ್ರಯತ್ನ ಪೂರ್ವಕ ಸಂಗ್ರಹಿಸಲಾಗಿದೆ. ಇತರ ಮಾಹಿತಿ ಎಂಬಲ್ಲಿ ಸಂಕ್ಷಿಪ್ತವೆಂದು ಅಲ್ಲೇ ತಿಳಿಸಿದಂತೆ ಇರುತ್ತದೆಂದು ಯಾರಿಗೂ ತಿಳಿದ ವಿಷಯ. ಹೆಚ್ಚಿನ ಮಾಹಿತಿಗಳಿಗೆ ಮೂಲಗ್ರಂಥಗಳನ್ನೇ ಅವಲೋಕಿಸುವುದು ಅಥವಾ ಬಲ್ಲವರಿಂದ ಪಡೆಯುವುದೆಂದು ವಿನಮ್ರದಿ ತಿಳಿಸ ಬಯಸುವೆ.

ಈ ಗ್ರಂಥದಲ್ಲಿಯ ಎರಡನೆಯ ಭಾಗದಲ್ಲಿ ಹನ್ನೆರಡು ಪರಿಶಿಷ್ಟಗಳನ್ನು ಕೊಡಲಾಗಿದೆ. ವಿಶೇಷ ಮಾಹಿತಿಗಳನ್ನೊಳಗೊಂಡ ಸಂಗಹ್ರವೆಂದು ನನ್ನ ಅನಿಸಿಕೆ. ರಾಮಾಯಣ ಮಹಾಭಾರತಾದಿಗಳಲ್ಲಿ ಅಂತರ್ಗತವಾದ ವಿಷಯಗಳು ಸತ್ಯವಾಗಿ ನಡೆದ ಇತಿಹಾಸಗಳೆಂದು ನಂಬಲೇಬೇಕು. ಇಲ್ಲಿಯೂ ಸುಲಭವಾಗಿ ಮಾಹಿತಿಗಳು ಲಭ್ಯವಾಗಲೆಂದು ಪ್ರತಿಯೊಂದು ಅಂಶಗಳನ್ನು ಬಿಡಿಬಿಡಿಯಾಗಿ ಕೊಡಲು ಪ್ರಯತ್ನಿಸಿದೆ.

'ಶ್ರೀ ಕೃಷ್ಣಕಥಾಮಣಿಮಾಲಾ' ಶ್ರೀಕೃಷ್ಣನ ಅವತಾರದಿಂದಾರಂಭಿಸಿ ಪರಂಧಾಮಕ್ಕೆ ತೆರಳುವವರೆಗೂ ಇರುವ ಮಾಹಿತಿಗಳ ಸಂಗ್ರಹ. (ಅನಂತ ಗುಣಪೂರ್ಣನಾದ ಸರ್ವೋತ್ತಮನ ಮಹಾತ್ಮೆಗಳನ್ನು ಬ್ರಹ್ಮರುದ್ರಾದಿಗಳಿಂದಲೂ ತಿಳಿಯಲು ಅಸಾಧ್ಯ). ನಂತರದ ಪಂಚಪಾಂಡವರ ಕಿರುದರುಶನ ಸಂಗ್ರಹವಾಗಿ ಸಂಗ್ರಹಿಸಿದೆ. ಮಹಾಭಾರತ ಕಾಲದಲ್ಲಿಯ ರಾಜ್ಯ ಪಟ್ಟಣಗಳ ಬಗ್ಗೆ ಕೊಡುವಾಗಿ ಆ ಪ್ರದೇಶಗಳ ಇಂದಿನ ಮಾಹಿತಿಯನ್ನು ಗಮನಿಸಬಹುದು. ಇನ್ನು ಅಂದಿನ ರಾಜ–ಮಹಾರಾಜರು ಆಳುತ್ತಿದ್ದ ದೇಶಗಳ ಪಟ್ಟಿ ಅಂದಿನ ವಿದ್ಯಮಾನ್ಯಗಳಾದ ನದಿಗಳು, ತೀರ್ಥ–ಸರೋವರಗಳು, ರಾಜ್ಯ–ಪಟ್ಟಣಗಳು, ಋಷಿ ಮುನಿಗಳು, ಆಶ್ರಮ–ವನ–ಪರ್ವತಗಳು ಹೀಗೆ ಲಭ್ಯವಾದಷ್ಟನ್ನು ಉಲ್ಲೇಖಿಸುವ ಪ್ರಯತ್ನ ನಡೆದಿದೆ. ಈ ಪುಸ್ತಕದಲ್ಲಿ ಕೊಟ್ಟ ನಕ್ಷೆಯು ಆ ಕಾಲದ ಸ್ಥಿತಿಗತಿಗಳ ಮಾಹಿತಿ ತಕ್ಕ ಮಟ್ಟಿಗೆ ನೀಡಬಲ್ಲುದು. ಕಡೆಯಲ್ಲಿ ಮಹಾಭಾರತದ ಪಾರಾಯಣ ಸುಲಭ ಸಾಧ್ಯವಲ್ಲವೆಂದು ಯೋಗ್ಯತಾನುಸಾರ ಫಲ ಪ್ರಾಪ್ತಿಗೆ ಇದರ ಪರ್ವಗಳ ಆದ್ಯಂತ ಶ್ಲೋಕಗಳನ್ನು ಕೊಡಲಾಗಿದೆ. ಸಹೃದಯಿಗಳು ಇಂತಹ ಕೃತಿಯನ್ನು ಸ್ವಾಗತಿಸುವರೆಂದು ಭಾವಿಸಿ, ಓದುಗರಿಗೆ ನನ್ನ ಅನಂತ ಧನ್ಯವಾದಗಳನ್ನು ಈ ಮೂಲಕ ತಿಳಿಸಬಯಸುವೆ.

ಈ ಪುಸ್ತಕ ಸಿದ್ಧಪಡಿಸುವಲ್ಲಿ ಅನೇಕ ಆಕರಗ್ರಂಥಗಳನ್ನು ನೋಡ ಬೇಕಾಯಿತು. ಅವುಗಳಿಂದ ಸಾಕಷ್ಟು ಉಪಕಾರ ಪಡೆದಿರುವೆ. ಕೆಲವನ್ನು ಕೃತಿಕಾರರ ನಾಮಗಳೊಂದಿಗೆ ಪರಿಶಿಷ್ಟದಲ್ಲಿ ಕೊಟ್ಟಿದೆ. ಆ ಎಲ್ಲ ಮಹನೀಯರಿಗೂ ಅನಂತ ಪ್ರಣಾಮಗಳು. ಈ ಗ್ರಂಥದಲ್ಲಿಯ ಮಾಹಿತಿ ಸಂಗ್ರಹ ಎಷ್ಟು ಕಠಿಣ ಸಾಧ್ಯವೋ ಅಷ್ಟೆ ಕಷ್ಟಕರವಾದದ್ದು ಡಿ ಟಿ ಪಿ (ಅಕ್ಷರ ಜೋಡಣೆ) ಕಾರ್ಯ, ಜೊತೆಗೆ ಆಗಾಗ ಅನೇಕ ಬದಲಾವಣೆಗಳನ್ನೂ ಮಾಡ ಬೇಕಾಯಿತು. ಈ ಕಾರ್ಯ ಮಾಡಿದವರ ಸಹನೆ–ಸಹಕಾರಗಳಿಂದಾಗಿ ಈ ರೂಪತಾಳಿದೆ. ಈ ಕಾರ್ಯ ಮಾಡಿದ ತುಲಸಿ ಇಂಪ್ರೆಷನ್ಸ್‌ನ ಶ್ರೀಮತಿ ದೇವಿಕಾ ಅವರಿಗೆ, ಸಕಾಲಕ್ಕೆ ಸುಂದರವಾಗಿ ಮುದ್ರಿಸಿಕೊಟ್ಟ ವಾಗರ್ಥ ಮುದ್ರಣಾಲಯದವರಿಗೂ ಆಭಾರಿಯಾಗಿರುವೆ.

ಶ್ರೀ ಹರಿದಾಸ ದಾಸ

–ಎ. ಬಿ. ಶ್ಯಾಮಾಚಾರ್ಯ

# ವಿಷಯಾನುಕ್ರಮಣಿಕಾ

## ರಾಮಾಯಣ ಹಾಗೂ ಮಹಾಭಾರತಾದಿಗಳಲ್ಲಿಯ ಪ್ರಮುಖ ಪಾತ್ರಕೋಶ

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಅನಿರುದ್ಧ | ಮಹಾವಿಷ್ಣು | — | ಅನಾದಿ-ನಿತ್ಯ | ಸರ್ವತ್ರ | — | ಶಾಂತಿ (ಮಹಾಲಕ್ಷ್ಮಿ) |
| ಅನಿರುದ್ಧ | ಅನಿರುದ್ಧ (ಕಾಮಪುತ್ರ) | ವಿಷ್ಣು | ದ್ವಾಪರ | ಮ.ಭಾ. | ಪ್ರದ್ಯುಮ್ನ ರುಕ್ಮವತಿ | ರೋಚನಾ ಉಷಾ |
| ಅಕ್ರೂರ | ಕಿಶೋರ (ಗಂಧರ್ವ) | ಬ್ರಹ್ಮ ಸ್ವಾಯಂಭುವ | ದ್ವಾಪರ | ಮ.ಭಾ. | ಸ್ವಫಲ್ಕ, ಗಾಂದಿನಿ | ಬಭ್ರುವಿ (ಸುತನು) |
| ಅರ್ಜುನ | ಇಂದ್ರ | ಹರಿ, ವಾಯು ನರ | ದ್ವಾಪರ | ಮ.ಭಾ. | ಪಾಂಡು, ಕುಂತಿ | ದ್ರೌಪದೀ (ಶಚೀ), ಸುಭದ್ರಾ, ಉಲೂಪಿ, ಚಿತ್ರಾಂಗದ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಬ್ರಹ್ಮಾಂಡ | ನಾರಾಯಣ ಆದಿಯಲ್ಲಿ ಪಾಲನೆಗೆ ಸ್ವೀಕರಿಸಿದ ವಿಶಿಷ್ಟ ರೂಪ, ಪ್ರಥಮ ಪಂಚರೂಪಗಳಲ್ಲೊಂದು. ವಿಷ್ಣುವಿನ ಹೆಸರು. ಜೀವ-ಜಡಗಳಲ್ಲಿ ನಿಯಾಮಕನಾಗಿರುವ. |
| ವಜ್ರ | ಶ್ರೀಕೃಷ್ಣ ರುಕ್ಮಿಣಿಯರ ಮೊಮ್ಮಗ, ಬಾಣಾಸುರ ಸೆರೆಯಲ್ಲಿಟ್ಟ ಅನಿರುದ್ಧನನ್ನು ಕೃಷ್ಣ ಬಿಡಿಸಿ ದ್ವಾರಕೆಯಲ್ಲಿ ಉಷೆಯೊಡನೆ ಮದುವೆ ಮಾಡಿದ. ಯಾದವ ಕಲಹದ ನಂತರವೂ ಇವನ ಮಗ - ವಜ್ರ ಉಳಿದು ಹಸ್ತಿನಾವತಿಗೆ ರಾಜನಾದ. |
| - | ಬ್ರಹ್ಮಲೋಕದ ಗಾಯಕ, ವೃಷ್ಣಿ ವಂಶಜ. ಕಂಸನ ಮಂತ್ರಿ, ಕಂಸನ ಅಪ್ಪಣೆಯಂತೆ ಕೃಷ್ಣ ಬಲರಾಮರನ್ನು ಮಥುರೆಗೆ ಕರೆದೊಯ್ದು ಕೃಷ್ಣನ ಭವ್ಯರೂಪವನ್ನು ಕಂಡವ. ಕೃಷ್ಣ ಭಕ್ತ, ಕೃಷ್ಣ ಓಡಾಡಿದ ಭೂಮಿಯಲ್ಲಿ ಹೊರಳಾಡಿದ ಪುಣ್ಯಾತ್ಮ. |
| ಶೃತಕೀರ್ತಿ,<br>ಅಭಿಮನ್ಯು<br>ಇರಾವಂತ<br>ಬಭ್ರುವಾಹನ | ಚಂದ್ರವಂಶಜ. ಇಂದ್ರಾವತಾರಿ. ಪಾಂಡುವಿನ ಕ್ಷೇತ್ರಜ ತ್ರಿತೀಯ ಪುತ್ರ. ಜನನ ಕಾಲದಲ್ಲಿ ಆಕಾಶ ವಾಣಿಯಲ್ಲಿ ಇವನ ಪ್ರಶಂಸೆ. ಋಷಿಗಳಿಂದ ನಾಮಕರಣ. ಕಾಶ್ಯಪನಿಂದ ಉಪನಯನ ಸಂಸ್ಕಾರ ವಾಯಿತು. ಬಾಲ್ಯದಲ್ಲಿ ಶುಕನಿಂದ ಧನುರ್ವಿದ್ಯಾಭ್ಯಾಸ, ಹಸ್ತಿನಾವತಿಯಲ್ಲಿ ಮುಂಚೆ ಕೃಪಾಚಾರ್ಯರಲ್ಲಿ ದ್ವಾರಕಾದಲ್ಲಿ ಕೃಷ್ಣನಿಂದ ನಂತರ ದ್ರೋಣರಲ್ಲಿ ವಿದ್ಯಾಭ್ಯಾಸ. ದ್ರೋಣರ ಅಚ್ಚುಮೆಚ್ಚಿನ ಪ್ರಥಮ ಶಿಷ್ಯನಾದ. ದ್ರೋಣರು ಅದ್ವಿತೀಯ ಧನುರ್ಧಾರಿಯನ್ನಾಗಿಸಿದರು. ರಂಗಭೂಮಿಯಲ್ಲಿ ಅದ್ಭುತ ಪ್ರದರ್ಶನ. ಗುರುಗಳ ಮಾತಿನಂತೆ ಗುರುದಕ್ಷಿಣೆಗಾಗಿ ದ್ರುಪದನನ್ನು ಸೆರೆಹಿಡಿದು ತಂದ. ಈ ದೃಪದ ಇವನನ್ನು ಅಳಿಯನನ್ನಾಗಿಸಿಕೊಳ್ಳಲು ಶಪಥ. ಭೀಮಸೇನನಿಂದ ಲಕ್ಷಾಗೃಹದಿಂದ ಪಾರಾದನು. ಚಿತ್ರರಥ ಗಂಧರ್ವನಿಗೆ ಪ್ರಾಣದಾನ ನೀಡಿ ಅವನಿಂದ ಚಾಕ್ಷುಷಿವಿದ್ಯೆ ಪಡೆದ. ದ್ರೌಪದೀ ಸ್ವಯಂವರದಲ್ಲಿ ಲಕ್ಷ್ಯ ಭೇದಮಾಡಿ ದ್ರೌಪದಿಯಿಂದ ಜಯಮಾಲೆ ಹಾಕಿಸಿಕೊಂಡ. ಸ್ವಯಂವರದಲ್ಲಿ ಕರ್ಣಾದಿಗಳ ಪರಾಜಯ. ತಾಯಿಯ ಮಾತಿನಂತೆ ದ್ರೌಪದಿಯೊಂದಿಗೆ ಐವರ ವಿವಾಹ. (ದ್ರೌಪದಿ ಒಳಗಿನ ಶಚಿಯೊಂದಿಗೆ). ಬ್ರಾಹ್ಮಣನ ಗೋಸಂಪತ್ತಿನ ರಕ್ಷಣೆಗಾಗಿ ವಿಧಿ ಉಲ್ಲಂಘಿಸಿ ಯಾತ್ರೆಗೆಂದು ಹೋದ. ಹರಿದ್ವಾರದಲ್ಲಿ ಉಲೂಪಿ ಸಂಪರ್ಕದಿಂದ ಇರಾವಂತನ ಜನನ. ಮಣಿಪುರದಲ್ಲಿ ಚಿತ್ರಾಂಗದೆಯಿಂದ ಬಭ್ರುವಾಹನನ ಜನನ. ಕೃಷ್ಣನೊಡನೆ ದ್ವಾರಕಾಗಮನ. ಸಮ್ಮತಿಯಂತೆ ಸಂನ್ಯಾಸವೇಷದಿ ಸುಭದ್ರಾಹರಣ ನಂತರ ವಿವಾಹ. ಅಗ್ನಿಗಾಗಿ ಖಾಂಡವವನ ದಹನ. ಅಗ್ನಿಯಿಂದ ಗಾಂಡೀವ ಧನಸ್ಸು ರಥ ಪಡೆದ. ಮಯ ಹಾಗೂ ಇಂದ್ರರಿಂದ ಆಶ್ವಾಸನೆ. ಮಯನಿಂದ ದೇವದತ್ತ ಶಂಖಪ್ರಾಪ್ತಿ. ಕೃಷ್ಣಭೀಮರೊಂದಿಗೆ ಜರಾಸಂಧನ ಬಳಿ ಹೋದದ್ದು. ರಾಜಸೂಯಯಾಗಕ್ಕಾಗಿ ಉತ್ತರದಿಕ್ಕಿನ ದಿಗ್ವಿಜಯ. ಜೂಜಿನ ಪ್ರಸಂಗದಲ್ಲಿ ಕರ್ಣ ಹಾಗೂ ಅವನ ಅನುಯಾಯಿಗಳನ್ನು ಕೊಲ್ಲುವುದಾಗಿ ಪ್ರತಿಜ್ಞೆ. ವನವಾಸದಲ್ಲಿ ಉಗ್ರ ತಪಸ್ಸು ಮಾಡಿ ಶಿವನಿಂದ ಪಾಶುಪತಾಸ್ತ್ರ ಸಂಪಾದನೆ. ಸ್ವರ್ಗದಲ್ಲಿ ಸ್ವಾಗತ. ಊರ್ವಶಿಯಿಂದ ಶಾಪ. ಗಂಧರ್ವರು ಹಿಡಿದ ದುರ್ಯೋಧನನ ಮೋಚನೆ. ದ್ವೈತವನದಲ್ಲಿ ನೀರು ತರಲು ಹೋಗಿ ಮೂರ್ಛೆ. ವಿರಾಟ ನಗರದಲ್ಲಿ ಬೃಹನ್ನಳೆಯಾದ. ಉತ್ತರನನ್ನು ಸಾರಥಿಯಾಗಿಸಿ ಒಬ್ಬನೆ ಎಲ್ಲರನ್ನೂ ಗೆದ್ದ. ಮೋಹಿತರನ್ನಾಗಿಸಿದ. ಕೃಷ್ಣನ ಸಂದರ್ಶಕ್ಕಾಗಿ ದ್ವಾರಕಾದಲ್ಲಿ ದುರ್ಯೋಧನನ ವಿರುದ್ಧವಾಗಿ ಯುದ್ಧದಲ್ಲಿ ನಿಶ್ಶಸ್ತ್ರನಾದ ಕೃಷ್ಣನನ್ನೇ ಆಯ್ದುಕೊಂಡ. ಭಾರತ ಯುದ್ಧದಲ್ಲಿ ಶ್ರೀಕೃಷ್ಣನನ್ನು ಸಾರಥಿಯನ್ನಾಗಿ ಪಡೆದ. ಯುದ್ಧ ಪ್ರಾರಂಭದಲ್ಲಿ ಕೃಷ್ಣನಿಂದ ಗೀತೋಪದೇಶ. ವಿಶ್ವರೂಪದ ದರ್ಶನ ಪಡೆದ. ಭೀಷ್ಮನನ್ನು ಕೊಲ್ಲಲು ಹೋದ ಕೃಷ್ಣನನ್ನು ತಡೆದ. ಯುದ್ಧದಲ್ಲಿ ಅದ್ಭುತ ಪರಾಕ್ರಮ ಪ್ರದರ್ಶನ. ಶಿಖಂಡಿಯಿಂದ ಕೂಡಿಕೊಂಡು ಭೀಷ್ಮರನ್ನು ಬಾಣಶಯ್ಯಾ ಮೇಲೆ ಉರುಳಿಸಿದ. ಭೀಷ್ಮರಿಗೆ ಜಲಧಾರೆಯಿಂದ ತೃಪ್ತಿಪಡಿಸಿದ. ಸಂಶಪ್ತಕರ ಭಗದತ್ತಾದಿಗಳ ವಧೆ. ಅಭಿಮನ್ಯುವಿನ ಮರಣದಿಂದ ವಿಲಾಪ. ಜಯದ್ರಥನನ್ನು ಕೊಲ್ಲಲು ಪ್ರತಿಜ್ಞೆ. ಜಯದ್ರಥನ ಶಿರಶ್ಛೇದ ಮಾಡಿದ. ಸ್ವಪ್ನದಲ್ಲಿ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಅಶ್ವತ್ಥಾಮ | ರುದ್ರ | — | ದ್ವಾಪರ | ಮ.ಭಾ. | ದ್ರೋಣ, ಕೃಪಿ | — |
| ಅಭಿಮನ್ಯು | ಬುಧ | ಹರಿ,ವಾಯು, ಇಂದ್ರ, ಚಂದ್ರ ಯಮ | ದ್ವಾಪರ | ಮ.ಭಾ. | ಅರ್ಜುನ, ಸುಭದ್ರಾ | ಉತ್ತರಾ, ಶಶಿರೇಖ ವತ್ಸಲಾ |
| ಅಂಗದ | ಚಂದ್ರ | ಇಂದ್ರ | ತ್ರೇತಾ | ರಾಮಾ- | ವಾಲಿ, ತಾರಾ | — |
| ಅಂಗೀರಸ | ಮಹರ್ಷಿ | — | — | ಮ.ಭಾ | ಚ. ಬ್ರಹ್ಮ | ಸುಭಾ |
| ಅಕಂಪನ | ಅಸುರ | — | ತ್ರೇತಾ | ರಾ. | ಸುಮಾಲಿ | — |
| ಅಚ್ಛೋದಾ | ಸತ್ಯವತಿ | ಲಕ್ಷ್ಮಿ | ದ್ವಾ. | ಮ.ಭಾ. | ಬರ್ಹಿಷದ | ಪರಾಶರ ಶಂತನು |
| ಅದಿತಿ | ದೇವತೆ | — | — | ಭಾಗವತ | ದಕ್ಷ, ನೀರಿಣಿ | ಕಶ್ಯಪರು |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಶಿವನಿಂದ ಶಸ್ತ್ರಪಡೆದದ್ದು, ಸುರಕ್ಷಣ, ಶ್ರುತಾಯುಗಳ ವಧೆ. ವಿಂದ- ಅನುವಿಂದರ ವಧೆ. ವೃಷಸೇನನ ವಧೆ. ಕರ್ಣ ಅಶ್ವತ್ಥಾಮರ ಪರಾಜಯ. ಯುಧಿಷ್ಠಿರ-ಅರ್ಜುನರ ವ್ಯಾಜವನ್ನು ಕೃಷ್ಣ ಪರಿಹರಿಸಿದ. ಕರ್ಣನ ಶಿರಚ್ಛೇದನ ಮಾಡಿದ. ಯುಧಿಷ್ಠಿರನ ಪಟ್ಟಾಭಿಷೇಕದ ನಂತರ ದುಃಶಾಸನನ ಅರಮನೆಯಲ್ಲಿ ವಾಸ. ಕೃಷ್ಣನಿಂದ ಮತ್ತೆ ಗೀತೋಪದೇಶ. ಭೀಷ್ಮರಿಂದ ಉಪದೇಶ. ಯುಧಿಷ್ಠಿರನ ಅಶ್ವಮೇಧಯಾಗದಲ್ಲಿ ಮುಖ್ಯ ಪಾತ್ರ. ಕೃಷ್ಣ ಪರಂಧಾಮಕ್ಕೆ ಹೋದ ಮೇಲೆ ಮ್ಲೇಂಛರಿಂದ ಪರಾಜಯ. ಮಹಾಪ್ರಸ್ಥಾನದಲ್ಲಿ ಶರೀರತ್ಯಾಗ ಮಾಡಿ ಸ್ವರ್ಗ ಸೇರಿದ. ಅರ್ಜುನನಲ್ಲಿ ವೀರ ಎಂಬ ರೂಪದಿಂದ ವಾಯು ದೇವರಿದ್ದರು. ಆಧ್ಯಾತ್ಮದಲ್ಲಿ ಅರ್ಜುನ ಶ್ರವಣ ಮನನ ನಿಧಿಧ್ಯಾಸನಗಳ ಸಂಕೇತ. ಅರ್ಜುನನ ಪ್ರತಿ ವಿಜಯದಲ್ಲೂ ಭೀಮನ ಅನುಗ್ರಹವಿತ್ತು. |
| — | ರುದ್ರಾವತಾರಿ. ಚಿರಂಜೀವಿಗಳಲ್ಲೊಬ್ಬರು. ಹುಟ್ಟಿದಾಗ ಕುದುರೆಯಂತೆ ಕೆನೆದುದರಿಂದ ಈ ಹೆಸರು ಬಂತು. ಕೌರವ ಪಾಂಡವ ಬಾಲಕರೊಂದಿಗೆ ಇವನೂ ದ್ರೋಣರಲ್ಲಿ ವಿದ್ಯಾಭ್ಯಾಸ ಮಾಡಿದ. ದುರ್ಯೋಧನನ ಪಕ್ಷಪಾತಿಯಾಗಿದ್ದ. ರಾಜಸೂಯಯಾಗಕ್ಕೆ ಬಂದಿದ್ದ. ಉತ್ತರ ಗೋ ಗ್ರಹಣದಲ್ಲಿ ಭಾಗವಹಿಸಿದ. ಶ್ರೀ ಕೃಷ್ಣ ಇವನಿಗೆ ಪಾಂಡವರ ಪಕ್ಷ ವಹಿಸಲು ಹೇಳಲು ಕೇಳಲಿಲ್ಲ. ಆದರೆ ತಮ್ಮ ತಂದೆ ಇರುವವರೆಗೂ ಸೌಮ್ಯದಿಂದಿರುವುದಾಗಿ ಮಾತುಕೊಟ್ಟರು. ಮಹಾಯುದ್ಧದಲ್ಲಿ ದುರ್ಯೋಧನನ ಪಕ್ಷ ಹಿಡಿದು ಅನೇಕರನ್ನು ಸಂಹರಿಸಿದ. ದ್ರೋಣರ ವಧೆಯ ನಂತರ ಘೋರ ಯುದ್ಧ ಮಾಡಿದ. ಇವನು ಬಿಟ್ಟ ನಾರಾಯಣಾಸ್ತ್ರವು ಕೃಷ್ಣನಿಂದ ಶಾಂತವಾಯಿತು. ಭೀಮನೊಂದಿಗೆ ಯುದ್ಧಮಾಡಿ ಮೂರ್ಛಿತನಾದ. ದುರ್ಯೋಧನ ಬಿದ್ದ ನಂತರ ಅವನಿಂದ ಮಣ್ಣಿನಿಂದ ಪಟ್ಟಾಭಿಷಿಕ್ತನಾಗಿ ದುರ್ಯೋಧನನನ್ನು ತೃಪ್ತಿಪಡಿಸಲು ಪಾಂಡವರನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದ. ಯುದ್ಧದ ನಂತರ ರಾತ್ರಿ ಶಿಬಿರ ಪ್ರವೇಶಿಸಲು ಮೂಲ ರೂಪ ಶಿವನೊಂದಿಗೆ ಯುದ್ಧ. ಶಿಬಿರಸ್ಥ ಧೃಷ್ಟದ್ಯುಮ್ನ, ಯುತ್ತಮೌಜ, ಯುಧಾಮನ್ಯು, ಶಿಖಂಡಿ, ದ್ರೌಪದೀ ಪುತ್ರರನ್ನು ಸಂಹರಿಸಿ ಶಿಬಿರವನ್ನೇ ಭಸ್ಮಮಾಡಿದ. ಪಾಂಡವರನ್ನು ನಿರ್ವಂಶ ಮಾಡಲು ಬ್ರಹ್ಮಾಸ್ತ್ರ ಬಿಟ್ಟ. ವ್ಯಾಸರ ಆಜ್ಞೆಯಂತೆ ಹಿಂಪಡಿಯಲಾಗದೆ ಓಡಿದ. ಶ್ರೀಕೃಷ್ಣನಿಂದ ಶಾಪ. ಪಾಂಡವರ ನಿರ್ವಂಶ ಮಾಡಲು ಬ್ರಹ್ಮಶಿರೋಸ್ತ್ರ ಬಿಟ್ಟ. ತಲೆಯಲ್ಲಿದ್ದ ರತ್ನವನ್ನು ಭೀಮ ಕಿತ್ತು ಹಾಕಿದ. ಕಡೆಗೆ ಕಾಡಿಗೆ ಹೋದ. ಅಶ್ವತ್ಥಾಮ ಅಹಂಕಾರದ ಸಂಕೇತ. |
| ಪರೀಕ್ಷಿತ<br>ಇತರ ಮಕ್ಕಳು | ಚಂದ್ರವಂಶಜ ಕ್ಷತ್ರಿಯ, ಕೃಷ್ಣನ ಸೋದರಳಿಯ, ಅತಿರಥಿ, ಕೃಷ್ಣಾರ್ಜುನರ ಶಿಷ್ಯ, ದ್ರೌಪದೇಯರಿಗೆ ಶಸ್ತ್ರವಿದ್ಯಾ ಕಲಿಸಿದ. ಅಂತಿಮಯುದ್ಧದಲ್ಲಿ ಅನೇಕರನ್ನು ಸಂಹರಿಸಿದ. (ಅಭಿಮನ್ಯು ಅಧ್ಯಾತ್ಮದಲ್ಲಿ ಮನಸ್ಸಿನ ಸಂಕೇತ.) ದ್ರೋಣರ ಚಕ್ರವ್ಯೂಹ ಭೇದಿಸಿ ನುಗ್ಗಿದ, ದ್ರೋಣ ಕರ್ಣ ದುರ್ಯೋಧನಾದಿಗಳೊಂದಿಗೆ ಮಹಾಪರಾಕ್ರಮ ತೋರಿ ಮೋಸದಿ ದುಶ್ಯಾಸನನ ಮಗನಿಂದ ಮಡಿದ. ಮುಂದೆ ಇವನ ವಂಶವೇ ಮುಂದುವರೆಯಿತು. |
| — | ಸುಗ್ರೀವನ ಯುವರಾಜ, ಶ್ರೀರಾಮ ಭಕ್ತ ವಾನರ, ಯುದ್ಧದಲ್ಲಿ ಅನೇಕರನ್ನು ಸಂಹರಿಸಿದ. ರಾವಣನನ್ನು ಎದುರಿಸಿದ, ಕಿಷ್ಕಿಂದೆಯ ರಾಜನಾದ. |
| ಬೃಹಸ್ಪತಿ, ಉತಥ್ಯ,<br>ಸಂವರ್ತ | ಅಥರ್ವವೇದದ ಪ್ರವರ್ತಕರು. ಕಾರೀರಿಯಾಗಮಾಡಿ ದುರ್ಭಿಕ್ಷ ಕಾಲದಲ್ಲಿ ಮಳೆ ತರಿಸಿದರು. ಗೋತ್ರ ಪ್ರವರ್ತಕ. ಬ್ರಹ್ಮರ ಮುಖದಿಂದ ಜನಿಸಿದರು. |
| — | ರಾವಣನ ಅನುಯಾಯಿ, ರುದ್ರ ವರ ಇತ್ತು. ಹನುಮಂತನಿಂದ ಸತ್ತ. |
| — | ಕನ್ಯಾವಸ್ಥೆಯಲ್ಲಿ ಪರಾಶರರಿಂದ ವೇದವ್ಯಾಸರನ್ನು ಶಂತನುವಿನಿಂದ ಚಿತ್ರಾಂಗದ ಮತ್ತು ವಿಚಿತ್ರ ವೀರ್ಯರನ್ನು ಪಡೆದಳು. |
| ದೇವತೆಗಳು | ದ್ವಾದಶಾದಿತ್ಯರ ತಾಯಿ, ಇವಳ ಕಠಿಣ ವ್ರತಕ್ಕೆ ಇವಳಲ್ಲಿ ವಾಮನ ಅವತರಿಸಿದ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಅಗ್ನಿ | ಅಗ್ನಿ | — | ತ್ರೇತ | ರಾ/ಭಾ. | ಜಲದೇವತೆ ಭಗವಂತನ ಮುಖ | ಸ್ವಹಾ, ಸ್ವಧಾ, ಸುದರ್ಶನಾ |
| ಅಗಸ್ತ್ಯ | ಬ್ರಹ್ಮರ್ಷಿ | — | ತ್ರೇತಾ, | ರಾ/ಭಾ. | ಪುಲಸ್ತ್ಯ ಹವಿ. | — |
| ಅಗಸ್ತ್ಯ | ಬ್ರಹ್ಮರ್ಷಿ | — | ತ್ರೇ | ಭಾಗವತ | ಮಿತ್ರಾ ವರುಣ ಊರ್ವಶಿ | ಲೋಪಾಮುದ್ರೆ |
| ಅಂಬರೀಷ | ಚಕ್ರವರ್ತಿ | -- | - | ಭಾಗವತ | ನಾಭಾಗ | - |
| ಅತಿಕಾಯ | ರಾಕ್ಷಸ | — | ತ್ರೇತಾ | ರಾ. | ರಾವಣ, ಧಾನ್ಯಮಾಲೀ | - |
| ಅತ್ರಿ | ಬ್ರಹ್ಮರ್ಷಿ | - | - | ಭಾಗವತ | ಚ.ಬ್ರಹ್ಮ | ಅನಸೂಯಾ |
| ಅನಸೂಯಾ | ಋಷಿಪತ್ನಿ | - | - | ಭಾಗವತ | ಕರ್ದಮ, ದೇವಹೂತಿ | ಅತ್ರಿ |
| ಅಕ್ಷಕುಮಾರ | ಅಸುರ | - | ತ್ರೇತಾ | ರಾ | ರಾವಣ, ಮಂಡೋದರಿ | - |
| ಅಘಾಸುರ | ರಾಕ್ಷಸ | - | ದ್ವಾ | ಮ.ಭಾ. | - | - |
| ಅಂಗಾರಕ | ದೇವತೆ | - | - | ರಾ/ಭಾ. | ವಿಷ್ಣು ಭೂದೇವಿ | - |
| ಅಗ್ನಿದ್ಯೋತನ | ಬ್ರಾಹ್ಮಣ | ವಾಯು | ದ್ವಾ | ಮ.ಭಾ. | - | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಸ್ಕಂಧ, ಸುದರ್ಶನ | ಪಂಚಭೂತಗಳಲ್ಲೊಂದು, ಭಗವಂತನ ಮುಖದಿಂದ ಉತ್ಪತ್ತಿ. ಅರ್ಜುನನಿಂದ ಖಾಂಡವ ವನವನ್ನು ಸುಟ್ಟ ಕೃಷ್ಣಗೆ ಚಕ್ರಾಯುಧ ಕೊಟ್ಟ ಅರ್ಜುನನಿಗೆ ಗಾಂಡೀವ, ರಥ ಪ್ರದಾನ. ಸೀತೆ ಪತಿವ್ರತೆ ಎಂದು ನಿರೂಪಿಸಿದ, ದೇವತೆಗಳಿಗೆ ಹವಿಸ್ಸನ್ನು ತಲುಪಿಸುವ ದೇವತೆ. ದಿಕ್ಪಾಲಕ ಹಾಗೂ ದೇವಮುಖ. |
| — | ಸ್ವಾಯಂಭು ಮನ್ವಂತರದವರು, ಅಗ್ನಿವೇಶ್ಯನು ಇವರ ಶಿಷ್ಯ. |
| ದೃಢಸ್ಯು | ವಶಿಷ್ಠರ ಸೋದರ, ಕುಂಭದಲ್ಲಿ ಜನಿಸಿ ಕುಂಭಜ ಎನಿಸಿದ, ವೈವಸ್ವತ ಮನ್ವಂತರದವರು. ಪ್ರಾಣಿಗಳ ಅನುಕರಣೆಯಿಂದ ಒಂದು ಬಾಲೆಯನ್ನು ಸೃಷ್ಟಿಸಿ ವಿದರ್ಭದೇಶದ ರಾಜನಿಗೆ ಸಾಕಲು ಕೊಟ್ಟ ದೊಡ್ಡವಳಾದ ಮೇಲೆ ಅವಳನ್ನೇ ಮದುವೆಯಾಗಲು ಬಯಸಿ ರಾಜನಲ್ಲಿ ಕೇಳಿದ. ಈ ಲೋಪಾಮುದ್ರೆ ಈ ಋಷಿಯನ್ನು ಮದುವೆಯಾಗಲು ಒಪ್ಪಿದಳು. ಎಲ್ಲ ಐಶ್ವರ್ಯ ಆಭರಣಗಳನ್ನು ತ್ಯಜಿಸಿ ಈ ಮುನಿ ಹಿಂದೆ ಕಾಡಿಗೆ ಹೋಗಿ ಸೇವೆ ಮಾಡಿ ಮಗನನ್ನು ಪಡೆದಳು. ಇವರು ಇಲ್ವಲ ವಾತಾಪಿ ಸೋದರರಲ್ಲಿ ವಾತಾಪಿಯನ್ನು ಜೀರ್ಣಿಸಿಕೊಂಡು, ಇಲ್ವಲನನ್ನು ಕಣ್ಣಿನ ಅಗ್ನಿಯಿಂದ ನಾಶಮಾಡಿದರು. ಒಮ್ಮೆ ಸ್ವರ್ಗಲೋಕದಲ್ಲಿ ನಹುಷನನ್ನು ಸಪ್ತಋಷಿಗಳು ಪಲ್ಲಕ್ಕಿಯಲ್ಲಿ ಹೊತ್ತು ಶಚಿಯ ಮನೆಗೆ ಹೋಗುತ್ತಿದ್ದಾಗ ಅವನ ದುರಹಂಕಾರ ಹಾಗೂ ದುಷ್ಟ ಇಚ್ಛೆಗೆ ಅಜಗರನಾಗಿ ಭೂಮಿಯಲ್ಲಿ ಬೀಳುವಂತೆ ಶಾಪಕೊಟ್ಟರು. ಒಮ್ಮೆ ಸಮುದ್ರದ ನೀರನ್ನೆಲ್ಲ ಪಾನ ಮಾಡಿದರು. ವಿಂಧ್ಯಾಪರ್ವತವನ್ನು ಬೆಳೆಯದಿರನ್ನಾಗಿಸಿದವರು ಇವರು. ಒಮ್ಮೆ ಶ್ರೀರಾಮ ಇವರ ಆಶ್ರಮಕ್ಕೆ ಬಂದಾಗ (ವನವಾಸದಲ್ಲಿ) ಇವರಿಗೆ ಇಂದ್ರಕೊಟ್ಟಿದ್ದ ಶಾರ್ಙ್ಗಧನಸ್ಸನ್ನು ಅವರಿಗೆ ಒಪ್ಪಿಸಿದರು. |
| ಶ್ರೀಮತಿ<br>ವಿರೂಪ, ಕೇತು<br>ಮಾನ್, ಶಂಭು. | ಸೂರ್ಯವಂಶಜ. ಸಪ್ತದ್ವೀಪಾಧಿಪತಿ. ವೈವಸ್ವತನ ಮೊಮ್ಮಗ, ಒಂಬತ್ತನೇ ಮಗ. ಅಚ್ಛಿನ್ನ ಭಗವದ್ಭಕ್ತ, ಅಶ್ವಮೇಧಾದಿ ಅನೇಕ ಯಾಗಗಳನ್ನು ಮಾಡಿದ. ಭಗವಂತ ಭಕ್ತಿಗೆ ಮೆಚ್ಚಿ ತನ್ನ ಸುದರ್ಶನ ಚಕ್ರವನ್ನು ರಕ್ಷಣೆಗಾಗಿ ಕೊಟ್ಟನು. ಏಕಾದಶಿ ವ್ರತದೀಕ್ಷೆಯಿಂದ ಮಧುವನದಲ್ಲಿ ಆಚರಿಸಿದ. ಪಾರಣೆ ದಿನ ದುರ್ವಾಸರು ತಡ ಮಾಡಿದ್ದಕ್ಕೆ ಬ್ರಾಹ್ಮಣರ ಅನುಮತಿಯಿಂದ ಜಲಪಾರಣ ಮಾಡಿದ. ಕೋಪಗೊಂಡ ದುರ್ವಾಸರು ಕೃತ್ಯೆಯನ್ನು ಬಿಟ್ಟರು. ಚಕ್ರವು ಅದನ್ನು ಸುಟ್ಟು ಹಾಕಿ ದುರ್ವಾಸರನ್ನು ಹಿಂಬಾಲಿಸಿತು. ಪಲಾಯನಗೊಂಡ ಋಷಿಯು ಬ್ರಹ್ಮರುದ್ರ ದೇವರನ್ನು ಸಂರಕ್ಷಿಸಲು ಬೇಡಿದರು. ಆಗದೆ ವಿಷ್ಣುವನ್ನು ಶರಣಹೋದರು. ಕಡೆಗೆ ಅಂಬರೀಷನಲ್ಲಿಗೆ ಬಂದು ಕಡಿಮೆಯವನಾದರೂ ಬೇಡಿದರು. ಭಗವಂತನನ್ನು ಪ್ರಾರ್ಥಿಸಿ ಅವರ ಪ್ರಾಣ ಉಳಿಸಿದ. ಇದರಿಂದ ವ್ರತದ, ಹರಿಭಕ್ತರ ಸಾಮರ್ಥ್ಯ ತಿಳಿಯುವುದು. |
| – | ಕುಂಭಕರ್ಣನಂತಿದ್ದ ದೇಹ. ಬ್ರಹ್ಮರ ವರ ಇತ್ತು. ಗಂಧರ್ವ ಸ್ತ್ರೀಯಲ್ಲಿ ಹುಟ್ಟಿದವ. ದುಷ್ಟ ಪರಾಕ್ರಮಿ. ಯುದ್ಧದಲ್ಲಿ ಲಕ್ಷ್ಮಣನಿಂದ ಸತ್ತ. |
| ದತ್ತ,ದೂರ್ವಾಸ,<br>ಚಂದ್ರ ಇನ್ನೂ ಅನೇಕರು | ಸಪ್ತಋಷಿಗಳಲ್ಲೊಬ್ಬರು, ಗೋತ್ರ ಪ್ರವರ್ತಕರು, ಪರಮ ಭಗವದ್ಭಕ್ತರು. ಬ್ರಹ್ಮರ ಮುಖದ ಕಣ್ಣಿನಿಂದ ಜನಿಸಿದರು. ಕರ್ದಮರ ಅಳಿಯ, ಅತ್ರಿಸ್ಮೃತಿ, ವಾಸ್ತುಶಾಸ್ತ್ರ ಗ್ರಂಥಗಳನ್ನು ಬರೆದಿರುವರು. |
| ದತ್ತ,ದೂರ್ವಾಸ,<br>ಚಂದ್ರ ಇನ್ನೂ ಅನೇಕರು | ಮಹಾಪತಿವ್ರತೆ, ದಂಪತಿಗಳು ತಪಸ್ಸನ್ನಾಚರಿಸಿ ತ್ರಿಮೂರ್ತಿಗಳನ್ನು ಮಕ್ಕಳಾಗಿ ಪಡೆದಳು. |
| – | ಇಂದ್ರಜಿತ್‌ನ ತಮ್ಮ. ಬ್ರಹ್ಮ ರುದ್ರರ ವರವಿತ್ತು. ಯುದ್ಧದಲ್ಲಿ ಹನುಮಂತನಿಂದ ಸತ್ತ. ಲಂಕಾದಲ್ಲಿ ಮೊದಲು ಸತ್ತ ಮಹಾದೈತ್ಯ. |
| – | ಕಂಸನ ಭೃತ್ಯ, ಸರ್ಪರೂಪದವನು, ಗೋಕುದಲ್ಲಿ ಕೃಷ್ಣನಿಂದ ಸತ್ತ. |
| – | ನಗ್ರಹಗಳಲ್ಲೊಬ್ಬ, ಮಂಗಳ ಗ್ರಹ, ಭಾರದ್ವಾಜ ಗೋತ್ರದವ, ಕ್ರೂರ ಗ್ರಹ. |
| – | ರುಕ್ಮಿಣೀದೇವಿ ಕೊಟ್ಟ ಪತ್ರವನ್ನು ಶ್ರೀಕೃಷ್ಣನಿಗೆ ತಲುಪಿಸಿದವ ಬ್ರಾಹ್ಮಣ, ಉತ್ತಮಗತಿ ಪಡೆದ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಅಜಾಮಿಳ | ಬ್ರಾಹ್ಮಣ | — | – | ಭಾಗವತ | ಕನೂಜಿನಬ್ರಾಹ್ಮಣ | ಭ್ರಾ.ಸ್ತ್ರೀ,ಹೋತಿ |
| ಅಂಜನಾ | ಪುಂಜಕಸ್ಥಳೀ | — | ತ್ರೇತಾ. | ರಾ. | ಗೌತಮ,ಅಹಲ್ಯ | ಕೇಸರಿ (ವಾಯು) |
| ಅಜ | ಅರಸು | — | ತ್ರೇತಾ. | ರಾ. | ರಘು | ಇಂದುಮತಿ |
| ಅಂಬಾ | ವರಾಂಗೀ | – | ದ್ವಾ | ಮ.ಭಾ. | ಕಾಶೀರಾಜ | ದ್ಯುವಸು |
| ಅಂಬಿಕೆ | – | – | ದ್ವಾ. | ಮ.ಭಾ. | ಕಾಶೀರಾಜ | ವಿಚಿತ್ರವೀರ್ಯ |
| ಅಂಬಾಲಿಕೆ | – | – | ದ್ವಾ. | ಮ.ಭಾ. | ಕಾಶೀರಾಜ | ವಿಚಿತ್ರವೀರ್ಯ |
| ಅಜಗರ | ನಹುಷ | – | ದ್ವಾ. | ಮ.ಭಾ. | – | – |
| ಅಜಗರ | ವಿದ್ಯಾಧರ | – | ದ್ವಾ. | ಮ.ಭಾ. | – | – |
| ಅಧರ್ಮ | ರಾಕ್ಷಸ | – | ದ್ವಾ. | ಮ.ಭಾ. | ನಿರ್ಋತಿ | |
| ಅಧಿರಥ | ಸೂತ | – | ದ್ವಾ. | ಮ.ಭಾ. | ಸತ್ಯಕರ್ಮ, | ರಾಧಾ |
| ಅರುಂಧತಿ | ಋಷಿಪತ್ನಿ | – | – | ರಾ/ಮ.ಭಾ. | ಕರ್ದಮ, ದೇವಹೂತಿ | ವಶಿಷ್ಠ |
| ಅರಿಷ್ಟಾಸುರ | ವೃಷಭಾಸುರ | – | ದ್ವಾ | ಮ.ಭಾ. | ದೈತ್ಯವಂಶಜ | – |
| ಅಹಲ್ಯಾ | ಋಷಿಪತ್ನಿ | – | – | ರಾ/ಮ.ಭಾ. | ಬ್ರಹ್ಮ (ಮುದ್ಗಲಋಷಿ) | ಗೌತಮ |
| ಅರ್ಜುನ ವೃಕ್ಷಗಳು | ನಳಕೂಬರ ಮಣಿಗ್ರೀವ | ಧುನಿ,ಚಮೂ | ದ್ವಾ | ಮ.ಭಾ. | ಕುಬೇರ | – |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಹೋಲತಿ ಮಕ್ಕಳು | ಮಾಡಬಾರದ್ದನ್ನು ಮಾಡಿ ಅಂತ್ಯದಲ್ಲಿ ಕಡೆಯ ಮಗನ ನಾಮ 'ನಾರಾಯಣ' ಎಂದು ಉಚ್ಚರಿಸಿ ಸದ್ಗತಿ ಪಡೆದ. ಆಕಾಶರಾಜನಾಗಿ ಜನಿಸಿದ. ಮಗಳಾದ ಪದ್ಮಾವತಿಯನ್ನು ಭಗವಂತನಾದ ಶ್ರೀನಿವಾಸನಿಗೆ ಕೊಟ್ಟು ಉದ್ಧಾರನಾದ. |
| ಹನುಮಂತ | ಅಂಜನಾದ್ರಿಯಲ್ಲಿ ತಪಸ್ಸನ್ನಾಚರಿಸಿ ಹನುಮಂತನನ್ನು ಪಡೆದಳು. ಪ್ರಾಚೀನ ಬರ್ಹಿ ಈ ವಂಶದಲ್ಲಿ ಬಂದ. |
| ದಶರಥ | ಸೂರ್ಯ ವಂಶಜ, ಅಯೋಧ್ಯೆಯ ಅರಸು. ಇವನ ವಂಶದಲ್ಲಿ ಶ್ರೀರಾಮ ಅವತರಿಸಿದ. |
| – | ಗಂಧರ್ವ ಸ್ತ್ರೀ, ಇವಳನ್ನು ಇವಳ ತಂಗಿಯರನ್ನು ಭೀಷ್ಮ ಸ್ವಯಂವರದಲ್ಲಿ ವಿಚಿತ್ರವೀರ್ಯನಿಗಾಗಿ ಕೊಂಡೊಯ್ದ. ಸಾಲ್ವನನ್ನು ಪ್ರೀತಿಸಿದ್ದಳು, ನಂತರ ತಿರಸ್ಕೃತಳಾಗಿ ಶಿವನಲ್ಲಿ ತಪಸ್ಸನ್ನಾಚರಿಸಿದಳು. ಶಿವ ಕೊಟ್ಟ ಹಾರವನ್ನು ಯಾರು ಸ್ವೀಕರಿಸದ ಕಾರಣ ದ್ರುಪದನಲ್ಲಿ ಜನಿಸಿದಳು. ಗಂಡಿನಂತೆ ಬೆಳೆದು ವಿವಾಹವಾಗಿ ನಂತರ ಪುರಷತ್ವ ಪಡೆದಳು. ಶಿವಕೊಟ್ಟ ಹಾರವನ್ನು ತಾನೇ ಧರಿಸಿದಳು. ದ್ರೋಣರಲ್ಲಿ ಅಭ್ಯಾಸ. ಅಂಬಾ ಶಿಖಂಡಿಯಾಗಿ ಭೀಷ್ಮರ ಮರಣಕ್ಕೆ ಕಾರಣಳಾದಳು. ಅಶ್ವತ್ಥಾಮರಿಂದ ಮಡಿದಳು. |
| ಧೃತರಾಷ್ಟ್ರ | ಅಂಬೆಯ ತಂಗಿ. ಒಂದು ವರ್ಷ ವೈಷ್ಣವ ವ್ರತವನ್ನಾಚರಿಸಿ ವ್ಯಾಸರಿಂದ ನಿಯೋಗ ಪದ್ಧತಿಯಿಂದ ಧೃತರಾಷ್ಟ್ರನನ್ನು ಪಡೆದಳು, ಅತ್ತೆ ಸತ್ಯವತಿಯೊಡನೆ ವನದಲ್ಲಿ ದೇಹ ತ್ಯಜಿಸಿದಳು (ಭಯದಿಂದ ಕಣ್ಣು ಮುಚಿದ್ದಕ್ಕೆ ಕುರುಡ ಮಗ ಹುಟ್ಟಿದ). |
| ಪಾಂಡು | ಅಂಬೆಯ ತಂಗಿ, ಒಂದು ವರ್ಷ ವೈಷ್ಣವ ವ್ರತವನ್ನಾಚರಿಸಿ ವ್ಯಾಸರಿಂದ ನಿಯೋಗ ಪದ್ಧತಿಯಿಂದ ಪಾಂಡು ರಾಜನನ್ನು ಪಡೆದಳು, ಅತ್ತೆಯೊಡನೆ ವನದಲ್ಲಿ ದೇಹಬಿಟ್ಟಳು (ವ್ಯಾಸರ ಭಯಂಕರರೂಪ ನೋಡಿ ಬಿಳಿಚಿಕೊಂಡದ್ದರಿಂದ ಬಿಳಿಚಿಕೊಂಡ ಮಗ ಹುಟ್ಟಿದ) |
| – | ಭೀಮನನ್ನು ಹಿಡಿದ ಹೆಬ್ಬಾವು, ನಹುಷ ಚಕ್ರವರ್ತಿಯಾಗಿದ್ದ, ಧರ್ಮರಾಜ ಅಜಗರನ ಪ್ರಶ್ನೆಗಳಿಗೆ ಉತ್ತರಿಸಿದ ಮೇಲೆ ಭೀಮನನ್ನು ಬಿಟ್ಟ, ಅಗಸ್ತ್ಯರ ಶಾಪವಿಮೋಚನೆಯಾಯಿತು. ಭೀಮನಿಗೇನೂ ಆಗಲಿಲ್ಲ. |
| – | ನಂದನನ್ನು ಹಿಡಿದ ಸರ್ಪ, ಇವನೊಬ್ಬ ಗಂಧರ್ವ, ಕೃಷ್ಣ ರಕ್ಷಣೆ ಮಾಡಿದ. |
| ಭಯ, ಮಹಾಭಯ ಮೃತ್ಯು | ಅಧರ್ಮದ ಅಭಿಮಾನಿ ದೈತ್ಯ. ಕಲಿಯ ಸಂಬಂಧಿ. |
| ಶತ್ರುಂ ತಪ, ದ್ರುಮ ವೃತರಥ ಮುಂ. | ಕುಂತಿಯ ಶಿಶು ಕರ್ಣನನ್ನು ಸಾಕಿದ ತಂದೆ, ಗೌರವನ ಸಾರಥಿಯಾಗಿದ್ದ, ಇವನಿಂದ ಕರ್ಣ ಸೂತಪುತ್ರನೆನಿಸಿದ. |
| ಶಕ್ತ್ಯುಷಿ | ಪತಿವ್ರತಾಸ್ತ್ರೀ, ಕಪಿಲರ ಸೋದರಿ. ಕಲೆ, ಶ್ರದ್ಧಾ ಹವಿರ್ಭುಕ್, ಗತಿ, ಕ್ರಿಯಾ, ಖ್ಯಾತಿ, ಶಾಂತಿ, ಅನಸೂಯಾ, ಈಕೆಯ ಸೋದರಿಯರು, ನಾರದರ ಸೋದರಿ. ಕಪಿಲಮಹರ್ಷಿಯ ಅಕ್ಕ ವಶಿಷ್ಠ ಅರುಂಧತಿಯವರು ಗೃಹಸ್ಥರಿಗೆ ಮಾದರಿ. |
| – | ಅಸುರ, ವೃಷಭರೂಪದವ, ಕಂಸನಭೃತ್ಯ, ಕೃಷ್ಣನಿಂದ ಸತ್ತ. |
| ದೀರ್ಘತಮ, ಶತಾನಂದ | ಪತಿವ್ರತಾಸ್ತ್ರೀ, ಗೌತಮರ ಶಾಪದಿಂದ ಕಲ್ಲಿನಂತಾಗಿದ್ದಳು. ಶ್ರೀರಾಮನ ಪಾದಸ್ಪರ್ಶದಿಂದ ಉದ್ಧಾರಳಾದಳು. ಹಿಂದೆ ಇಂದ್ರನಿಂದ ಬಲಾತ್ಕಾರಕ್ಕೊಳಗಾಗಿದ್ದಳು. ಇವಳು ನಿರ್ದೋಷಿ. ಗೌತಮರು ಸ್ವೀಕರಿಸಿದರು. |
| – | ಗಂಧರ್ವರು ಅಗಸ್ತ್ಯರ ಶಾಪದಿಂದ ಯುಗಳ ವೃಕ್ಷಗಳಾಗಿ ಬಾಲಕೃಷ್ಣನಿಂದ ವಿಮೋಚನೆ ಪಡೆದರು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಅರುಣ | ದೇವತೆ | – | ತ್ರೇತಾ. | ರಾ. | ಕಶ್ಯಪ,ವಿನತಾ | ಶ್ಯೇನಿ |
| ಅಸ್ತಿ ಪ್ರಾಸ್ತಿ | ರಾಜಕುವರಿಯರು | – | ದ್ವಾ. | ಮ.ಭಾ. | ಜರಾಸಂಧ | ಕಂಸ |
| ಅಶ್ವಿನೀ ಕು. (ನಾಸತ್ಯದಸ್ರ) | ದೇವತೆಗಳು | – | ದ್ವಾ. | ಮ.ಭಾ. | ಸೂರ್ಯ, ಸಂಜ್ಞಾ | ಉಷಾ |
| ಅಶ್ವಸೇನ | ಸರ್ಪ | – | ದ್ವಾ | ಮ.ಭಾ. | ತಕ್ಷಕ(ಸರ್ಪಕ) | – |
| ಅಣಿಮಾಂಡವ್ಯ | ಮಹರ್ಷಿ | – | ತ್ರೇತಾ. | ಭಾಗವತ | – | – |
| ಅಥರ್ವ | ಮಹರ್ಷಿ | – | – | ಭಾಗವತ | ಅಂಗಿರಸ,ಸತಿ | ಶಾಂತಿ |
| ಅಂಜನಪರ್ವ | ರಾಕ್ಷಸ | – | ದ್ವಾ. | ಮ.ಭಾ. | ಘಟೋತ್ಕಚ ಕಮಟಂಕಟಾ | – |
| ಅಂಶುಮಾನ್ | ಕ್ಷತ್ರಿಯ | – | ತ್ರೇ. | ಭಾಗವತ | ಅಸಮಂಜಸ | |
| ಅತಿಥಿ | ಅರಸು | – | ತ್ರೇತಾ. | ರಾ. | ಕುಶ, ಕುಮುದ್ವತಿ | ನಿಷಧಾ |
| ಅದ್ರಿಕಾ | ಅಪ್ಸರೆ | – | ದ್ವಾ. | ಮ.ಭಾ. | – | ಉಪಚರವಸು |
| ಅನಂತ | ಶೇಷ | ಸಂಕರ್ಷಣ | – | ಭಾಗವತ | ಕಶ್ಯಪ, ಕದ್ರು | ವಾರುಣಿ |
| ಅಮರ್ಕ | ಮುನಿ | – | ತ್ರೇ | ಭಾಗವತ | ಶುಕ್ರಾಚಾರ್ಯ | – |
| ಅಲರ್ಕ | ಚಕ್ರವರ್ತಿ | – | ತ್ರೇ | ಭಾಗವತ | ವತ್ಸ | – |
| ಅಲಂಬುಸ, (ಅಲಂಬಿಲ) | ರಾಕ್ಷಸ | – | ದ್ವಾ. | ಮ.ಭಾ. | ಜಟಾಸುರ | – |
| ಅಲಾಯುಧ | ರಾಕ್ಷಸ | – | ದ್ವಾ. | ಮ.ಭಾ. | | |
| ಅಷ್ಟಾವಕ್ರ | ಋಷಿಕುಮಾರ | – | ದ್ವಾ. | ಮ.ಭಾ. | ಕಹೋಳಋಷಿ ಸುಜಾತೆ | ಸುಪ್ರಭಾ |
| ಆರುಣಿ | ಮುನಿ | – | ತ್ರೇ. | ಭಾಗವತ | – | – |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಸಂಪಾತಿ, ಜಟಾಯು | ಇವನು ಅನೂರು, ಸೂರ್ಯನ ಸಾರಥಿ, ಗರುಡನ ಅಣ್ಣ |
| – | ಇವರನ್ನು ಕಂಸ ಜರಾಸಂಧ ಇಲ್ಲದ ಸಮಯದಲ್ಲಿ ತಂದು ಮದುವೆಯಾದ. ಗಂಡ ಕೃಷ್ಣನಿಂದ ಸತ್ತ ನಂತರ ತಂದೆಯಲ್ಲಿಗೆ ಹೋದರು. ಕೃಷ್ಣನ ದ್ವೇಷಕ್ಕೆ ನಾಂದಿಯಾದರು. ಅಸುರ ಸ್ವಭಾವದವರು. |
| | ಶೂದ್ರರು, ದೇವವೈದ್ಯರು, ನಕುಲಸಹದೇವರಾಗಿ ಪಾಂಡು-ಮಾದ್ರಿಯರಲ್ಲಿ ಜನಿಸಿದರು, ಸಂಜ್ಞಾ ಹೆಣ್ಣು ಕುದುರೆಯಾಗಿದ್ದಾಗ ಸೂರ್ಯ ಗಂಡು ಕುದುರೆಯಾಗಿ ಇವರನ್ನು ಅವಳಿಯಾಗಿ ಪಡೆದರು, ಸುಂದರರು. ಅವಳಿ ಮಕ್ಕಳಾದ ಇವರಲ್ಲಿ ಭೇದವಿಲ್ಲ. ಚ್ಯವನರಿಗೆ ಯೌವನವನ್ನು ಕೊಟ್ಟು ಅವರಿಂದ ಯಜ್ಞದಲ್ಲಿ ಸೋಮಪಾನಾಧಿಕಾರ ಪಡೆದರು. (ಮೊದಲ ಸಲ ಬ್ರಹ್ಮರ ಮೂಗಿನ ಹೊರಳೆಗಳಿಂದ ಜನಿಸಿದ್ದರು) |
| – | ಕರ್ಣನ ನಾಗಾಸ್ತ್ರದಲ್ಲಿ ಸೇರಿಕೊಂಡಿದ್ದ ಇವನನ್ನು ಅರ್ಜುನ ಕೊಂದ. ಕಾಂಡವವನವನ್ನು ದಹಿಸಿದಾಗ ಅಲ್ಲಿಂದ ಪಾರಾಗಿ ಅರ್ಜುನನ ಮೇಲೆ ಸೇಡನ್ನಿಟ್ಟಿದ್ದ. |
| – | ಶೂಲಕ್ಕೇರಿಸಿದ ಇವರ ಕುತ್ತಿಗೆಯಲ್ಲಿ ಆಣಿ ಇತ್ತು, ಮಂತ್ರದ್ರಷ್ಟಾರರು. ಇವರ ಶಾಪದಿಂದ ಯಮ ವಿದುರನಾಗಿ ಹುಟ್ಟಿದರು. 14 ವರ್ಷದವರೆಗೆ ಮಾಡಿದ ಪಾಪ ಪೋಷಕರಿಗೆಂದು ಮಾಡಿದ. |
| ದಧೀಚಿ | ಇವರು ಯಮನೊಂದಿಗೆ ವಾದ ಮಾಡಿದ್ದರು. ವೇದಗಾಯಕ, ಹವಿಸ್ಸನ್ನೂ ದೇವತೆಗಳಿಗೆ ತಲುಪಿಸುವ ಅಗ್ನಿ |
| – | ವೀರ, ಯುದ್ಧದರಲ್ಲಿ ಅಶ್ವತ್ಥಾಮಾಚಾರ್ಯರಿಂದ ಮಡಿದ. |
| – | ಸೂರ್ಯವಂಶಜ, ಸಗರನ ಮೊಮ್ಮಗ. |
| ನಿಷಧ | ಶ್ರೀರಾಮನ ಮೊಮ್ಮಗ ಸೂರ್ಯವಂಶಜ, ಅಶ್ವಮೇಧಯಾಗ ಮಾಡಿದ. |
| ವಿರಾಟ, ಸತ್ಯವತಿ | ಈಕೆ ಮೀನಾಗಿದ್ದಾಗ ವಸುವಿನ ರೇತಸ್ಸನ್ನು ನುಂಗಿ ಅವಳಿ ಮಕ್ಕಳನ್ನು ಪಡೆದಳು. |
| – | ಶ್ರೀಮನ್ನಾರಾಯಣನ ಹಾಸಿಗೆ, ಭೂಮಿಯನ್ನು ಹೊತ್ತವ, ಬಲರಾಮ, ಲಕ್ಷ್ಮಣನಾಗಿ ಅವತರಿಸಿದ. |
| – | ಶಣ್ಡ ಮುನಿಯ ಸೋದರ. ಹಿರಣ್ಯಕಶಿಪುನ ಶುಕ್ರಾಚಾರ್ಯರ ಗುರುಕುಲದಲ್ಲಿ ಪ್ರಹ್ಲಾದನಿಗೆ ಗುರುವಾಗಿದ್ದರು. ಅರ್ಥಕಾಮದ ಬಗ್ಗೆ ಮಾತ್ರ ಉಪದೇಶಿಸುತ್ತಿದ್ದರು. |
| ಶಂನತಿ | ಸೂರ್ಯವಂಶಜ 60 ಸಾವಿರ ವರ್ಷ ರಾಜ್ಯವನ್ನಾಳಿದ. ಸುಖ ಸಂಮೃದ್ಧಿ ತಂದವನು ಇವನೊಬ್ಬ ರಾಜರ್ಷಿ. ಕಾಶಿ ರಾಜ್ಯವನ್ನಾಳಿದ.<br>ಚಕ್ರವರ್ತಿ |
| – | ದುರ್ಯೋಧನನ ಆಪ್ತ, ರಾಮಾಯಣದ ಕಾಲದವ. ಬಕನ ಸೋದರ, ಮಹಾರಥ, ಮಾಯಾವಿ. ಇರಾವಂತನನ್ನು ಕೊಂದ, ಘಟೋತ್ಕಚನಿಂದ ಸತ್ತ. ಇವನ ತಂದೆಯನ್ನು ಭೀಮ ಕೊಂದಿದ್ದ |
| | ಭಾರತ ಯುದ್ಧದಲ್ಲಿ ಘಟೋತ್ಕಚನಿಂದ ಸತ್ತ. ಇವನು ಬಕನ ತಮ್ಮ. |
| – | ಶ್ವೇತಕೇತುವಿನ ಸೋದರಳಿಯ, ತತ್ವದ ಬಗ್ಗೆ ವಾದಿಸಿ ಶಾಪದಿಂದ ಗರ್ಭದಲ್ಲೇ ಅಷ್ಟಾವಕ್ರನಾದ, ನಂತರ ತಂದೆಯಿಂದ ವಿಕಾರರಹಿತನಾದ. ಸಮಂಗಾನದಿಯಲ್ಲಿ ಮಿಂದು ಸುಂದರನಾದ. |
| ಶ್ವೇತಕೇತು, ನಚಿಕೇತು<br>ಸುಜಾತ | ಧೌಮ್ಯರ ಶಿಷ್ಯ, ಪಾಂಚಾಲದೇಶದವ ಈತನ ಗುರುಭಕ್ತಿಯಿಂದ ಉದ್ದಾಲಕ ಎಂದು ಪ್ರಶಸ್ತಿ ಪಡೆದ. ಅಷ್ಟಾವಕ್ರನ ತಾತ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಆರುಣೀ | ಶೂದ್ರಳು | - | ದ್ವಾ. | ಮ.ಭಾ. | ಶೂರ, ಭುಜಿ | ವಿದುರ |
| ಆಹುಕ | ಯಾದವ | – | ದ್ವಾ., | ಮ.ಭಾ. | ಪುನರ್ವಸು | – |
| ಆಕಾಶರಾಜ | ಮಾಧವ(ಬ್ರಾ.) | – | ದ್ವಾ.ಅಂತ್ಯ | ಭ.ಪು. | ಸುಧರ್ಮ | ಧರಣೀದೇವಿ |
| ಆಯು | ಕ್ಷತ್ರಿಯ | – | ದ್ವಾ. | ಮ.ಭಾ. | ಪುರೂರವ, ಊರ್ವಶಿ | ಸ್ವರ್ಭಾನವಿ |
| ಆರ್ಯಕ | ಸರ್ಪರಾಜ | – | ದ್ವಾ. | ಮ.ಭಾ. | ಕಶ್ಯಪ, ಕದ್ರು | – |
| ಆಸ್ತಿಕ | ಮಹರ್ಷಿ | – | ದ್ವಾ. | ಮ.ಭಾ. | ಜರತ್ಕಾರ, ಜರತ್ಕಾರು | – |
| ಇಕ್ಷ್ವಾಕು | ರಾಜಋಷಿ | ಸೂರ್ಯ | ತ್ರೇ. | ಭಾಗವತ | ವೈವಸ್ವತಮನು | ಶ್ರದ್ಧಾ |
| ಇಂದ್ರ | ದೇವೇಂದ್ರ | ವಿಷ್ಣು | – | ಭಾಗವತ | ಕಶ್ಯಪ, ಅದಿತಿ | ಶಚೀದೇವಿ |
| ಇಂದ್ರಸೇನಾ | ಭಾರತೀ | - | ದ್ವಾ. | ಮ.ಭಾ. | ಮುದ್ಗಲ (ನಳ) | – |
| ಇಂದ್ರಜಿತ್ | ದುಶ್ಯಾಸನ | – | ತ್ರೇ. | ರಾ. | ರಾವಣ, ಮಂಡೋದರಿ | ಸುಲೋಚನೆ |
| ಇರಾವಾನ್ | ಮಂಗಳ | ವರುಣ | ದ್ವಾ. | ಮ.ಭಾ. | ಅರ್ಜುನ, | – |
| ಇಲಾ | (ಸುದ್ಯುಮ್ನ) | ಶರವಣ | ದ್ವಾ. | ಮ.ಭಾ. | ವೈ.ಮನು, ಶ್ರದ್ಧಾ | ಬುಧ |
| ಇಲ್ವಲ | ಅಸುರ | - | ದ್ವಾ. | ಮ.ಭಾ. | - | - |
| ಇಂದುಮತಿ | ದೇವತೆ | ಹರಿಣಿ | ತ್ರೇ. | ರಾ. | ಭೋಜ | ಅಜ |
| ಇಂದ್ರದ್ಯುಮ್ನ | ಹೂಹೂ | – | ತ್ರೇ. | ಭಾಗವತ | ವೈಷ್ಣವರಾಜ | – |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಕುಂತಿಗೆ ತಂಗಿಯಾದಳು. ಶ್ರೀ ಕೃಷ್ಣ ಮನೆಗೆ ಬಂದಾಗ ಸತ್ಕರಿಸಿದಳು. ಪತಿವ್ರತೆ. ಭೀಷ್ಮರು ವಿದುರ ನೊಂದಿಗೆ ಮದುವೆ ಮಾಡಿಸಿದರು. |
| 100 ಮಕ್ಕಳು ಸುತಗು | ಚಂದ್ರವಂಶಜ, (ಉಗ್ರಸೇನನ ತಂದೆ), ಯದುವಂಶದವನು, ಕಂಸನತಾತ. ಅಕ್ರೂರನ ಮಾವ. ದ್ವಾರಕಾ ದಲ್ಲಿ ಮದ್ಯಪಾನ, ಮಾಂಸಭಕ್ಷಣ ನಿಷೇಧ ಮಾಡಿದ್ದ. |
| ಪದ್ಮಾವತಿ | ಶ್ರೀನಿವಾಸದೇವರ ಮಾವ. ಹಿಂದೆ ಮಾಧವ ಬ್ರಾಹ್ಮಣನಾಗಿ ಭಗವದ್ಭಕ್ತನಾಗಿ ಸಾಧನೆ ಮಾಡಿದ್ದ. ಮಗಳ ವಿವಾಹಕ್ಕೆ ಬ್ರಹ್ಮಾಂಡವೇ ಸೇರಿತ್ತು. |
| ನಹುಷ, ಐವರು | ಐವರು ಸೋದರರು, ಚಂದ್ರವಂಶಜ, ದತ್ತಾತ್ರೇಯನ ಭಕ್ತ. |
| ಮಾರಿಷೆ | ಶೂರರಾಜನ ಮಾವ, ವಸುದೇವ ಕುಂತಿಯರ ತಾತ. ಭೀಮನನ್ನು ನಾಗಲೋಕಕ್ಕೆ ಕರೆದೊಯ್ದವ. |
| – | ಭೃಗುವಂಶಜ, ಜನ್ಮೇಜಯನ ಸರ್ಪಯಾಗ ನಿಲ್ಲಿಸದವ. |
| ವಿಶಾದ–100 ಮಕ್ಕಳು | ಸೂರ್ಯವಂಶಜ, ಅಯೋಧ್ಯೆಯ ಅರಸು. ಹಿರಿಯ ಮಗ ಮನು ಸೀನಿದಾಗ ಹುಟ್ಟಿದವನು. |
| ಜಯಂತ | ಅಧಿಕಾರದ ಹೆಸರು, ಸ್ವರ್ಗಾಧಿಪತಿ, ದೇವರಾಜ, ವಾಲಿ, ಅರ್ಜುನ ಅವತಾರಿ, ಬ್ರಹ್ಮರ ಒಂದು ಹಗಲಲ್ಲಿ 14 ಇಂದ್ರರು, ಉರಳುವರು. ವಜ್ರಾಯುಧಿ, ಇವನ ಮಹಿಮೆ ಎಲ್ಲ ವೇದ, ಪುರಾಣಗಳಲ್ಲಿ ಬಂದಿವೆ. ವನವಾಸ ಕಾಲದಲ್ಲಿ ಅರ್ಜುನನನ್ನು ಸ್ವರ್ಗದಲ್ಲಿ ಸತ್ಕರಿಸಿದ. ತತ್ವಾಭಿಮಾನಿ, ಎಲ್ಲ ದೇವಕಾರ್ಯಗಳಲ್ಲಿ ಇವನ ಉಪಸ್ಥಿತಿ ಇರುತ್ತದೆ. ಪುರಾಣ ಇತಿಹಾಸಗಳಿಂದ ತಿಳಿಯಬೇಕು. |
| – | ಇವಳಲ್ಲಿ ಪಾರ್ವತಿ, ಶಚೀ ಶ್ಯಾಮಲಾ ಮತ್ತು ಉಷಾರ ಅಂಶ. ಶಿವನನ್ನು ಕುರಿತು ತಪಸ್ಸು ಮಾಡಿದಳು. ಮುಂದೆ ದ್ರೌಪದಿಯಾಗಿ ಜನಿಸಿದಳು. ಹಿಂದೆ ವಿಪ್ರ ಕನ್ಯೆಯಾಗಿ ಜನಿಸಿದ್ದಳು. |
| – | ಹಿರಿಯ ಮಗ. ರುದ್ರ ವರ ವಿತ್ತು, ದೈತ್ಯ, ಇಂದ್ರನನ್ನು ಗೆದ್ದವನು, ಮಾಯಾವಿ, ಹನುಮಂತನ ಬಲ ಕಂಡಿದ್ದ ಯುದ್ಧದಲ್ಲಿ ಲಕ್ಷ್ಮಣನಿಂದ ಸತ್ತ, ಮೇಘನಾದ ನಾಮಾಂತರ. |
| – | ನಾಗಲೋಕದವನು, ಅರ್ಜುನ ಯಾತ್ರೆಗೆ ಹೋದಾಗ ಹುಟ್ಟಿದ. ಶೂರ, ಕುರುಕ್ಷೇತ್ರ ಯುದ್ಧದಲ್ಲಿ ಆರ್ಷ್ಯ ಶೃಂಗಿ ಎಂಬ ಮಾಯಾವಿ ದೈತ್ಯ ಅಲಂಬುಸನಿಂದ ಹತನಾದ. ಶಕುನಿಯ ಆರು ಮಕ್ಕಳನ್ನು ಕೊಂದವನು. |
| ಪುರೂರವಸ್ ಉತ್ಕಲ, ಗಯ, ವಿಮಲ | ಪುರುಷಳಾಗಿದ್ದಾಗ ಸುದ್ಯುಮ್ನ, ಶಿವನ ವರದಿಂದ ಒಂದೊಂದು ತಿಂಗಳು ಗಂಡು-ಹೆಣ್ಣು ಆದಳು. ವಶಿಷ್ಠರ ಅನುಗ್ರಹದಿಂದ ಇವಳು ಸುದ್ಯುಮ್ನ (ಗಂಡು) ಆದಳು. ಶಿವಪಾರ್ವತಿಯರ ಸುಕುಮಾರ ವನ ಪ್ರವೇಶಿಸಿ ಮತ್ತೆ ಹೆಣ್ಣಾದಳು. ಆಗ ಬುಧನ ಸಂಪರ್ಕದಿಂದ ಪುರೂರವಸ್‌ನನ್ನು ಪಡೆದಳು. |
| – | ವಾತಾಪಿ ಅಸುರನ ಅಣ್ಣ. ಬ್ರಾಹ್ಮಣರನ್ನೂ ನಾಶಪಡಿಸಬೇಕೆಂದು ತಮ್ಮನನ್ನು ಮಾಂಸವನ್ನಾಗಿಸಿ ಬ್ರಾಹ್ಮಣರಿಗೆ ತಿನಿಸಿ ಸಾಯಿಸುತ್ತಿದ್ದ. ಅಗಸ್ತ್ಯರಿಗೆ ಹೀಗೆ ಮಾಡಲು ಹೋಗಿ ಅವನು ತಮ್ಮ ಇಬ್ಬರೂ ಸತ್ತರು. |
| ದಶರಥ | ತೃಣಬಿಂದುವಿನ ಶಾಪದಿಂದ ಜನಿಸಿದಳು, ನಾರದರ ಹೂಮಾಲೆ ಬಿದ್ದದ್ದಕ್ಕೆ ವಿಮೋಚನೆಯಾಯಿತು. |
| – | ಗಂಧರ್ವ, ಪಾಂಡ್ಯದೇಶದ ರಾಜ, ಅಗಸ್ತ್ಯರ ಶಾಪದಿ ಗಜರಾಜನಾದ, ಮೊಸಳೆ ಹಿಡಿದಾಗ ಭಗವಂತನಿಂದ ಉದ್ಧಾರನಾದ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಈಶಾನ | ರುದ್ರ | – | ಚ.ಯುಗ | ಭಾಗವತ | ಚ.ಬ್ರಹ್ಮ | ಪಾರ್ವತಿ |
| ಉತ್ತಮ | ರಾಜಕುಮಾರ | – | ತ್ರೇ | ಭಾಗವತ | ಉತ್ತಾನಪಾದ, ಸುರುಚಿ | – |
| ಉಗ್ರಸೇನ | ಗಂಧರ್ವ | – | ದ್ವಾ. | ಮ.ಭಾ. | ಆಹುಕ, | – |
| ಉಗ್ರಸೇನ | ರಾಜ | – | ದ್ವಾ. | ಮ.ಭಾ. | ಪರೀಕ್ಷಿತ,ಭದ್ರವತಿ | – |
| ಉದ್ಧವ | ಬೃಹಸ್ಪತಿ | ವಾಯು | ದ್ವಾ. | ಮ.ಭಾ. | ಉಪಗವ ಕಂಸೆ | – |
| ಉತ್ತರ | ರಾಜಕುವರ | – | ದ್ವಾ. | ಮ.ಭಾ. | ವಿರಾಟ,ಸುದೇಷ್ಣೆ | – |
| ಉತ್ತರಾ | ರಾಜಕುವರಿ | – | ದ್ವಾ. | ಮ.ಭಾ. | ವಿರಾಟ,ಸುದೇಷ್ಣೆ | ಅಭಿಮನ್ಯು |
| ಉದಂಕ | ಮಹರ್ಷಿ | – | ದ್ವಾ | ಮ.ಭಾ | ಮರುಧನ್ವವಾಸಿ | – |
| ಉತ್ತಾನಪಾದ | ಚಕ್ರವರ್ತಿ | – | ತ್ರೇ. | ಭಾಗವತ | ಸ್ವಾಯಂಬು ಮನು, | ಸುನೀತಿ, ಸುರುಚಿ |
| ಉಪರಿಚರ | ವಸು | – | ದ್ವಾ. | ಮ.ಭಾ. | ಪುರುವಂಶಜ | ಗಿರಿಕಾ |
| ಉಮಾ | ಪಾರ್ವತಿ | – | – | ಭಾಗವತ | ಪರ್ವತರಾಜ | ಶಿವ |
| ಉಷಾ | ಉಷಾ | – | ದ್ವಾ. | ಮ.ಭಾ. | ಬಾಣಾಸುರ | ಅನಿರುದ್ಧ |
| ಉಚಥ್ಯ | ಋಷಿ | – | – | ರಾ/ಭಾ. | ಅಂಗಿರಸ | ಭದ್ರೆ, ಮಮತಾ |
| ಉಲೂಪಿ | ನಾಗಕನ್ಯೆ | – | ದ್ವಾ | ಮ.ಭಾ. | ಕೌರವ್ಯ, (ನಾಗರಾಜ) | ಅರ್ಜುನ |
| ಉಲ್ಮುಕ | ಅರ್ಯಮಾ | – | ದ್ವಾ. | ಮ.ಭಾ. | ಬಲರಾಮ,ರೇವತಿ | – |
| ಉತ್ತಮೌಜ | ಪರಾವಸು | ಅರ್ಯಮಾ | ದ್ವಾ. | ಮ.ಭಾ. | ದ್ರುಪದ | – |
| ಊರ್ವಶೀ | ಅಪ್ಸರೆ | – | ದ್ವಾ. | ರಾ/ಮ.ಭಾ. | ನಾರಾಯಣ | ಪುರೂರವ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಗಣಪತಿ,ಷಣ್ಮುಖ | ಈಶಾನ್ಯಾಧಿಪತಿ, ದಿಕ್ಪಾಲಕ, ಮನೋಭಿಮಾನಿ, ತ್ರಿಮೂರ್ತಿಗಳಲ್ಲಿ ಒಬ್ಬ ವೇದ ಪುರಾಣಗಳಲ್ಲಿ ಇವನ ಮಹಿಮೆ ಬಂದಿದೆ. (ನೋಡಿ - ಶಿವ, ರುದ್ರ) |
| – | ಕಿರಿಯ ಹೆಂಡತಿಯ ಮಗ. ಧ್ರುವನಿಗೆ ಸಮನೆಂದು ಮೆರೆದವ. ಹಿಮವತ್ಪರ್ವತದಲ್ಲಿ ಬೇಟೆಗೆ ಹೋದಾಗ ಬೇಡರಿಂದ ಸತ್ತ. |
| ಕಂಸ | ಚಂದ್ರವಂಶಜ, ದೇವಕನ ಸಹೋದರ, ಕಂಸ ಕಾರಾಗೃದಲ್ಲಿಟ್ಟ. ನಂತರ ಕೃಷ್ಣನಿಂದ ಮತ್ತೆ ರಾಜನಾದ. |
| – | ಅರ್ಜುನನ ಮೊಮ್ಮಗ, ಜನಮೇಜಯನ ಸೋದರ. |
| – | ಯಾದವ, ಕೃಷ್ಣನ ಮಂತ್ರಿ ಹಾಗೂ ಭಕ್ತ ವಸುದೇವನ ತಮ್ಮನ ಮಗ. ಕೃಷ್ಣನಿಂದ ಉಪದೇಶ ಪಡೆದ, ಕಂಸನ ಭಾವಮೈದುನ. ಕಡೆಗೆ ತಪಸ್ಸಿಗೆಂದು ಬದರಿಕಾಶ್ರಮಕ್ಕೆ ಹೋದ. ಶ್ರೀಕೃಷ್ಣನ ಸೇವೆ ಮಾಡಲೆಂದೇ ದ್ರೋಣರಾಗಿದ್ದರೂ ಮತ್ತೆ ಹುಟ್ಟಿದರು. ಮೂಲ ರೂಪದಿಂದಲೇ ಎಲ್ಲ ವಿದ್ಯೆಯನ್ನು ಕಲೆತನು. |
| – | ಹೆಸರು-ಭೂಮಿಂಜಯ ಉತ್ತರೆಯ ಅಣ್ಣ. ಬೃಹನ್ನಳೆ ಸಾರಥಿಯಾದಳು. ಉತ್ತರ ಗೋಗ್ರಹಣಕ್ಕೆ ಬಂದಿದ್ದ ಸೈನ್ಯ ನೋಡಿ ಓಡಿದವ. ನಂತರ ತಿಳಿದು ಅರ್ಜುನನಿಗೆ ಸಾರಥಿಯಾದ. ಯುದ್ಧದಲ್ಲಿ ಶಲ್ಯನಿಂದ ಮಡಿದ. |
| ಪರೀಕ್ಷಿತ | ಕೃಷ್ಣಾನುಗ್ರಹದಿಂದ ಮಗನನ್ನು ಪಡೆದಳು, ಬೃಹನ್ನಳೆಯ ಶಿಷ್ಯೆ, ಅಶ್ವತ್ಥಾಮನ ಗರ್ಭಕ್ಕೆ ಅಸ್ತ್ರ ಬಿಟ್ಟಾಗ ಕೃಷ್ಣನಿಂದ ರಕ್ಷಿತಳಾದಳು. ಹುಟ್ಟಿದ ಕೂಸೂ ಕೃಷ್ಣನಿಂದ ಬದುಕಿತು. |
| – | ಇವರು ಬೈದ ಋಷಿಯ ಶಿಷ್ಯರು. ಇಂದ್ರಿಯ ಜಯ ಸಾಧಿಸಿದ ಪುಣ್ಯಾತ್ಮ. ಗುರುಪತ್ನಿಗೆ ಕರ್ಣ ಕುಂಡಲ ಗುರು ದಕ್ಷಿಣೆಯಾಗಿ ನೀಡಿದ. ಯುದ್ಧಕ್ಕೆ ಕೃಷ್ಣನೇ ಕಾರಣನೆಂದು ಕೋಪಗೊಂಡಾಗ ಕೃಷ್ಣ ವಿಶ್ವರೂಪ ತೋರಿಸಿದ. ವಿಷ್ಣು ಭಕ್ತ. |
| ಧ್ರುವ, ಉತ್ತಮ | ಪ್ರಿಯವ್ರತನ ತಮ್ಮ. ಧ್ರುವನಿಗೆ ಉತ್ತಮ ಸ್ಥಾನಕೊಡದಿರಲು ಕಾಡಿಗೆ ಹೋದ. ಸಿದ್ಧಿ ಪಡೆದು ಬಂದ ನಂತರ ಗೌರವಿಸಿ ಸ್ಥಾನ ಕೊಟ್ಟ. ನಂತರ ಚಕ್ರವರ್ತಿಯನ್ನಾಗಿ ಪಟ್ಟ ಕಟ್ಟಿದ. |
| ಮತ್ಸ್ಯರಾಜ<br>ಸತ್ಯವತಿ | ಚಂದ್ರವಂಶಜ. ಚೇದಿ ದೇಶದ ರಾಜ. ತನ್ನ ರೇತಸ್ಸಿನಿಂದ ಮೀನಿನಲ್ಲಿ ಅವಳಿ ಮಕ್ಕಳಾದರು. ಗಂಡು ಮಗುವನ್ನು ಸಾಕಿದ. ಹೆಣ್ಣನ್ನು ಬೆಸ್ತರಾಜನಿಗಿತ್ತ. |
| ಗಣಪ, ಷಣ್ಮುಖ | ಇಂದ್ರನ ಗುರು, ಶಿವನ ಅರ್ಧಾಂಗಿ. ಕೈಲಾಸವಾಸಿ, ಇವಳೇ ಪಾರ್ವತಿ. ಸ್ತ್ರೀಯರ ಸೌಭಾಗ್ಯ ದೇವತೆ. |
| – | ಪ್ರದ್ಯುಮ್ನನ ಸೊಸೆ. ಸ್ವಪ್ನದಲ್ಲಿ ಅನಿರುದ್ಧನನ್ನು ಕಂಡು ವರಿಸಿದಳು. ಕೃಷ್ಣ ಮದುವೆ ಮಾಡಿದ. |
| ದೀರ್ಘತಮ | ಬೃಹಸ್ಪತಿ, ಸಂವರ್ತನ ಅಣ್ಣ ಚಂದ್ರನ ಅಳಿಯ |
| ಇರಾವಂತ | ತೀರ್ಥಯಾತ್ರೆಗೆ ಹೋಗಿದ್ದ ಅರ್ಜುನ ಮದುವೆಯಾದ, ಒಪ್ಪಂದದಂತೆ ಮಗನನ್ನು ಅಲ್ಲೇ ಬಿಟ್ಟು ಬಂದ. ಗಂಗೆಯಲ್ಲಿ ಮುಳುಗಿ ಸ್ವರ್ಗಸೇರಿದಳು. |
| – | ಯಾದವ, ಮಹಾರಥಿ, ಭಾರತ ಯುದ್ಧದಲ್ಲಿ ಭಾಗವಹಿಸಿದ್ದ |
| – | ಗಂಧರ್ವ, ಕ್ಷತ್ರಿಯ, ವೀರ ಕುವರ, ಯುದ್ಧದಲ್ಲಿ ಭಾಗವಹಿಸಿದ. ಕಡೆಯ ರಾತ್ರಿ ಶಿಬಿರದಲ್ಲಿ ಮಲಗಿದ್ದಾಗ ಅಶ್ವತ್ಥಾಮರಿಂದ ಹತನಾದ. |
| ಆಯು 6 ಮಂದಿ | ನಾರಾಯಣನ ತೊಡೆಯಿಂದ ಜನಿಸಿದಳು, ಲೋಕೋತ್ತರ ಸುಂದರಿ. ಸ್ವರ್ಗದ ಶ್ರೇಷ್ಠ ಅಪ್ಸರೆ. ಚಂದ್ರವಂಶದ ಮೂಲ ಕಾರಣಳು. ಅರ್ಜುನನಿಗೆ ಷಂಡನಾಗಲು ಶಪಿಸಿದಳು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಊರ್ಮಿಳಾ | ರಾಜಪುತ್ರಿ | – | ತ್ರೇ. | ರಾ. | ಜನಕರಾಜ | ಲಕ್ಷ್ಮಣ |
| ಊರ್ಣಾ | ಋಷಿಪತ್ನಿ | – | – | ಭಾಗವತ | – | ಮರೀಚಿ |
| ಋಚೀಕ | ಮಹರ್ಷಿ | – | ತ್ರೇ | ಭಾಗವತ | ಚ್ಯವನ | ಸತ್ಯವತಿ |
| ಋಷ್ಯಶೃಂಗ | ಬ್ರಹ್ಮರ್ಷಿ | – | ತ್ರೇ | ರಾ. | ವಿಭಾಂಡ | ಶಾಂತಿ |
| ಋತಾಯನ | ಅರಸು | – | ದ್ವಾ. | ಮ.ಭಾ. | – | – |
| ಋತುಪರ್ಣ | ಕ್ಷತ್ರಿಯ | – | ದ್ವಾ. | ಮ.ಭಾ. | ಸಿಂಧು (ಪೌತ್ರ) | – |
| ಋಕ್ಷರಾಜಸ್ | ಕಪಿ | – | ತ್ರೇ | ರಾ. | ಬ್ರಹ್ಮ | – |
| ಏಕಲವ್ಯ | ಮಣಿಮಾನ್ (ಅಸುರ) | – | ದ್ವಾ. | ಮ.ಭಾ. | ಹಿರಣ್ಯಧನು (ದೇವಶ್ರವ) | – |
| ಓಘವತಿ | ರಾಣಿ | – | ತ್ರೇ. | ರಾ. | ಓಘವಂತ | ಸುದರ್ಶನ |
| ಔತ್ತಮ | ಅರಸ | – | – | ಭಾಗವತ | ಉತ್ತಮ,ಬಹುಳೆ | – |
| ಔರ್ವ | ಮಹರ್ಷಿ | – | ದ್ವಾ | ಮ.ಭಾ. | ಚ್ಯವನ,ಆರುಷಿ | – |
| ಕರ್ಣ (ವಸುಷೇಣ) (ವೈಕರ್ತನ) (ವೃಷ) | ಸೂರ್ಯ | ಶ್ರೀಹರಿ, ಸಹಸ್ರವರ್ಮ, ನರಕಾಸುರ | ದ್ವಾ | ಮ.ಭಾ. | ಸೂರ್ಯ,ಕುಂತಿ ಅಧಿರಥ,ರಾಧೆ (ಸಾಕಿದವರು) (ಕಾನೀನ) | ಸೂತಕನ್ಯೆ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| - | ಪತಿವ್ರತೆ, ಲಕ್ಷ್ಮಣನಿಗೆ ರಾಮನೊಂದಿಗೆ ಹೋಗಲು ಅನುಮೋದಿಸಿದಳು. 14 ವರ್ಷ ನಿಶ್ಚಲಳಾಗಿದ್ದವಳು. |
| ಆರು ಪುತ್ರರು | ಇವಳ ಮಕ್ಕಳು ಬ್ರಹ್ಮನ ಶಾಪದಿಂದ ಕಾಲನೇಮಿಯ ಮಕ್ಕಳಾಗಿ (ದೇವಕಿ ಮಕ್ಕಳು) ಕಂಸನಿಂದ ಸತ್ತರು. |
| ಜಮದಗ್ನಿ | ಪರಶುರಾಮರ ತಾತ, ಗಾಧಿರಾಜನ ಅಳಿಯ. ಗಾಧಿ ಕನ್ಯಾ ಶುಲ್ಕವಾಗಿ ಕೇಳಿದ ಒಂದು ಸಾವಿರ ವಿಶಿಷ್ಟ ಕುದುರೆಗಳನ್ನು ವರುಣನಿಂದ ತಂದುಕೊಟ್ಟ. ಇವರು ಮಂತ್ರಿಸಿ ಇಟ್ಟಿದ್ದ ಚರುವನ್ನು ಹೆಂಡತಿ ಅತ್ತೆ ಅದಲು ಬದಲು ಮಾಡಿ ಸೇವಿಸಿದರು. ಇದರಿಂದಾಗಿ ಮಕ್ಕಳೂ ವ್ಯತ್ಯಾಸವಾಯಿತು. |
| ಶುನಶ್ಶೇಪ | ದಶರಥ ಇವರಿಂದ ಪುತ್ರಕಾಮೇಷ್ಟಿಯಾಗ ಮಾಡಿದ. |
| ಶಲ್ಯ, ಮಾದ್ರಿ | ಮದ್ರ ದೇಶದ ಅರಸು. ಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡಿ ಈ ಮಕ್ಕಳನ್ನು ಪಡೆದ. ಶಲ್ಯ ಬಲಾಢ್ಯ ಹಾಗೂ ವಾಯ್ವಾವೇಶಯುಕ್ತ ಮಗ. |
| ಸುದಾಸ | ನಲನಿಗೆ ಅಕ್ಷ ಹೃದಯ ಉಪದೇಶ ಮಾಡಿದ. ಅಯೋಧ್ಯಾರಾಜ. |
| ವಾಲಿ, ಸುಗ್ರೀವ | ಬ್ರಹ್ಮರ ಕಣ್ಣಿನ ನೀರಿನಿಂದ ಜನಿಸಿದ. ವಾನರರ ಮೂಲ ಪುರುಷ, ಬಾಲದಿಂದ ವಾಲಿ, ಕುತ್ತಿಗೆಯಿಂದ ಸುಗ್ರೀವರು ಜನಿಸಿದರು. ಕಿಷ್ಕಿಂದೆಯಲ್ಲೇ ಅಸುನೀಗಿದ. |
| ಕೇತುಮಂತ<br>ಏಕಲವ್ಯ ಸುತ | ಅಸುರ, ಜನ್ಮತಃ ಕ್ಷತ್ರಿಯನಾದರೂ ಹಿರಣ್ಯ ಧನುಷ್ ಎಂಬ ಬೇಡನಲ್ಲಿ ನಿಷಾಧನಾಗಿ ಬೆಳೆದ. ದ್ರೋಣರ ಆಕೃತಿ ನಿರ್ಮಿಸಿಕೊಂಡು ವಿದ್ಯೆ ಕಲಿತ. ದ್ರೋಣರ ಅಪೇಕ್ಷೆಯಂತೆ ತನ್ನ ಬಲ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಕೊಟ್ಟ ಜರಾಸಂಧನಿಗೆ ಸಹಕರಿಸುತ್ತಿದ್ದ. ದುರ್ಯೋಧನನಿಗೆ ಸಹಾಯ ಮಾಡಿದ. ಮುಂಚೆ ಪಿಶಾಚಗಳಿಂದ ಪೈಶಾಚಾಸ್ತ್ರಗಳನ್ನು ಕಲಿತಿದ್ದ. ದ್ರೋಣರು ಅವನ ಭಕ್ತಿಗೆ ಮೆಚ್ಚಿ ರಹಸ್ಯವಾಗಿ ರೈವತ ಪರ್ವತದಲ್ಲಿ ಎಲ್ಲ ವಿದ್ಯೆಯನ್ನು ಕಲಿಸಿದರು. ದ್ರೋಣರ ಶಿಷ್ಯ, ವಾಸ್ತವವಾಗಿ ಕರ್ಣನಂತೆ ಇವನೂ ಕ್ಷತ್ರಿಯ. ವಸುದೇವನ ತಮ್ಮ ದೇವಶ್ರವನ ಮಗ. ಆಮೇಲೆ ಬೇಡರವೃತ್ತಿ ಅವಲಂಬಿಸಿದ. ಬಲರಾಮನಿಂದ, ಪ್ರದ್ಯುಮ್ನರಿಂದ ಸೋತ ಇವನು ಮತ್ತೆ ಶಿವನಿಂದ ವರಪಡೆದು ಯುದ್ಧಕ್ಕೆ ಬಂದ. ಕೃಷ್ಣ ಚಕ್ರದಿ ತಲೆ ಕತ್ತರಿಸಿದ. ಯುದ್ಧದಲ್ಲಿ ಇವನ ಮಗನನ್ನು ಭೀಮ ಕೊಂದ. |
| - | ಸೂರ್ಯವಂಶಜಳು, ಪತಿವ್ರತೆ. |
| - | ಸೂರ್ಯ ವಂಶಜ. ಉತ್ತಾನಪಾದನ ಮೊಮ್ಮಗ. |
| ರುಚೀಕ, ಕಂದಳಿ | ತಾಯಿಯ ಊರುವಿನಿಂದ ಹುಟ್ಟಿದ, ದೂರ್ವಾಸರ ಮಾವ |
| ಶತ್ರುಂಜಯ, ದ್ವಿಪಾಟ,<br>ಸತ್ಯಸೇನ, ಚಿತ್ರಸೇನ<br>ಸುಶರ್ಮ ಸುಕ್ಷೇಣ<br>ಮುಂ. | ಸೂರ್ಯನಿಂದ ಕನ್ನಿಕಾವಸ್ಥೆಯ ಕುಂತಿಯಲ್ಲಿ ಜನನ, ಬಾಲಕನನ್ನು ನದಿಯಲ್ಲಿ ಪರಿತ್ಯಾಗ ಮಾಡಿದಳು. ಕವಚ-ಕುಂಡಲ ಪಡೆದಿದ್ದ, ಜನ್ಮತಹ ಕ್ಷತ್ರಿಯನಾದರೂ ಸೂತ ಅಧಿರದ ರಾಧೆಯರಲ್ಲಿ ಬೆಳೆದ. ಕರ್ಣನನ್ನು ದ್ರೋಣರು ಶಿಷ್ಯನನ್ನಾಗಿ ಸ್ವೀಕರಿಸಲಿಲ್ಲ. ಪರಶುರಾಮರಲ್ಲಿಗೆ ಬ್ರಾಹ್ಮಣ ವೇಷದಿ ಹೋಗಿ 4 ವರ್ಷ ವಿದ್ಯೆ ಕಲಿತ. ಕಡೆಗೆ ಅವರ ಶಾಪಕ್ಕೆ ಗುರಿಯಾದ. ಅರ್ಜುನನ ಪ್ರತಿದ್ವಂದಿಯಾಗಿ ಬೆಳೆದ. ದುರ್ಯೋಧನ ಅಂಗರಾಜನನ್ನಾಗಿ ಮಾಡಿದ. ಅವನ ಪರಮ ಆಪ್ತ ಮಿತ್ರನಾದ. ಭೀಮನಿಂದ ಪರಾಜಿತಗೊಂಡ. ರಾಜಸೂಯದಲ್ಲಿ ಭಾಗವಹಿಸಿದ. ಇವನು ಅಂಗ ವಂಗ ದೇಶಗಳ ರಾಜನಾಗಿದ್ದ. ದ್ಯೂತಕಾಲದಲ್ಲಿದ್ದು ದುರ್ಯೋಧನನಿಗೆ ಕೆಟ್ಟ ಸಲಹೆಕೊಟ್ಟ. ಅರ್ಜುನನ ಪ್ರತಿಜ್ಞೆಗೆ ಒಳಗಾದ. ದ್ವೈತವನದಲ್ಲಿ ಗಂಧರ್ವರಿಂದ ಸೋತ. ಅರ್ಜುನನನ್ನು ವಧಿಸುವುದಾಗಿ ದುರ್ಯೋಧನನಲ್ಲಿ ಪ್ರತಿಜ್ಞೆ. ಮಹಾಯುದ್ಧದಲ್ಲಿ ಭೀಷ್ಮರ ಆಧಿಪತ್ಯದಲ್ಲಿ ಯುದ್ಧಮಾಡಲಿಲ್ಲ. ಇವನು ಅರ್ಧ ರಥಿ. ಕೃಷ್ಣನ ಉಪದೇಶ, ತಾಯಿ ಕುಂತಿಗೆ ಮಾತುಕೊಟ್ಟದ್ದು ಸಾರಥಿ ಶಲ್ಯರಾಜನಿಂದ ತೇಜೋವಧೆ. ದಾನಶೂರ, ಇಂದ್ರನಿಗೆ ಕವಚಕುಂಡಲ ಕೊಟ್ಟ, ಶಕ್ತ್ಯಾಯುಧವನ್ನು ಪಡೆದ. ಯುದ್ಧದಲ್ಲಿ 2 ದಿನದ ಸೈನ್ಯಾಧಿಪತ್ಯ, ಇವನ ಮಕ್ಕಳು ಅರ್ಜುನಭೀಮರಿಂದ ಸತ್ತರು. ಯುದ್ಧದಲ್ಲಿ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಕಪಿಲ | ವಿಷ್ಣು | - | ತ್ರೇ. | ಭಾಗವತ | ಕರ್ದಮ, ದೇವಹೂತಿ | ಲಕ್ಷ್ಮೀ |
| ಕಂಕ | ಯಮ | - | ದ್ವಾ | ಮ.ಭಾ. | ಪಾಂಡು,ಕುಂತಿ | ದ್ರೌಪದಿ, ದೇವಕಿ |
| ಕಚ | ಮಹರ್ಷಿ | - | ದ್ವಾ. | ಮ.ಭಾ. | ಬೃಹಸ್ಪತ್ಯಾಚಾರ್ಯ | - |
| ಕಕುದ್ಮಿ(ರೇವತ) | ಅರಸು | - | ತ್ರೇ. | ಭಾಗವತ | ರೇವತ | - |
| ಕಣ್ವ | ಮಹರ್ಷಿ | - | ದ್ವಾ. | ಮ.ಭಾ. | ಮೇಧಾತಿಥಿ | - |
| ಕಂಸ | ಕಾಲನೇಮಿ | ಭೃಗು,ವಾಯು | ದ್ವಾ. | ಮ.ಭಾ. | ಉಗ್ರಸೇನ ಪತ್ನಿ (ದೃಮಿಲ ಅಸುರ) | ಅಸ್ತಿ, ಪ್ರಾಸ್ತಿ |
| ಕಣಿಕ | ಬ್ರಾಹ್ಮಣ | - | ದ್ವಾ. | ಮ.ಭಾ. | ಭಾರದ್ವಜಗೋತ್ರಜ | - |
| ಕಯಾದು | ರಾಣಿ | - | ತ್ರೇ. | ಭಾಗವತ. | ಜಂಭಾಸುರ | ಹಿರಣ್ಯಕಶಿಪು |
| ಕಶ್ಯಪ | ಬ್ರಹ್ಮರ್ಷಿ | - | ತ್ರೇ. | ಭಾಗವತ | ಮರೀಚಿ, ಕಲಾ | ಅದಿತಿ, ದಿತಿ 17ಪತ್ನಿ ಕಲಾ, ಪುಲೋಮ ಮುಂ. |
| ಕರ್ದಮ | ಮಹರ್ಷಿ | - | ತ್ರೇ. | ಭಾಗವತ | ಬ್ರಹ್ಮ(ಮಾನಸ ಪು.) | ದೇವಹೂತಿ |
| ಕಲಿ | ದೈತ್ಯಾಗ್ರೇಸರ | - | ದ್ವಾ/ಕಲಿ. | ಮ.ಭಾ. | - | ಅಲಕ್ಷ್ಮೀ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ತನ್ನ ಅವಿವೇಕದಿಂದ ಅವಮಾನಿತನಾದ. ಪಾಂಡವರ ವೈಭವ ಸಹಿಸಲಾಗದೆ ಶಕುನಿಯನ್ನು ಮುಂದುಮಾಡಿ ಜೂಜಿನಲ್ಲಿ ಧರ್ಮರಾಜನನ್ನು ಮೋಸದಿ ಸೋಲಿಸಿದ. ದ್ರೌಪದಿಯ ವಸ್ತ್ರಾಪಹರಣಕ್ಕೆ ಕೈ ಹಾಕಿ ಸರ್ವನಾಶಕ್ಕೆ ಒಳಗಾದ. ಇವನನ್ನು ವಧಿಸಲು ಭೀಮನ ಪ್ರತಿಜ್ಞೆ. ಪಾಂಡವರನ್ನು ವನಕ್ಕಟ್ಟಿದ. ಮೈತ್ರೇಯ ಋಷಿಯ ಶಾಪ. ಘೋಷಯಾತ್ರೆಯಲ್ಲಿ ಗಂಧರ್ವರಿಂದ ಪರಾಜಿತನಾಗಿ ಅವಮಾನಿತನಾದ. ಭೀಮಾರ್ಜುನರೇ ಆ ಚಿತ್ರಸೇನನನ್ನು ಸೋಲಿಸಿ ಇವರನ್ನು ಬಂಧನದಿಂದ ಬಿಡಿಸಿದರು. ಅವಮಾನಿತ ಇವನು ರಸಾತಳದಲ್ಲಿ ಅಸುರರಿಂದ ಉಪದೇಶ ಪಡೆದ. ಉತ್ತರಗೋಗ್ರಹಣ ನೆಪದಲ್ಲಿ ವಿರಾಟನಗರಕ್ಕೆ ಹೋಗಿ ಅಪಜಯ ಕಂಡ. ಕೃಷ್ಣನ ಸಹಾಯ ಪಡೆಯಲು ಹೋಗಿ ಅವನನ್ನೇ ಬಿಟ್ಟ ನಾರಾಯಣಿ ಸೈನ್ಯ ಪಡೆದ ಮೂರ್ಖ. ಸಂಧಾನಕ್ಕೆ ಬಂದ ಕೃಷ್ಣನನ್ನು ಕಟ್ಟಿಹಾಕಲು ಪ್ರಯತ್ನಿಸಿ ದುಷ್ಟಬುದ್ಧಿ ತೋರಿದ. ಶ್ರೀಕೃಷ್ಣನ ಯಾವ ಸೂಚನೆಗೂ ಒಪ್ಪದೆ ಯುದ್ಧಕ್ಕೆ ಸಿದ್ಧನಾದ. ಭೀಷ್ಮರನ್ನೇ ಸೈನ್ಯಾಧಿಪತಿಗಳನ್ನಾಗಿಸಿ ಕುರುಕ್ಷೇತ್ರ ಬಯಲಿಗೆ ಸೈನ್ಯ ಕಳಿಸಿದ. ಶಲ್ಯನನ್ನು ಸತ್ಕರಿಸಿ ಒಳಗೆ ಹಾಕಿಕೊಂಡ. ಮೊದಲನೆ ದಿನ ಯುದ್ಧದಲ್ಲಿ ಭೀಮನಿಂದ ಪರಾಜಿತ ಗೊಂಡ. ಭೀಷ್ಮರನ್ನು ಅವಾಚ್ಯ ಶಬ್ದಗಳಿಂದ ಬೈದ. ಪ್ರತಿದಿನ ಅವನ ಸೋದರರು ಭೀಮನಿಂದ ಹತರಾಗುತ್ತಿದ್ದದ್ದನ್ನು ಕಂಡ. ಎಲ್ಲ ಪ್ರಧಾನರೊಂದಿಗೆ ದ್ವಂದ್ವ ಯುದ್ಧವಾಡಿದ. ಭೀಷ್ಮರ ನಂತರ ದ್ರೋಣರನ್ನು ಸೈನ್ಯಾಧಿಪತಿಗಳನ್ನಾಗಿ ಮಾಡಿ ಅಭಿಮನ್ಯುವನ್ನು ಮೋಸದಿಂದ ಕೊಲ್ಲಿಸಿದ. ದ್ರೋಣರನ್ನು ನಿಂದಿಸಿದ. ತನ್ನೆದುರಿಗೆ ಆದ ದುಃಶಾಸನನ ವಧೆಯಿಂದ ದುಖಿತನಾದ. ತನ್ನೆದುರಲ್ಲೆ ಎಲ್ಲ ಸೋದರರು ಬಂಧು ಆಪ್ತ ಸ್ನೇಹಿತರನ್ನು ಕಳೆದುಕೊಂಡ. ಕಡೆಗೆ ದ್ವೈಪಾಯನ ಸರೋವರದಲ್ಲಿ ಅಡಗಿಕೊಂಡು ನಂತರ ಬಂದು ಭೀಮನೊಡನೆ ಭಯಂಕರ ಗಧಾಯುದ್ಧ ಮಾಡಿದ. ತೊಡೆ ಮುರಿದು ಕೆಳಗೆ ಬಿದ್ದ. ಅಧರ್ಮದಿಂದ ಭೀಮ ಹೊಡೆದನೆಂದು ಬಲರಾಮ ವಾದಿಸಲು, ಕೃಷ್ಣ ಹೀಗೆ ಕೊಂದದ್ದು ಧರ್ಮದಿಂದಲೇ ಎಂದು ಪ್ರತಿಪಾದಿಸಿದ. ಅಶ್ವತ್ಥಾಮನಿಗೆ ಸೇನಾನಿಯಾಗಿ ಅಭಿಷೇಕ ಮಾಡಿ ಪಾಂಡವರನ್ನು ಕೊಂದು ತನ್ನ ಕ್ಷೇತ್ರ ಬೆಳೆಸಲು ಕೇಳಿಕೊಂಡ. ಕಡೆಗೆ ಅನಾಥನಾಗಿ ಸತ್ತ. ಅಸುರ ಮೋಹನಕ್ಕೆ ಇವನ ಮೇಲೆ ಪುಷ್ಪವೃಷ್ಟಿಯಾಯಿತು. ಇವನು ನರಿನಾಯಿಯ ಬಾಯಿಗೆ ತುತ್ತಾದ. ಇವನು ಅಜ್ಞಾನದ ಸಂಕೇತ. |
| ಜನಮೇಜಯ<br>ಭರತ | ಚಂದ್ರವಂಶಜ, ಮಹಾವೀರ, ಕಣ್ವ ಆಶ್ರಮದಲ್ಲಿ ಶಕುಂತಲೆಯನ್ನು ಕಂಡು ಮೋಹಿತನಾದ. ಗಾಂಧರ್ವ ವಿವಾಹವಾಗಿ ಮರೆತು ನಂತರ ಅಂಗೀಕರಿಸಿದ ಆಕಾಶವಾಣಿಯಿಂದಾಗಿ. ಕಡೆಗೆ ಭರತಗೆ ಪಟ್ಟಕಟ್ಟಿದ. |
| ಇಬ್ಬರು ಪುತ್ರರು | ಧೃತರಾಷ್ಟ್ರನ ಏಕೈಕ ಮಗಳು. ಎಲ್ಲರಿಗಿಂತಲೂ ಕಿರಿಯಳು. ರಕ್ಕಸಿ. ಇಬ್ಬರು ಮಕ್ಕಳೂ ಅರ್ಜುನನಿಂದ ಸತ್ತರು. ಇವಳ ಗಂಡನೂ ಅರ್ಜುನನಿಂದ ಸತ್ತ. ಇವಳ ನೂರು ಸೋದರರೂ ಭೀಮನಿಂದ ಸತ್ತರು. |
| ಅನೇಕ ದುಷ್ಟಪುತ್ರರು | ರಾಕ್ಷಸ. ಪರಾಕ್ರಮಿ ಎರಡನೇಯವ. ಮಹಾ ಪಾಪಿ ಅಣ್ಣನಿಗೆ ದುಷ್ಟಕಾರ್ಯಗಳಲ್ಲಿ ಬಲಗೈಯಂತಿದ್ದ. ಕಪಟ ದ್ಯೂತದಲ್ಲಿ ಧರ್ಮರಾಜ ಸೋತ ಮೇಲೆ ಅಣ್ಣನ ಮಾತಿನಂತೆ ದ್ರೌಪದಿಯನ್ನು ಎಳೆತಂದ ದುರಾತ್ಮ. ಭೀಮನ ಭೀಕರ ಪ್ರತಿಜ್ಞೆಗೆ ಒಳಗಾದ. ಉತ್ತರ ಗೋಗ್ರಹಣದಲ್ಲಿ ಅರ್ಜುನನಿಂದ ಸೋತ. ಯುದ್ಧದಲ್ಲಿ ಅಭಿಮನ್ಯು, ಅರ್ಜುನ, ಸಾತ್ಯಕಿಯರಿಂದ ಸೋತ. ಅಭಿಮನ್ಯುವನ್ನು ಮೋಸದಿಂದ ಕೊಂದದ್ದು ಇವನ ಮಗ. ಇವನ ಎಲ್ಲ ಮಕ್ಕಳನ್ನು ಉಪಪಾಂಡವರು ಕೊಂದರು. ಎಲ್ಲರ ಸಮ್ಮುಖದಲ್ಲಿ ಭೀಮ ಇವನ ಬಲಕೈಯನ್ನು ಕಿತ್ತಿ ಎದೆ ಸೀಳಿ ಭಯಂಕರವಾಗಿ ಸಾಯಿಸಿದ. ಇವನ ರಕ್ತವನ್ನು ಕುಡಿದಂತೆ ಮಾಡಿದ. ದುಃಶ್ಯಾಸನ ಅಧ್ಯಾತ್ಮದಲ್ಲಿ ವಿಪರೀತ ಜ್ಞಾನ (ಭ್ರಾಂತಿ) ಸಂಕೇತ. |
| – | ಪ್ರಭಾಸ ಎಂಬ ವಸು. ಎಂಟು ವಸುಗಳಲ್ಲಿ ಕಿರಿಯ. ನಂದಿನಿಯನ್ನು ಕದೆಯಲು ಹೋಗಿ ವಶಿಷ್ಠರ ಶಾಪದಿಂದ ಮನುಷ್ಯನಾಗಿ ಶಂತನು ದ್ವಾರಾ ಗಂಗೆಯಲ್ಲಿ ಜನಿಸಿದ. ಇವನೇ ಭೀಷ್ಮಾಚಾರ್ಯನಾಗಿ ಅವತರಿಸಿದ. |
| ದ್ರೌಪದಿ ದೃಷ್ಟದ್ಯುಮ್ನ<br>ಶಿಖಂಡಿ, ಸುಮಿತ್ರ<br>ಮೊ. ಆರು ಪುತ್ರರು<br>ಯುಧಾಮನ್ಯು | ಗಂಧರ್ವ, ವೀರ್ಯವನ್ನು ಕಾಲಲ್ಲಿ ಉಜ್ಜಿದರಿಂದ ಜನಿಸಿದ. ಅಯೋನಿಜ. ದ್ರೋಣಾಚಾರ್ಯರ ಸಹಪಾಠಿ, ಪಾಂಚಾಲದೇಶದ ಅರಸು. ಇವನಿಂದ ದ್ರೋಣರು ತಿರಸ್ಕಾರ ಹೊಂದಿದ ಸೇಡಿಗೆ ಇವನನ್ನು ಅರ್ಜುನನ ಮೂಲಕ ಬಂಧಿಸಿದರು. ಈ ಸೇಡಿನಿಂದ ಯಾಜೋಪಯಾಜರಿಂದ ಯಜ್ಞ ಮಾಡಿ ಅರ್ಜುನನಿಗೆ ತಕ್ಕ ಕನ್ಯೆ ಹಾಗೂ ದ್ರೋಣರ ಹಂತಕ ಪುತ್ರನನ್ನು ಪಡೆದ. ದ್ರೌಪದೀ ಸ್ವಯಂವರದ ನಂತರ ಇವನಿಗೆ ಬಂದ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ದ್ರುಮಿಲ | ರಾಕ್ಷಸ | -- | ದ್ವಾ. | ಮ.ಭಾ. | - | (ಉಗ್ರಸೇನನ ಮಡದಿ) |
| ದೇವಕ | ಗಂಧರ್ವ (ದೇವಕ) | -- | ದ್ವಾ. | ಮ.ಭಾ. | ಆಹುಕ, | |
| ದೇವರಾತ | ಅರಸು | -- | ತ್ರೇ. | ರಾ. | ಜನಕನ ವಂಶಜ ಸುಕೇತು | - |
| ದೇವಲ(ಅಸಿತ) | ಮಹರ್ಷಿ | -- | ದ್ವಾ. | ಮ.ಭಾ. | ಕೃಶಾಶ್ವ | ಧಿಕ್ಷಣೆ |
| ದೇವಕೀ | ಅದಿತಿ | -- | ದ್ವಾ. | ಮ.ಭಾ. | ದೇವಕ, (ಆಹುಕನ ಸಾಕುಮಗಳು) | ವಸುದೇವ |
| ದೇವಕೀ | ಶ್ಯಾಮಲ | -- | ದ್ವಾ. | ಮ.ಭಾ. | ಶಿಶುಪಾಲ | ಯುಧಿಷ್ಠಿರ |
| ದೇವಲ | ಋಷಿ | -- | ದ್ವಾ. | ಮ.ಭಾ. | ಅಸಿತಮುನಿ | ಏಕಪರ್ಣೆ |
| ದೇವೀ | ಭಾರತಿ | -- | ದ್ವಾ. | ಮ.ಭಾ. | ವಸುದೇವ, ರೋಹಿಣಿ | ಭೀಮಸೇನ |
| ದೇವಯಾನಿ | ಬ್ರಾಹ್ಮಣ ಸ್ತ್ರೀ | -- | - | ಭಾಗವತ | ಶುಕ್ರಾಚಾರ್ಯ, ಊರ್ಜಸ್ವತಿ | ಯಯಾತಿ |
| ದೇವಹೂತಿ | ಋಷಿಪತ್ನಿ | -- | - | ಭಾಗವತ | ಸ್ವಾಯಂಭುಮನು | ಕರ್ದಮಋಷಿ |
| ದೇವಾಪಿ | ಕ್ಷತ್ರಿಯ | -- | ದ್ವಾ. | ಮ.ಭಾ. | ಪ್ರತೀಪ, ಸುನಂದ | - |
| ದ್ರೋಣ | ವಸು | -- | ದ್ವಾ. | ಮ.ಭಾ. | ಧರ್ಮ, ವಸು | ಧರಾ |
| ದೇವಾಂತಕ | ಅಸುರ | -- | ತ್ರೇ. | ರಾ. | ರಾವಣ, ಗಂಧರ್ವ ಸ್ತ್ರೀ | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಮತ್ತು ವಿತ್ತಮಾಜಸ. | ಪಂಚಪತಿತ್ವ ಸಂಶಯವನ್ನು ವ್ಯಾಸರು ದಿವ್ಯ ದೃಷ್ಟಿ ಕೊಟ್ಟು ಪರಿಹರಿಸಿದರು. ಪರಾಕ್ರಮಿಯಾದ ಇವನು ಮಹಾ ಯುದ್ಧದಲ್ಲಿ ಪ್ರಧಾನ ಪಾತ್ರವಹಿಸಿದ. ದ್ರೋಣ ಪರ್ವದಲ್ಲಿ ಯುದ್ಧದಲ್ಲಿ ದ್ರೋಣರಿಂದ ಹತನಾದ. |
| ಕಂಸ | ಒಮ್ಮೆ ಉಗ್ರಸೇನನ ರೂಪಧರಿಸಿ ಅವನ ಪತ್ನಿಯಲ್ಲಿ ಕಂಸನನ್ನು ಪಡೆದ. ಕಡೆಗೆ ದುರ್ಗತಿಯಾಯಿತು. |
| 4 ಪುತ್ರರು 7 ಪುತ್ರಿಯರು | ಯದುವಂಶಜ, ಇವನ ಏಳು ಪುತ್ರಿಯರನ್ನೂ ವಸುದೇವ ಮದುವೆಯಾದ. ದೇವಕಿ ಕಡೆಯವಳು. ಇವನು ಉಗ್ರಸೇನನ ಸೋದರ. |
| ಬೃಹದುಕ್ಥ | ಶಿವ ಧನಸ್ಸನ್ನು ಇವನಲ್ಲಿ ನ್ಯಾಸವಾಗಿಟ್ಟನು. ಆದನ್ನೇ ಸೀತಾ ಸ್ವಯಂವರದಲ್ಲಿ ಪಣವಾಗಿಟ್ಟದ್ದು. |
| - | ಧೌಮ್ಯರ ಸೋದರ. ಮರೀಚಿಯ ಆರು ಮಕ್ಕಳಿಗೆ ಶಾಪವಿತ್ತರು. ಅವರೇ ದೈತ್ಯರಾಗಿ ಕಾಲನೇಮಿ ಮಕ್ಕಳಾದರು. ಕಂಸನಿಂದ ಸತ್ತರು. |
| ಕೃಷ್ಣ ಬಲರಾಮ ಸುಭದ್ರಾ, ಸಾರಕಾ | ತಪಸ್ಸನ್ನಾಚರಿಸಿ ವಿಷ್ಣುವಿನಿಂದ ಅವನೆ ಮಗನಾಗಲು ವರ ಪಡೆದಿದ್ದಳು. ಕಂಸಗೆ ಸೋದರತ್ತೆ ಹಾಗೂ ತಂಗಿ ಆಗಿದ್ದಳು. ಅಣ್ಣ ಕಂಸ ನವದಂಪತಿಗಳನ್ನು ಕಾರಾಗೃಹದಲ್ಲಿ ಆಕಾಶವಾಣಿಯಂತೆ ಬಂಧಿಸಿದ. ಇವಳಲ್ಲಿ ಜನಿಸಿದ ಆರು ಮಕ್ಕಳನ್ನು ಕೊಂದ. ಎಂಟನೇ ಶಿಶುವಾಗಿ ಶ್ರೀಕೃಷ್ಣ ಅವತಾರ ಮಾಡಿದ. ಪುಣ್ಯಾತ್ಮಳು. ಕಂಸ ಸತ್ತ ಮೇಲೆ ಮುಕ್ತಳಾದಳು. ಕೃಷ್ಣ ಪರಂಧಾಮಕ್ಕೆ ತೆರಳಿದ ನಂತರ ವಸುದೇವನೊಂದಿಗೆ ಸಹಗಮನ ಮಾಡಿದಳು. |
| ಯೌಧೇಯ | ದ್ರೌಪದಿಯ ನಂತರ ಇವಳನ್ನು ಮದುವೆಯಾದ. ಪಟ್ಟಾಭಿಷೇಕದ ನಂತರ ಇವಳೊಂದಿಗಿದ್ದ. |
| - | ಕಶ್ಯಪರ ಮೊಮ್ಮಗ. ಹಿಮಾಲಯನ ಅಳಿಯ. ವೇದವ್ಯಾಸರ ಶಿಷ್ಯ ಧರ್ಮಶಾಸ್ತ್ರಜ್ಞ. ಧೌಮ್ಯರ ಅಣ್ಣ ಪಾಂಡವರೊಂದಿಗಿದ್ದರು. ಜನಮೇಜಯ ಸರ್ಪಯಾಗದಲ್ಲೂ ಇದ್ದರು. ಮರೀಚಿ ಪುತ್ರರಿಗೆ ಶಾಪಕೊಟ್ಟರು. ಅವರೆ ಆರು ಜನ ವಸುದೇವನ ಪುತ್ರರಾಗಿ ಹುಟ್ಟಿ ಕಂಸನಿಂದ ಸತ್ತರು. |
| - | ರಾಕಾ ನಾಮಂತರ ಕಡೆಗೆ ದ್ರೌಪದಿಯಲ್ಲಿ ಐಕ್ಯ ಹೊಂದಿದಳು. |
| ಯದು, ತುರ್ವಸು | ಶರ್ಮಿಷ್ಠೆಯ ಸ್ನೇಹಿತೆ ಹಾಗೂ ಸವತಿ, ಯಯಾತಿಯನ್ನು ಪ್ರೀತಿಸಿ ಮದುವೆಯಾದಳು. ಇವಳ ಮಕ್ಕಳು ರಾಜ್ಯಾಧಿಕಾರಕ್ಕೆ ಬರಲಿಲ್ಲ. ಯದುವಂಶದಲ್ಲಿ ಕೃಷ್ಣ ಅವತರಿಸಿದ. |
| ಅನಸೂಯಾದಿ 13 ಪುತ್ರಿಯರು ಕಪಿಲ | ರಾಜಪುತ್ರಿ ಋಷಿಪತ್ನಿಯಾದಳು. ಮಗನಿಂದ ಸಾಂಖ್ಯಶಾಸ್ತ್ರ ಉಪದೇಶ ಪಡೆದಳು. ಭಗವಂತನನ್ನೇ ಮಗನನ್ನಾಗಿ ಪಡೆದು ಸದ್ಗತಿ ಹೊಂದಿದಳು. |
| - | ಚಂದ್ರವಂಶಜ. ಶಂತನು ಬಾಹ್ಲೀಕರ ಅಣ್ಣ ಚರ್ಮ ರೋಗ ಯುಕ್ತನಾಗಿ ಸಂನ್ಯಾಸಿಯಾದ, ಕಾಡಿಗೆ ತಪಸ್ಸಿಗೆ ಹೋದ, ರಾಜನಾಗಲಿಲ್ಲ, ಮುಂದಿನ ಕೃತಯುಗದಲ್ಲಿ ವಿಷ್ಣು ಅನುಗ್ರಹದಿ ಇವನೇ ಚಂದ್ರ ವಂಶವನ್ನು ಬೆಳೆಸುವವ. |
| - | ವಶಿಷ್ಠರ ಶಾಪದಿಂದ ಮನುಷ್ಯನಾಗಿ ಶಂತನು ಗಂಗಾಯಲ್ಲಿ ಭೀಷ್ಮನಾಗಿ ಜನಿಸಿದ. ಈ ದಂಪತಿಗಳು ತಪಸ್ಸಿನ ಫಲವಾಗಿ ನಂದಗೋಪ ಯಶೋದೆಯರಾಗಿ ಹುಟ್ಟಿದರು. |
| - | ನರಾಂತಕನ ಸಹೋದರ. ಶಿವನ ವರವಿತ್ತು. ಹನುಮಂತನಿಂದ ಸತ್ತ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ದ್ರೋಣಾಚಾರ್ಯ | ಬೃಹಸ್ಪತಿ | ಚ. ಬ್ರಹ್ಮ | ದ್ವಾ. | ಮ.ಭಾ. | ಭರದ್ವಾಜ, (ಘೃತಾಚೀ) | ಕೃಪೀ |

**ಶಿಲೋಂಛವೃತ್ತಿ: ಉಂಛಃ ಕಣಶ ಆದಾನಂ ಕಣಿ ಶಾದ್ಯರ್ಜನಂ ಶಿಲಮ್**

ಹೊಲಗಳಲ್ಲಿ ಬೆಳೆಯನ್ನು ಕೊಯ್ದ ಮೇಲೆ, ಆ ಹೊಲದಲ್ಲಿ ಬಿದ್ದಿದ್ದ ಕಾಳುಗಳನ್ನು ಸಂಗ್ರಹಿಸಿ ಉಪಯೋಗಿಸಿಕೊಂಡು ಜೀವನ ಸಾಗಿಸುವ ವೃತ್ತಿ, ಹೊಲಗಳಲ್ಲಿ ಬಿದ್ದಿದ್ದ ತೆನೆಗಳನ್ನು ಸಂಗ್ರಹಸಿ ಉಪಯೋಗಿಸಿಕೊಂಡಿರುವುದೂ 'ಶಿಲವೃತ್ತಿ' ಶಿಲೋಂಛವೃತ್ತಿಯಲ್ಲಿ ದ್ರೋಣರು ಜೀವನ ಪಾಲಿಸುತ್ತಿದ್ದರು.

(ಶಿಲಂ ಚ ಉಂಛಂ ಚ ಶಿಲೋಂಛೇ ತಾಭ್ಯಾಂ ವೃತ್ತಿರ್ಜೀವನೋಪಾಯಃ)

| | | | | | | |
|---|---|---|---|---|---|---|
| ದ್ರೌಪದೀ | ಭಾರತಿ | ಪಾರ್ವತಿ, ಶಚಿ ಶ್ಯಾಮಲಾ, ಉಷಾ | ದ್ವಾ. | ಮ.ಭಾ. | ದೃಪದ | ಪಂಚಪಾಂಡವರು (ಭೀಮಸೇನ) |

**ಸಂತಾನೋತ್ಪತ್ತಿಯ ಬಗೆಗಳು**

**ಸಂತಿ ದೇವನಿಕಾರ್ಯಶ್ಚ ಸಂಕಲ್ಪಾಜ್ಜನಯಂತಿ ಯೇ ।**
**ವಾಚಾ ದೃಷ್ಟ್ಯಾ ತಥಾ ಸ್ಪರ್ಶಾತ್ ಸಂಘರ್ಷೇಣೇತಿ ಪಂಚಧಾ ॥**

1. **ಸಂಕಲ್ಪದಿಂದ :** ಉದಾ – ಚ. ಬ್ರಹ್ಮ ವಾಯು, ಭಾರತಿ .... ಸಕಲ ಬ್ರಹ್ಮಾಂಡ (ಭಗವತ್ಸಂಕಲ್ಪಾನುಸಾರವಾಗಿ)
2. **ಮಾತಿನಿಂದ : (ವರದಿಂದ)** ಉದಾ-ಪಾಂಡವರು(ಮಂತ್ರದಿಂದ), ದ್ರೌಪದಿ(ಯಜ್ಞ), ಶಿಖಂಡಿ ಮುಂ॥
3. **ದರ್ಶನದಿಂದ :** ಉದಾ – ದ್ರೋಣ, ಕೃಪ, ಪರಾಶರರು – ಮುಂ॥ (ದೃಷ್ಟಿಯಿಂದ)
4. **ಸ್ಪರ್ಶದಿಂದ :** ಉದಾ – ಪಾಂಡವರು -- ಮುಂ॥
5. **ಸಂಘರ್ಷದಿಂದ :** ಉದಾ – ಲೋಕ ಪ್ರಸಿದ್ಧವಾದ ವಿಷಯ (ಮೈಥುನದಿಂದ)

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಅಶ್ವತ್ಥಾಮ | ಭರದ್ವಾಜರ ವೀರ್ಯವನ್ನು ಬಂದು ದ್ರೋಣದಲ್ಲಿರಿಸಿ ಅದೇ ದ್ರೋಣ ಎಂಬ ಗಂಡುಮಗುವಾಯಿತು. ಅಯೋನಿಜರು. ಅಗ್ನಿವೇಶ್ಯರಲ್ಲಿ ಬಾಲ್ಯದಲ್ಲಿ ಇವರು ದ್ರುಪದ ಧನುರ್ವಿದ್ಯೆ ಕಲೆತರು. ಶಿಲೋಂಚ ವೃತ್ತಿಯಲ್ಲಿ ಹಸ್ತಿನಾವತಿಯಲ್ಲಿದ್ದರು. ಶಿವನ ಅನುಗ್ರಹದಿಂದ ಅಶ್ವತ್ಥಾಮರನ್ನು ಪಡೆದರು. ದ್ರುಪದ ಆದರಿಸದ ಕಾರಣಕ್ಕೆ ಸೇಡಿನಿಂದ ಮತ್ತು ಮಗನಿಗೆ ಹಾಲಿಗಾಗಿ ಪರಶುರಾಮರಲ್ಲಿ ಹೋಗಿ 12 ವರ್ಷ ವಿದ್ಯೆ ಕಲಿತರು. ಅಂದಿನ ಕುರು-ಪಾಂಡವ ಹಾಗೂ ಅನೇಕ ರಾಜಕುವರರಿಗೆ ಧನುರ್ವಿದ್ಯೆಯನ್ನು ಕಲಿಸಿದರು. ಕರ್ಣನಿಗೆ ಅವಕಾಶ ಕೊಡಲಿಲ್ಲ. ರಂಗಭೂಮಿಯಲ್ಲಿ ಎಲ್ಲ ಶಿಷ್ಯರ ಅಸ್ತ್ರ-ಶಸ್ತ್ರ ವಿದ್ಯಾ ಪ್ರದರ್ಶನ. ರಾಜಸೂಯಯಾಗದಲ್ಲಿ ಮೇಲ್ವಿಚಾರಕರಾಗಿದ್ದರು. ಅರ್ಜುನನನ್ನು ಏಕೈಕ ಧನ್ವಿಯನ್ನಾಗಿಸಿ ದೃಪದನನ್ನು ಸೆರೆಹಿಡಿದರು. ಮಾತಿನಂತೆ ಅರ್ಧರಾಜ್ಯವನ್ನು ಕಸಿದುಕೊಂಡರು. ರಹಸ್ಯವಾಗಿ ಏಕಲವ್ಯನಿಗೂ ಪಾಠ ಹೇಳಿದರು. ದ್ರೌಪದೀಗೆ ಮಾನಭಂಗ ಸಂದರ್ಭದಲ್ಲಿ ಅಸಹಾಯಕರಾಗಿ ವೀಕ್ಷಿಸಿದರು. ಉತ್ತರ ಗೋಗ್ರಹಣದಲ್ಲಿ ಭಾಗಿಯಾದರು. ಪಾಂಡವರ ಪಕ್ಷಪಾತಿ. ಆದರೂ ಭೀಮನ ಶಪಥಕ್ಕೆ ಭೀತರಾದ ದುರ್ಯೋಧನಾದಿಗಳು ಕಾಲಿಗೆ ಬೀಳಲು ಅವರ ಪರವಾಗಿ ಯುದ್ಧದಲ್ಲಿ ಹೋರಾಡುವುದಾಗಿ ಭಾಷೆ ಕೊಟ್ಟರು. ಭೀಷ್ಮರು ಬಿದ್ದ ನಂತರ ಯುದ್ಧದಲ್ಲಿ ಐದು ದಿನ ಸೇನಾಧಿಪತ್ಯವಹಿಸಿದರು. ಪ್ರಮುಖರು ಇವರ ಸಮಯದಲ್ಲಿ ಸತ್ತರು. ದುರ್ಯೋಧನನಿಂದ ಅವಾಚ್ಯವಾಗಿ ಬೈಸಿಕೊಂಡರು. ಯುಧಿಷ್ಠಿರನನ್ನು ಹಿಡಿದು ಒಪ್ಪಿಸಲು ಒಪ್ಪಿದರು. ಭೀಮನಿಂದ ಪರಾಜಿತರಾದರು. ಇವರಿಂದ ಅನೇಕ ರಾಜರು ಹತರಾದರು. ದ್ರೋಣರ ಚಕ್ರವ್ಯೂಹದಲ್ಲಿ ಅಭಿಮನ್ಯು ಹತನಾದ, ದ್ರುಪದ ವಿರಾಟರನ್ನು ಕೊಂದರು. ಐದನೇ ದಿನ ಅಶ್ವತ್ಥಾಮ ಸತ್ತ ವಾರ್ತೆ ಕೇಳಿ, ಭೀಮನ ಉಪದೇಶದಿಂದ ಶಸ್ತ್ರತ್ಯಾಗ, ದೃಷ್ಟದ್ಯುಮ್ನ ಕತ್ತನ್ನು ತೆಗೆದ. ಯೋಗದಿಂದ ದೇಹತ್ಯಾಗ. ಆಗ ದ್ರೋಣರ ವಯಸ್ಸು 400 ದಾಟಿತ್ತು. ದ್ರೋಣರು ಆಧ್ಯಾತ್ಮದಲ್ಲಿ ಶ್ರೋತ್ರದ ಸಂಕೇತ. |
| ಉಪಪಾಂಡವರು ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ ಶತಾನೀಕ, ಶ್ರುತಕ್ರಿಯ | ಅಯೋನಿಜಳು, ಭಾರತೀದೇವಿಯ ಅವತಾರಳು. ದೃಪದ ಮಾಡಿದ ಯಜ್ಞದಲ್ಲಿ ಅಗ್ನಿಕುಂಡದಿಂದ ದೃಷ್ಟದ್ಯುಮ್ನನ ನಂತರ ಈಕೆ ಪ್ರಕಟವಾದಳು. ಮಹಾಭಾರತದಲ್ಲಿ ಭೀಮನ ನಂತರದ ಪಾತ್ರ. ತ್ರಿಲೋಕ ಸುಂದರಿ. ದುಷ್ಟರ ನಾಶಕ್ಕೆ ಮೂಲ ಕಾರಣಳಾದಳು. ಕೃಷ್ಣಾ ನಾಮಾಂತರ, ಪಾಂಚಾಲಿ, ಮಖಜೆ....ಹೆಸರುಗಳಿವೆ. ದ್ರೌಪದೀಸ್ವಯಂವರದಲ್ಲಿ ಅರ್ಜುನ ಬ್ರಾಹ್ಮಣ ವೇಷದಿ ಬಂದು ಮತ್ಸ್ಯಯಂತ್ರ ಭೇದಿಸಿ ದ್ರೌಪದಿಯಿಂದ ಜಯಮಾಲೆಯನ್ನು ಹಾಕಿಸಿಕೊಂಡ. ಕುಂತೀ ಐವರೂ ಹಂಚಿಕೊಳ್ಳಲು ಹೇಳಲು, ವೇದವ್ಯಾಸರು ದ್ರೌಪದಿಯ ಜನ್ಮ ರಹಸ್ಯ ಹೇಳಿದರು. ಜೊತೆಗೆ ಶಿವನ ವರದಾನವನ್ನೂ ತಿಳಿಸಿದರು. ದ್ರೌಪದಿಯ ದೇಹ ಒಂದಾದರೂ ಒಳಗೆ ನಾಲ್ವರ ಸನ್ನಿಧಾನವುಳ್ಳವಳು. ಹೀಗಾಗಿ ವೇದವ್ಯಾಸರ ಹಾಗೂ ಕುಂತಿಯ ಅಪ್ಪಣೆಯಂತೆ ಧೌಮ್ಯರಿಂದ ದ್ರೌಪದಿಗೆ ಪ್ರತ್ಯೇಕ ಪ್ರತ್ಯೇಕವಾಗಿ ವಿಧಿಪೂರ್ವಕ ಪಾಂಡವರೊಂದಿಗೆ ವಿವಾಹ. ಹಸ್ತಿನಾಪುರಕ್ಕೆ ಆಗಮನ. ಗಾಂಧಾರಿ ಇವಳನ್ನು ಕಂಡು ಅವರ ಮಕ್ಕಳ ಮೃತ್ಯುವೆಂದು ತಿಳಿದಳು. ನಾರದರ ಉಪದೇಶದಂತೆ ಪಂಚಪಾಂಡವರು ಒಂದೊಂದು ವರ್ಷ ದ್ರೌಪದಿಯೊಂದಿಗಿದ್ದರು. ದ್ರೌಪದಿ ಭೀಮರಲ್ಲಿ ಭಾರತೀ ವಾಯುಗಳು ಸದಾ ಇದ್ದರೂ ಒಂದೊಂದು ವರುಷ ಶ್ಯಾಮಲಾ, ಶಚಿ, ಉಷಾದೇವಿಯರು ಇದ್ದಾಗ ಕ್ರಮವಾಗಿ ಧರ್ಮಜ, ಅರ್ಜುನ, ನಕುಲ ಸಹದೇವರು ಇದ್ದು ದ್ರೌಪದಿ ಪಂಚ ಉಪ ಪಾಂಡವರನ್ನು ಪಡೆದಳು. ಯುಧಿಷ್ಠಿರನ ರಾಜಸೂಯಾಯಾಗದಿಂದ ದ್ರೌಪದಿ ಸಾಮ್ರಾಜ್ಞಿ ಆದಳು. ಮಯ ಸಭೆಯಲ್ಲಿ ದ್ರೌಪದಿಯಿಂದ ದುರ್ಯೋಧನ ಅಪಮಾನಿತನಾದ. ಯುಧಿಷ್ಠಿರ ಜೂಜಿನಲ್ಲಿ ಸೋತಾಗ ದುಶ್ಯಾಸನನು ಈಕೆಯ ಕೇಶ ಹಿಡಿದು ಸಭೆಗೆ ಎಳೆತಂದ. ಎಲ್ಲ ಸಭಾಸದರಲ್ಲೂ ದ್ರೌಪದಿಯ ಪ್ರಶ್ನೆಗಳು. ಸರಿಯಾದ ಉತ್ತರ ಸಿಗದವಳಾದಳು. ದುಶ್ಯಾಸನನಿಂದ ವಸ್ತ್ರಾಪಹರಣವಾದಾಗ ಶ್ರೀಕೃಷ್ಣನಿಂದ ರಕ್ಷಣೆ ಪಡೆದಳು. ಭೀಮಾದಿಗಳ ಘೋರ ಪ್ರತಿಜ್ಞೆ. ದ್ರೌಪದಿ ಕೇಶ ನಿರ್ಭನೆ ಮಾಡಿದಳು. ವನವಾಸದಲ್ಲಿ ಧರ್ಮಜಗೆ ದ್ರೌಪದಿಯಿಂದ ಉಪದೇಶ. ಸತ್ಯಭಾಮೆಯೂ ಒಮ್ಮೆ ಹಿತವಚನ ಪಡೆದಳು. ಕೃಷ್ಣೆಗೆ ಕೃಷ್ಣನ ಸಂತೈಕೆ-ಹಾರೈಕೆ. ವನವಾಸದಲ್ಲೂ ಅತಿಥಿ ಅಭ್ಯಾಗತರ ಹಾರೈಕೆ, ಪತಿಗಳ ಸೇವೆ ಹೀಗೆ ಎಲ್ಲವನ್ನೂ ಪೂರೈಸುತ್ತಿದ್ದಳು. ದ್ರೌಪದಿಗಾಗಿ ಭೀಮಸೇನ ಸೌಗಂಧಿಕಾ ಪುಷ್ಪಗಳನ್ನು ತಂದದ್ದು. ಜಟಾಸುರನಿಂದ ದ್ರೌಪದಿಯ ಅಪಹರಣ. ಭೀಮ ಅವನನ್ನು ಕೊಂದು ಸಂರಕ್ಷಿಸಿದ. ದುರ್ವಾಸರು ಆತಿಥ್ಯ ಪಡೆಯಲು ಬಂದಾಗ ದ್ರೌಪದಿಯ ಕೃಷ್ಣನ ಪ್ರಾರ್ಥನೆ. ದ್ರೌಪದಿ ತೋರಿಸಿದ ಅಕ್ಷಯ ಪಾತ್ರೆಯಿಂದಲೇ ಅಕ್ಷಯ ಆಹಾರ ಸೃಷ್ಟವಾಗಿ ದುರ್ವಾಸಾದಿ ಗಳನ್ನು ಸಂತಸಪಡಿಸಿದ್ದು |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ದ್ರೋಣಾಚಾರ್ಯ | ಬೃಹಸ್ಪತಿ | ಚ. ಬ್ರಹ್ಮ | ದ್ವಾ. | ಮ.ಭಾ. | ಭರದ್ವಾಜ, (ಘೃತಾಚೀ) | ಕೃಪೀ |

**ಶಿಲೋಂಛವೃತ್ತಿ: ಉಂಛಃ ಕಣಶ ಆದಾನಂ ಕಣಿ ಶಾದ್ಯರ್ಜನಂ ಶಿಲಮ್**

ಹೊಲಗಳಲ್ಲಿ ಬೆಳೆಯನ್ನು ಕೊಯ್ದ ಮೇಲೆ, ಆ ಹೊಲದಲ್ಲಿ ಬಿದ್ದಿದ್ದ ಕಾಳುಗಳನ್ನು ಸಂಗ್ರಹಿಸಿ ಉಪಯೋಗಿಸಿಕೊಂಡು ಜೀವನ ಸಾಗಿಸುವ ವೃತ್ತಿ, ಹೊಲಗಳಲ್ಲಿ ಬಿದ್ದಿದ್ದ ತೆನೆಗಳನ್ನು ಸಂಗ್ರಹಸಿ ಉಪಯೋಗಿಸಿಕೊಂಡಿರುವುದೂ 'ಶಿಲವೃತ್ತಿ' ಶಿಲೋಂಛವೃತ್ತಿಯಲ್ಲಿ ದ್ರೋಣರು ಜೀವನ ಪಾಲಿಸುತ್ತಿದ್ದರು.

(ಶಿಲಂ ಚ ಉಂಛಂ ಚ ಶಿಲೋಂಛೇ ತಾಭ್ಯಾಂ ವೃತ್ತಿರ್ಜೀವನೋಪಾಯಃ)

| | | | | | | |
|---|---|---|---|---|---|---|
| ದ್ರೌಪದೀ | ಭಾರತಿ | ಪಾರ್ವತಿ, ಶಚಿ ಶ್ಯಾಮಲಾ, ಉಷಾ | ದ್ವಾ. | ಮ.ಭಾ. | ದ್ರುಪದ | ಪಂಚಪಾಂಡವರು (ಭೀಮಸೇನ) |

**ಸಂತಾನೋತ್ಪತ್ತಿಯ ಬಗೆಗಳು**

ಸಂತಿ ದೇವನಿಕಾರ್ಯಶ್ಚ ಸಂಕಲ್ಪಾಜ್ಜನಯಂತಿ ಯೇ ।
ವಾಚಾ ದೃಷ್ಟ್ಯಾ ತಥಾ ಸ್ಪರ್ಶಾತ್ ಸಂಘರ್ಷೇಣೇತಿ ಪಂಚಧಾ ॥

1. ಸಂಕಲ್ಪದಿಂದ : ಉದಾ – ಚ. ಬ್ರಹ್ಮ, ವಾಯ, ಭಾರತಿ .... ಸಕಲ ಬ್ರಹ್ಮಾಂಡ (ಭಗವತ್ಸಂಕಲ್ಪಾನುಸಾರವಾಗಿ)
2. ಮಾತಿನಿಂದ : (ವರದಿಂದ) ಉದಾ– ಪಾಂಡವರು(ಮಂತ್ರದಿಂದ), ದ್ರೌಪದಿ( ಯಜ್ಞ), ಶಿಖಂಡಿ ಮುಂ॥
3. ದರ್ಶನದಿಂದ : ಉದಾ – ದ್ರೋಣ, ಕೃಪ, ಪರಾಶರರು – ಮುಂ ॥ (ದೃಷ್ಟಿಯಿಂದ)
4. ಸ್ಪರ್ಶದಿಂದ : ಉದಾ – ಪಾಂಡವರು –– ಮುಂ ॥
5. ಸಂಘರ್ಷದಿಂದ : ಉದಾ – ಲೋಕ ಪ್ರಸಿದ್ಧವಾದ ವಿಷಯ (ಮೈಥುನದಿಂದ)

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಅಶ್ವತ್ಥಾಮ | ಭರದ್ವಾಜರ ವೀರ್ಯವನ್ನು ಬಂದು ದ್ರೋಣದಲ್ಲಿರಿಸಿ ಅದೇ ದ್ರೋಣ ಎಂಬ ಗಂಡುಮಗುವಾಯಿತು. ಅಯೋನಿಜರು. ಅಗ್ನಿವೇಶ್ಯರಲ್ಲಿ ಬಾಲ್ಯದಲ್ಲಿ ಇವರು ದ್ರುಪದ ಧನುರ್ವಿದ್ಯೆ ಕಲೆತರು. ಶಿಲೊಂಚ ವೃತ್ತಿಯಲ್ಲಿ ಹಸ್ತಿನಾವತಿಯಲ್ಲಿದ್ದರು. ಶಿವನ ಅನುಗ್ರಹದಿಂದ ಅಶ್ವತ್ಥಾಮರನ್ನು ಪಡೆದರು. ದ್ರುಪದ ಆದರಿಸದ ಕಾರಣಕ್ಕೆ ಸೇಡಿನಿಂದ ಮತ್ತು ಮಗನಿಗೆ ಹಾಲಿಗಾಗಿ ಪರಶುರಾಮರಲ್ಲಿ ಹೋಗಿ 12 ವರ್ಷ ವಿದ್ಯೆ ಕಲಿತರು. ಅಂದಿನ ಕುರು-ಪಾಂಡವ ಹಾಗೂ ಅನೇಕ ರಾಜಕುವರರಿಗೆ ಧನುರ್ವಿದ್ಯೆಯನ್ನು ಕಲಿಸಿದರು. ಕರ್ಣನಿಗೆ ಅವಕಾಶ ಕೊಡಲಿಲ್ಲ. ರಂಗಭೂಮಿಯಲ್ಲಿ ಎಲ್ಲ ಶಿಷ್ಯರ ಅಸ್ತ್ರ-ಶಸ್ತ್ರ ವಿದ್ಯಾ ಪ್ರದರ್ಶನ. ರಾಜಸೂಯಯಾಗದಲ್ಲಿ ಮೇಲ್ವಿಚಾರಕರಾಗಿದ್ದರು. ಅರ್ಜುನನನ್ನು ಏಕೈಕ ಧನ್ವಿಯನ್ನಾಗಿಸಿ ದ್ರುಪದನನ್ನು ಸೆರೆಹಿಡಿದರು. ಮಾತಿನಂತೆ ಅರ್ಧರಾಜ್ಯವನ್ನು ಕಸಿದುಕೊಂಡರು. ರಹಸ್ಯವಾಗಿ ಏಕಲವ್ಯನಿಗೂ ಪಾಠ ಹೇಳಿದರು. ದ್ರೌಪದೀಗೆ ಮಾನಭಂಗ ಸಂದರ್ಭದಲ್ಲಿ ಅಸಹಾಯಕರಾಗಿ ವೀಕ್ಷಿಸಿದರು. ಉತ್ತರ ಗೋಗ್ರಹಣದಲ್ಲಿ ಭಾಗಿಯಾದರು. ಪಾಂಡವರ ಪಕ್ಷಪಾತಿ. ಆದರೂ ಭೀಮನ ಶಪಥಕ್ಕೆ ಭೀತರಾದ ದುರ್ಯೋಧನಾದಿಗಳು ಕಾಲಿಗೆ ಬೀಳಲು ಅವರ ಪರವಾಗಿ ಯುದ್ಧದಲ್ಲಿ ಹೋರಾಡುವುದಾಗಿ ಭಾಷೆ ಕೊಟ್ಟರು. ಭೀಷ್ಮರು ಬಿದ್ದ ನಂತರ ಯುದ್ಧದಲ್ಲಿ ಐದು ದಿನ ಸೇನಾಧಿಪತ್ಯವಹಿಸಿದರು. ಪ್ರಮುಖರು ಇವರ ಸಮಯದಲ್ಲಿ ಸತ್ತರು. ದುರ್ಯೋಧನನಿಂದ ಅವಾಚ್ಯವಾಗಿ ಬೈಸಿಕೊಂಡರು. ಯುಧಿಷ್ಠಿರನನ್ನು ಹಿಡಿದು ಒಪ್ಪಿಸಲು ಒಪ್ಪಿದರು. ಭೀಮನಿಂದ ಪರಾಜಿತರಾದರು. ಇವರಿಂದ ಅನೇಕ ರಾಜರು ಹತರಾದರು. ದ್ರೋಣರ ಚಕ್ರವ್ಯೂಹದಲ್ಲಿ ಅಭಿಮನ್ಯು ಹತನಾದ, ದ್ರುಪದ ವಿರಾಟರನ್ನು ಕೊಂದರು. ಐದನೇ ದಿನ ಅಶ್ವತ್ಥಾಮ ಸತ್ತ ವಾರ್ತೆ ಕೇಳಿ, ಭೀಮನ ಉಪದೇಶದಿಂದ ಶಸ್ತ್ರತ್ಯಾಗ, ದೃಷ್ಟದ್ಯುಮ್ನ ಕತ್ತನ್ನು ತೆಗೆದ. ಯೋಗದಿಂದ ದೇಹತ್ಯಾಗ. ಆಗ ದ್ರೋಣರ ವಯಸ್ಸು 400 ದಾಟಿತ್ತು. ದ್ರೋಣರು ಆಧ್ಯಾತ್ಮದಲ್ಲಿ ಶ್ರೋತ್ರದ ಸಂಕೇತ. |
| ಉಪಪಾಂಡವರು ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ ಶತಾನೀಕ, ಶ್ರುತಕ್ರಿಯ | ಅಯೋನಿಜಳು, ಭಾರತೀದೇವಿಯ ಅವತಾರಳು. ದ್ರುಪದ ಮಾಡಿದ ಯಜ್ಞದಲ್ಲಿ ಅಗ್ನಿಕುಂಡದಿಂದ ದೃಷ್ಟದ್ಯುಮ್ನನ ನಂತರ ಈಕೆ ಪ್ರಕಟವಾದಳು. ಮಹಾಭಾರತದಲ್ಲಿ ಭೀಮನ ನಂತರದ ಪಾತ್ರ. ತ್ರಿಲೋಕ ಸುಂದರಿ. ದುಷ್ಟರ ನಾಶಕ್ಕೆ ಮೂಲ ಕಾರಣಳಾದಳು. ಕೃಷ್ಣಾ ನಾಮಾಂತರ, ಪಾಂಚಾಲಿ, ಮಖಜೆ....ಹೆಸರುಗಳಿವೆ. ದ್ರೌಪದೀಸ್ವಯಂವರದಲ್ಲಿ ಅರ್ಜುನ ಬ್ರಾಹ್ಮಣ ವೇಷದಿ ಬಂದು ಮತ್ಸ್ಯಯಂತ್ರ ಭೇದಿಸಿ ದ್ರೌಪದಿಯಿಂದ ಜಯಮಾಲೆಯನ್ನು ಹಾಕಿಸಿಕೊಂಡ. ಕುಂತೀ ಐವರೂ ಹಂಚಿಕೊಳ್ಳಲು ಹೇಳಲು, ವೇದವ್ಯಾಸರು ದ್ರೌಪದಿಯ ಜನ್ಮ ರಹಸ್ಯ ಹೇಳಿದರು. ಜೊತೆಗೆ ಶಿವನ ವರದಾನವನ್ನೂ ತಿಳಿಸಿದರು. ದ್ರೌಪದಿಯ ದೇಹ ಒಂದಾದರೂ ಒಳಗೆ ನಾಲ್ವರ ಸನ್ನಿಧಾನವುಳ್ಳವಳು. ಹೀಗಾಗಿ ವೇದವ್ಯಾಸರ ಹಾಗೂ ಕುಂತಿಯ ಅಪ್ಪಣೆಯಂತೆ ಧೌಮ್ಯರಿಂದ ದ್ರೌಪದಿಗೆ ಪ್ರತ್ಯೇಕ ಪ್ರತ್ಯೇಕವಾಗಿ ವಿಧಿಪೂರ್ವಕ ಪಾಂಡವರೊಂದಿಗೆ ವಿವಾಹ. ಹಸ್ತಿನಾಪುರಕ್ಕೆ ಆಗಮನ. ಗಾಂಧಾರಿ ಇವಳನ್ನು ಕಂಡು ಅವರ ಮಕ್ಕಳ ಮೃತ್ಯುವೆಂದು ತಿಳಿದಳು. ನಾರದರ ಉಪದೇಶದಂತೆ ಪಂಚಪಾಂಡವರು ಒಂದೊಂದು ವರ್ಷ ದ್ರೌಪದಿಯೊಂದಿಗಿದ್ದರು. ದ್ರೌಪದಿ ಭೀಮರಲ್ಲಿ ಭಾರತೀ ವಾಯುಗಳು ಸದಾ ಇದ್ದರೂ ಒಂದೊಂದು ವರುಷ ಶ್ಯಾಮಲಾ, ಶಚಿ, ಉಷಾದೇವಿಯರು ಇದ್ದಾಗ ಕ್ರಮವಾಗಿ ಧರ್ಮಜ, ಅರ್ಜುನ, ನಕುಲ ಸಹದೇವರು ಇದ್ದು ದ್ರೌಪದಿ ಪಂಚ ಉಪ ಪಾಂಡವರನ್ನು ಪಡೆದಳು. ಯುಧಿಷ್ಠಿರನ ರಾಜಸೂಯಾಯಾಗದಿಂದ ದ್ರೌಪದಿ ಸಾಮ್ರಾಜ್ಞಿ ಆದಳು. ಮಯ ಸಭೆಯಲ್ಲಿ ದ್ರೌಪದಿಯಿಂದ ದುರ್ಯೋಧನ ಅಪಮಾನಿತನಾದ. ಯುಧಿಷ್ಠಿರ ಜೂಜಿನಲ್ಲಿ ಸೋತಾಗ ದುಶ್ಯಾಸನನು ಈಕೆಯ ಕೇಶ ಹಿಡಿದು ಸಭೆಗೆ ಎಳೆತಂದ. ಎಲ್ಲ ಸಭಾಸದರಲ್ಲೂ ದ್ರೌಪದಿಯ ಪ್ರಶ್ನೆಗಳು. ಸರಿಯಾದ ಉತ್ತರ ಸಿಗದವಳಾದಳು. ದುಶ್ಯಾಸನನಿಂದ ವಸ್ತ್ರಾಪಹರಣವಾದಾಗ ಶ್ರೀಕೃಷ್ಣನಿಂದ ರಕ್ಷಣೆ ಪಡೆದಳು. ಭೀಮಾದಿಗಳ ಘೋರ ಪ್ರತಿಜ್ಞೆ. ದ್ರೌಪದಿ ಕೇಶ ನಿರ್ಬಂಧನೆ ಮಾಡಿದಳು. ವನವಾಸದಲ್ಲಿ ಧರ್ಮಜಗೆ ದ್ರೌಪದಿಯಿಂದ ಉಪದೇಶ. ಸತ್ಯಭಾಮೆಯೂ ಒಮ್ಮೆ ಹಿತವಚನ ಪಡೆದಳು. ಕೃಷ್ಣೆಗೆ ಕೃಷ್ಣನ ಸಂತೈಕೆ-ಹಾರೈಕೆ. ವನವಾಸದಲ್ಲೂ ಅತಿಥಿ ಅಭ್ಯಾಗತರ ಹಾರೈಕೆ, ಪತಿಗಳ ಸೇವೆ ಹೀಗೆ ಎಲ್ಲವನ್ನೂ ಪೂರೈಸುತ್ತಿದ್ದಳು. ದ್ರೌಪದಿಗಾಗಿ ಭೀಮಸೇನ ಸೌಗಂಧಿಕಾ ಪುಷ್ಪಗಳನ್ನು ತಂದದ್ದು. ಜಟಾಸುರನಿಂದ ದ್ರೌಪದಿಯ ಅಪಹರಣ. ಭೀಮ ಅವನನ್ನು ಕೊಂದು ಸಂರಕ್ಷಿಸಿದ. ದುರ್ವಾಸರು ಆತಿಥ್ಯ ಪಡೆಯಲು ಬಂದಾಗ ದ್ರೌಪದಿಯ ಕೃಷ್ಣನ ಪ್ರಾರ್ಥನೆ. ದ್ರೌಪದಿ ತೋರಿಸಿದ ಅಕ್ಷಯ ಪಾತ್ರೆಯಿಂದಲೇ ಅಕ್ಷಯ ಆಹಾರ ಸೃಷ್ಟವಾಗಿ ದುರ್ವಾಸಾದಿ ಗಳನ್ನು ಸಂತಸಪಡಿಸಿದ್ದು |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ದ್ರೌಪದೇಯರು (ಉಪಪಾಂಡವರು- ವಿಶ್ವೇದೇವತೆಗಳ ಅವತಾರರು) | | | | | | |
| | ವಸು | ಗಂಧರ್ವ | | | | |
| ಪ್ರತಿವಿಂಧ್ಯ | ಪುರೂರವ | ಚಿತ್ರರಥ | ದ್ವಾ. | ಮ.ಭಾ. | ಯುಧಿಷ್ಠಿರ, ದ್ರೌಪದಿ | |
| ಶ್ರುತಸೋಮ | ಆರ್ದವವಸು | ಅಭಿತಾಮ್ರ | ದ್ವಾ. | ಮ.ಭಾ. | ಭೀಮಸೇನ, ದ್ರೌಪದಿ | |
| ಶ್ರುತಕೀರ್ತಿ | ದೂಃವಸು | ಕಿಶೋರ | ದ್ವಾ. | ಮ.ಭಾ. | ಅರ್ಜುನ, ದ್ರೌಪದಿ | |
| ಶತಾನೀಕ | ಲೋಚನ | ಕಿಶೋರ | ದ್ವಾ. | ಮ.ಭಾ. | ನಕುಲ, ದ್ರೌಪದಿ | |
| ಶ್ರುತಕ್ರಿಯ | ಕ್ರತುವಸು | ಬಲ | ದ್ವಾ. | ಮ.ಭಾ. | ಸಹದೇವ, ದ್ರೌಪದಿ | |
| ದ್ವೈಪಾಯನ | ಮಹಾವಿಷ್ಣು | -- | ದ್ವಾ. | ಮ.ಭಾ. | ಪರಾಶರ,ಸತ್ಯವತಿ- | |
| ಧ್ರುವ | ಚಕ್ರವರ್ತಿ | ವಾಯು | - | ಭಾಗವತ | ಉತ್ತಾನಪಾದ, ಸುನೀತಿ | ಭ್ರಮಿ, ಇಳೆ, ಧನ್ಯೆ ಶಂಭು |
| ಧೃತರಾಷ್ಟ್ರ | ಧೃತರಾಷ್ಟ್ರ (ಹಂಸ) | ವಾಯು | ದ್ವಾ. | ಮ.ಭಾ. | ವಿಚಿತ್ರವೀರ್ಯ | ಗಾಂಧಾರಿ, ಇವಳ ತಂಗಿಯರು, ಇನ್ನು ಹೆಚ್ಚು ಪತ್ನಿಯರಿದ್ದರು |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಜಯದ್ರಥನನ್ನು ಕರುಣಿಸಿ ಬಿಡುಗಡೆ ಮಾಡಿಸಿದಳು. ವಿರಾಟನಗರಿಯಲ್ಲಿ ಸೈರಂಧ್ರಿಯಾಗಿ ಸುಧೇಷ್ಣೆಯೊಡನೆ ವಾಸ. ಕಾಮುಕ ದುಷ್ಟಕೀಚಕನನ್ನು ಭೀಮ ಸಂಹರಿಸುವಂತಾಗಿಸಿದಳು. ಬೃಹನ್ನಲಾಗೆ ಉತ್ತರಕುಮಾರನ ಸಾರಥಿಯಾಗಲು ಪ್ರೇರೇಪಿಸಿದಳು. ಕೃಷ್ಣನು ಸಂಧಿಗೆ ಹೋಗಲು ಯುದ್ಧವೇ ಸೂಕ್ತವೆಂಬ ಮನವಿಯನ್ನು ಕೃಷ್ಣನ ಮುಂದಿಟ್ಟಳು. ದುಃಶ್ಯಾಸನನನ್ನು ವಧಿಸಿದ ಭೀಮನಿಂದ ಇವಳ ಪ್ರತಿಜ್ಞೆ ನೆರವೇರಿತು. ಯುದ್ಧದ ಕಡೆಯ ದಿನ ಅಶ್ವತ್ಥಾಮ ತನ್ನ ಐದು ಮಕ್ಕಳನ್ನು ಕೊಂದರೂ ದ್ರೌಪದಿ ಅವನ ಮೇಲೆ ಕರುಣೆ ತೋರಿ ಅವನನ್ನು ವಧಿಸದಂತೆ ಬಿಡಿಸಿದಳು. ಯುದ್ಧದ ನಂತರ ಭೀಮನೊಂದಿಗೆ ಮಾತ್ರ ಇದ್ದಳು. ಉತ್ತರಾಶಿಶುವು ನಾಶವಾಗದಿರಲು ಕೃಷ್ಣನಲ್ಲಿ ಪ್ರಾರ್ಥಿಸಿದಳು. ರಾಜ್ಯವು ಸುಖಸಂಮೃದ್ಧಿಯಿಂದಿರಲು ಪತಿಗಳಿಗೆ ಸಹಕರಿಸಿದಳು. ದ್ರೌಪದಿಯಿಂದ ಧೃತರಾಷ್ಟ್ರ ಗಾಂಧಾರಿ ಹಾಗೂ ಕುಂತಿಯರಿಗೆ ನಿರಂತರ ಸೇವೆ. ದ್ರೌಪದಿಯು ತನ್ನ ಪತಿಗಳೊಂದಿಗೆ ಮಹಾಪ್ರಸ್ಥಾನಕ್ಕೆ ಮುಂದಾದುದು. ಹಿಮವತ್ಪರ್ವತದಲ್ಲಿ ಪ್ರಪ್ರಥಮವಾಗಿ ದ್ರೌಪದಿಯು ಪತಿಯಂದಿರ ಅಪ್ಪಣೆ ಪಡೆದು ತನ್ನ ಶರೀರವನ್ನು ತ್ಯಾಗಮಾಡಿ ಸ್ವರ್ಗಲೋಕವನ್ನು ಸೇರಿದಳು. ದ್ರೌಪದಿಯು ವಿದ್ಯೆಯ ಸಂಕೇತ. |
| | ಉಪಪಾಂಡವರು ಪಾಂಡವರು ವನವಾಸದ ಕಾಲದಲ್ಲಿ ಇದ್ದಾಗ ಅಭಿಮನ್ಯುವಿನಿಂದ ಶಸ್ತ್ರವಿದ್ಯೆ ಕಲೆತರು. ಅಂತಿಮ ಯುದ್ಧದಲ್ಲಿ ಕಡೆಯದಿನ ರಾತ್ರಿ ಬಿಡಾರದಲ್ಲಿ ಅಶ್ವತ್ಥಾಮರಿಂದ ಹತರಾದರು. |
| ಶುಕಮುನಿ | ವೇದವ್ಯಾಸರ ನಾಮಾಂತರ, ವೇದವ್ಯಾಸ ಎಂಬಲ್ಲಿ ನೋಡಿ. |
| ಕಲ್ಪ ವತ್ಸರ, ಉತ್ಕಲ, ಶಿಷ್ಟ ಭವ್ಯ | ಹಿಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿದ್ದ ಇವನು ಹಿರಿಯ ಮಗನಾಗಿ ಹುಟ್ಟಿದ. ಮಲತಾಯಿ ಸುರುಚಿಯಿಂದ ಅಪಮಾನಿತನಾಗಿ ತಾಯಿಯ ಹಿತವಚನದಂತೆ ತಪಸ್ಸಿಗಾಗಿ ಐದು ವರುಷದವ ಕಾಡಿಗೆ ಹೋದ. ನಾರದರಿಂದ ಮಂತ್ರೋಪದೇಶ ಪಡೆದು ಬಹು ಕಷ್ಟಕರ ತಪಸ್ಸನ್ನು ಮಾಡಿದ. ಭಗವಂತ ಪ್ರತ್ಯಕ್ಷನಾಗಿ ಬೇಡಿದ್ದನ್ನು ನೀಡಿ ಧ್ರುವಸ್ಥಾನವನ್ನೇ ಕೊಟ್ಟ. ಬಾಲಧ್ರುವನ ಸಾಹಸ ಅದ್ಭುತ. ಶಾಶ್ವತ ಲೋಕದ ಅಧಿಪತಿ. ಯಕ್ಷರೊಂದಿಗೆ ಯುದ್ಧ ಮಾಡಿದ. ಅನೇಕ ಯಜ್ಞಗಳನ್ನು ಮಾಡಿದ. 36 ಸಾವಿರ ವರ್ಷ ರಾಜ್ಯಭಾರಮಾಡಿ ಮಕ್ಕಳಿಗೆ ರಾಜ್ಯ ಒಪ್ಪಿಸಿ ತಪಸ್ಸಿಗಾಗಿ ಹೊರಟ. |
| ದುರ್ಯೋಧನಾದಿ ಶತ, ದುಶ್ಯಲೆ, ಯುಯುತ್ಸು ಇನ್ನೂ ಅನೇಕ ಮಕ್ಕಳು | ಗಂಧರ್ವ, ಚಂದ್ರವಂಶಜ, ತಾಯಿಯ ದೋಷದಿಂದ ಹುಟ್ಟು ಕುರುಡನಾಗಿ ಜನಿಸಿದ. ಪಾಂಡುವಿದುರರು ಸಹೋದರರು. ಭೀಷ್ಮರ ಸಮ್ಮುಖ ಗಾಂಧಾರಿ ಹಾಗೂ ಇವಳ ಹತ್ತು ಸಹೋದರಿಯರನ್ನು ಮದುವೆಯಾದ. ಗಾಂಧಾರಿಯಲ್ಲಿ ದುರ್ಯೋಧನಾದಿ 100 ಪುತ್ರರು ದುಶ್ಯಲೆಯರನ್ನು ಪಡೆದ. ಭೀಷ್ಮನು ಪಾಂಡು ರಾಜ ಅರಣ್ಯಕ್ಕೆ ಹೋದ ಮೇಲೆ ರಾಜನನ್ನಾಗಿ ಮಾಡಿದ. ಪಾಂಡು ಮರಣಾನಂತರ ಪಾಂಡವರು ಕುಂತಿಯೊಂದಿಗೆ ಬಂದರು. ಪಾಂಡು ಸತ್ತದ್ದನ್ನು ಕೇಳಿ ವ್ಯಥೆ ಪಟ್ಟ. ಧರ್ಮನನ್ನು ಯುವರಾಜನನ್ನಾಗಿ ಮಾಡಿದ. ಮಗನ ಮೇಲಿನ ವ್ಯಾಮೋಹದಿಂದ ಪಾಂಡವರಿಗೆ ಕಷ್ಟಕೊಟ್ಟ. ವಿದುರನ ಮೂಲಕ ದ್ರೌಪದಿಯೊಂದಿಗೆ ಪಾಂಡವರನ್ನು ಹಸ್ತಿನಾವತಿಗೆ ಕರೆಸಿದ. ನಂತರ ಖಾಂಡವ ಪ್ರಸ್ಥಕ್ಕೆ ಕಳಿಸಿದ. ರಾಜಸೂಯ ಯಾಗದ ನಂತರ ಜೂಜಿಗೆ ಅನುಮತಿಕೊಟ್ಟ. ವಿದುರನ ಮಾತನ್ನು ಕೇಳಲಿಲ್ಲ. ಜೂಜಿನಲ್ಲಿ ಸೋತಾಗ, ದ್ರೌಪದೀಗೆ ಅಪಮಾನವಾದಾಗ ಅಸಹಾಯಕನಾಗಿದ್ದ. ಪಾಂಡವರು ವನವಾಸ ದಲ್ಲಿದ್ದಾಗ ಮರುಗಿ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಧೌಮ್ಯ | ಋಷಿ | ವಸು | ದ್ವಾ. | ಮ.ಭಾ. | ವ್ಯಾಘ್ರಪಾದ | - |
| ಧನಕ | ಅರಸು | -- | ದ್ವಾ. | ಮ.ಭಾ. | ಭದ್ರಸೇನ | - |
| ಧನ್ವಂತರಿ | ಮಹಾವಿಷ್ಣು | -- | - | ಭಾಗವತ | - | ಮಹಾಲಕ್ಷ್ಮೀ |
| ಧೃಷ್ಟಕೇತು | ಅನುಹ್ಲಾದ | ಸವಿತೃ | ದ್ವಾ. | ಮ.ಭಾ. | ಶಿಶುಪಾಲ | - |
| ಧರಣಿ | ರಾಣಿ | -- | - | ಭಾಗವತ | ಬ್ರಹ್ಮನ ಎಡಗೈ ಹೆಬ್ಬೆಟ್ಟು | ದಕ್ಷ |
| ಧೃಷ್ಟದ್ಯುಮ್ನ | ಅಗ್ನಿ | -- | ದ್ವಾ | ಮ.ಭಾ. | ದ್ರುಪದ | - |
| ಧೇನುಕ | ರಾಕ್ಷಸ | - | ದ್ವಾ | ಮ.ಭಾ. | - | - |
| ನಕುಲ | ಅಶ್ವಿನೀ ದೇವತೆ | ವಾಯು | ದ್ವಾ | ಮ.ಭಾ. | ಪಾಂಡು, ಮಾದ್ರಿ | ದ್ರೌಪದೀ (ಉಷಾ) ಕರೇಣುಮತಿ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ವಿದುರನಿಂದ ನೀತಿಬೋಧೆಯನ್ನು ಆಲಿಸಿದ. ಸನತ್ಕುಮಾರರಿಂದ ಉಪದೇಶ ಪಡೆದ. ಕೃಷ್ಣನ ಸಂಧಿ ಸಮಯದಲ್ಲಿ ಕೃಷ್ಣನ ವಿಶ್ವರೂಪವನ್ನು ನೋಡಿದ. ಬೆರಗಾದ. ಮಗನಿಂದಾಗಿ ವ್ಯಥೆಪಟ್ಟ. ಸಂಜಯನ ಮೂಲಕ ಯುದ್ಧ ವಾರ್ತೆಯನ್ನು ಆಮೂಲಾಗ್ರವಾಗಿ ತಿಳಿದ. ಕಡೆಗೆ ದುರ್ಯೋಧನನ ಸಾವನ್ನು ಕೇಳಿ ತಿಳಿದ. ದುಃಖಿಸಿದ. ಕೃಷ್ಣ ತೋರಿದ ಭೀಮ ವಿಗ್ರಹವನ್ನು ಕೋಪದಿ ಪುಡಿ ಮಾಡಿದ. ಧರ್ಮಜನ ರಾಜ್ಯ ಭಾರದಲ್ಲಿ ಸುಖದಿಂದಿದ್ದ. ಕೃಷ್ಣನಿಂದ ಉಪದೇಶ ಪಡೆದ. ಕುಂತಿ, ಗಾಂಧಾರಿ, ವಿದುರರೊಂದಿಗೆ ಇದ್ದು ಭೀಮನ ಚುಚ್ಚುಮಾತುಗಳಿಂದ ವೈರಾಗ್ಯ ಪಡೆದು ಮಗನ ವರ್ತನೆಗೆ ಪ್ರಜೆಗಳಲ್ಲಿ ಕ್ಷಮೆಯಾಚಿಸಿ ಕಾಡಿಗೆ ಹೋದ. ಕಡೆಗೆ ವ್ಯಾಸರ ಅನುಗ್ರಹದಿಂದ ಕಣ್ಣು ಪಡೆದು ಒಂದು ರಾತ್ರಿ ಅವನ ಮಕ್ಕಳು ಬಂಧುಬಾಂಧವರೊಂದಿಗೆ ಸುಖದಿಂದಿದ್ದ. ಒಂದುದಿನ ಧೃತರಾಷ್ಟ್ರ ಕಾಡ್ಗಿಚ್ಚಿನಲ್ಲಿ ಗಾಂಧಾರಿ ಕುಂತಿಯರೊಂದಿಗೆ ಹೋದ. ಧೃತರಾಷ್ಟ್ರ ಮಮತೆ ಲೋಭಗಳ ಸಂಕೇತ. |
| ಆಪೋದನ | ದೇವಲರ ಅಣ್ಣ. ಪಾಂಡವರ ಪುರೋಹಿತ. ಜ್ಞಾನಿ, ಚಿತ್ರರಥನಿಂದ ದ್ರೌಪದೀಸ್ವಯಂವರದ ಮುನ್ನ ಸಿಕ್ಕರು. ಪಾಂಡವರ ವಿವಾಹ, ಅವರ ಮಕ್ಕಳ ಉಪನಯನಾದಿಗಳನ್ನು ಮಾಡಿಸಿದರು. ರಾಜಸೂಯದಲ್ಲಿ ಹೋತೃ. ವನವಾಸದಲ್ಲಿ ಹೀಗೆ ಕಡೆಯವರೆಗೂ ಪಾಂಡರವರ ಜೊತೆ ಇದ್ದರು. ಪಾಂಡವರಿಗೆ ತೀರ್ಥಕ್ಷೇತ್ರ ಮಹಿಮೆ, ಉಪದೇಶವಿತ್ತವರು. |
| ಕೃತವೀರ್ಯ,ಕೃತಾಗ್ನಿ ಕೃತವರ್ಮ, ಕೃತೌಜ | ಚಂದ್ರವಂಶಜ, ಕಾರ್ತವೀರ್ಯಾರ್ಜುನನ ತಾತ. |
| – | ಭಗವಂತನ ಅವತಾರ ರೂಪ. ದೇವದಾನವರ ಸಮುದ್ರಮಥನಕಾಲದಲ್ಲಿ ಅಮೃತಕಲಶವನ್ನು ಹಿಡಿದು ತೋರಿದ ರೂಪ. ಪರಿಪೂರ್ಣ ಅವತಾರ. ದೇವವೈದ್ಯ. ಆಯುರ್ವೇದದ ಮೂಲ ಪುರುಷ-ಪವರ್ತಕ. ಜಗತ್ತಿಗೆ ಆರೋಗ್ಯದ ಅಧಿದೇವತೆ. ಧನ್ವಂತರಿಯ ಉಪಾಸನೆಯಿಂದ ಸಕಲ ರೋಗ ಪರಿಹಾರ. |
| – | ಅರಸು, ಮಹಾರಥ, ಸುಕೇತು, ಶರಭರ ಹಾಗೂ ರೇಣುಮತಿಯ ಅಣ್ಣ, ತಂಗಿಯನ್ನು ನಕುಲ ಮದುವೆಯಾದ, ಯುದ್ಧದಲ್ಲಿ ದ್ರೋಣರಿಂದ ಹತನಾದ. ಚೇದಿ ದೇಶಕ್ಕೆ ರಾಜನಾಗಿದ್ದ. ಇವನ ಸೋದರಿ ದೇವಕಿ ಧರ್ಮರಾಜನ ಮಡದಿ. |
| ದಿತಿ, ಅದಿತಿ ಮೊದಲಾದವರು | ಇವಳಿಂದ ಪ್ರಜೋತ್ಪತ್ತಿ ಜಗತ್ತಿನ ತುಂಬಾ ಬೆಳೆಯಿತು. |
| ಕ್ಷತ್ರಂಜಯ, ಕ್ಷತ್ರದೇವ ಕ್ಷತ್ರವರ್ಮ | ಅಗ್ನಿಕುಂಡದಿಂದ ಕವಚಕುಂಡಲಾದಿ ರಥದ ಸಮೇತ ಬಂದ ಅಗ್ನಿಯ ಅವತಾರಿ. ದ್ರೌಪದಿ ಸಮೇತ ಬಂದ. ಅಯೋನಿಜ, ಅತಿರಥ, ತಂದೆಯ ವರದಿಂದ ದ್ರೋಣಾಚಾರ್ಯರ ಮೃತ್ಯುವಾದ. ಇವನು ಅವರಲ್ಲಿಯೇ ವಿದ್ಯೆಯನ್ನು ಕಲಿತ. ದ್ರೌಪದಿಯ ನಿಜ ವೃತ್ತಾಂತವನ್ನು ದ್ರೌಪದಿಗೆ ತಿಳಿಸಿದ. ಕೃಷ್ಣನ ಆದೇಶದಂತೆ ಪಾಂಡವರ ಸೈನ್ಯಾಧಿಪತಿ ಯಾದ, ಹದಿನೈದನೇ ದಿನ ಶಸ್ತ್ರತ್ಯಾಗ ಮಾಡಿದ್ದ ದ್ರೋಣರ ಕತ್ತನ್ನು ಕತ್ತರಿಸಿದ. ಮಹಾಪರಾಕ್ರಮಿ. ಇವನ ಮಕ್ಕಳನ್ನು ದ್ರೋಣರು ಕೊಂದರು. ಇವನನ್ನು ಯುದ್ದದ ಕಡೆ ರಾತ್ರಿ ಸಮಯ ಅಶ್ವತ್ಥಾಮರು ಬಿಲ್ಲಿನ ಜಾದಿಂದ ಕುತ್ತಿಗೆ ಹಿಸಿಕಿ ಕೊಂದರು. ಇವನು ತನ್ನ ಮೂಲ ರೂಪವನ್ನು ಸೇರಿದ. |
| – | ಕಂಸನ ಭೃತ್ಯ. ಕತ್ತೆಯ ರೂಪದ ರಾಕ್ಷಸ ತಾಳೆಮರಗಳ ಬಳಿ ಇದ್ದ ಇವನನ್ನು ಬಲರಾಮ ಕೊಂದ. |
| ಶತಾನೀಕ ನಿರಮಿತ್ರ | ಮಾದ್ರಿಯ ಅವಳಿಮಕ್ಕಳಲ್ಲಿ ಹಿರಿಯ ಅತಿರಥ, ಸುಂದರಕಾಯ, ದ್ರೋಣರಲ್ಲಿ ಶಸ್ತ್ರವಿದ್ಯೆ ಕಲಿತ. ಪ್ರತ್ಯೇಕವಾಗಿ ದ್ರೌಪದಿಯನ್ನು ಮದುವೆಯಾದ. ರಾಜಸೂಯಯಾಗಕ್ಕಾಗಿ ಪಶ್ಚಿಮದಿಕ್ಕಿನ ದಿಗ್ವಿಜಯಕ್ಕೆ ಹೊರಟ. ಅಣ್ಣಂದಿರ ನಿಯಮ ಪಾಲಕ. ಅಜ್ಞಾತವಾಸದಲ್ಲಿ ದಾಮಗ್ರಂಥಿ ಹೆಸರಿನಿಂದ ಅಶ್ವಪಾಲಕನಾಗಿದ್ದ (ಜಯತ್ಸೇನ - ಗುಪ್ತನಾಮ) ಕೃಷ್ಣನಿಗೆ ಸಂಧಿಯೆ ಸರಿ ಎಂದು ಹೇಳಿದ. ಮಹಾಯುದ್ಧದಲ್ಲಿ ಕರ್ಣನ ಮಕ್ಕಳನ್ನು ಕೊಂದ, ಕರ್ಣನಿಂದ ಸೋತ, ಮಹಾಪ್ರಸ್ಥಾನದಲ್ಲಿ ದ್ರೌಪದಿ ಸಹದೇವರ ನಂತರ ದೇಹತ್ಯಾಗ ಮಾಡಿದ. ಇವನಲ್ಲಿ ವಾಯುವಿನ ಶೃಂಗಾರನಾಯಕ ರೂಪವಿತ್ತು. ಅಧ್ಯಾತ್ಮದಲ್ಲಿ ನಕುಲ ಶೀಲದ ಸಂಕೇತ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ನರ | ಶೇಷ | ವಿಷ್ಣು | ದ್ವಾ | ಮ.ಭಾ. | ಯಮಧರ್ಮ ಮೂರ್ತಿ | - |
| ನಲ | ವಿಶ್ವಕರ್ಮ | - | ತ್ರೇ. | ರಾ. | ವಿಶ್ವಕರ್ಮ | - |
| ನಳ (ಲ) | ಮಹರಾಜ | | ದ್ವಾ. | ಮ.ಭಾ. | ವೀರಸೇನ | ದಮಯಂತಿ |
| ನರಕಾಸುರ | ರಾಕ್ಷಸ,ವಾಯು | | ದ್ವಾ. | ಮ.ಭಾ. | ವರಾಹ, ಭೂದೇವಿ | |
| ನಲಕೂಬರ ಮಣಿಗ್ರೀವ | ಗಂಧರ್ವರು ಧುನಿ, ಚಮೂ | ಧುನಿ,ಚಮೂ | ದ್ವಾ. | ಮ.ಭಾ. | ಕುಬೇರ | - |
| ನಮುಚಿ | ಅಸುರ | -- | ತ್ರೇ. | ಭಾಗವತ | ದನು, ಕಶ್ಯಪ | ಸುಪ್ರಭಾ |
| ನರಸಿಂಹ | ಮಹಾವಿಷ್ಣು | -- | ಕೃತ | ಭಾಗವತ | - | ಮಹಾಲಕ್ಷ್ಮಿ |
| ನರಾಂತಕ | ರಾಕ್ಷಸ | -- | ತ್ರೇ. | ರಾ. | ರಾವಣ, ಗಂಧರ್ವಸ್ತ್ರೀ | - |
| ನಕ್ರ | ಹುಹೂ ಗಂಧರ್ವ | -- | ತ್ರೇ. | ಭಾಗವತ | - | - |
| ನಂದ | ದ್ರೋಣ (ವಸು) | -- | ದ್ವಾ | ಮ.ಭಾ. | ಶೂರಸೇನ (ವೈಶ್ಯ ಸ್ತ್ರೀ) | ಯಶೋದಾ |
| ನಂದಿ | ದೇವತೆ | | - | ಭಾಗವತ | ಕಾಮಧೇನು | - |
| ನಹುಷ | ಚಕ್ರವರ್ತಿ | -- | ದ್ವಾ. | ಮ.ಭಾ. | ಆಯು, ಸ್ವರ್ಭಾನವಿ | ವಿರಜೆ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| - | ನಾರಾಯಣನ ಅಣ್ಣ, ಬದರಿಕಾಶ್ರಮವಾಸಿ, ಸಹಸ್ರಕವಚನನ್ನು ಸಂಹರಿಸಿದ. ಇಂದಿಗೂ ಬದರಿಯಲ್ಲಿ ಭಗವಂತನನ್ನು ಆರಾಧಿಸುತ್ತಿರುವ. ಪಾಂಡವರು ಇವನ ಆಶ್ರಮಕ್ಕೆ ಹೋಗಿದ್ದರು. |
| - | ಕಪಿ. ರಾಮಸೇತು ಬಂಧನದಲ್ಲಿ ಪ್ರಧಾನ ಕಾರ್ಯವಹಿಸಿದ್ದ. ಕಪಿಸೇನಾ ನಾಯಕರಲ್ಲೊಬ್ಬ |
| ಇಂದ್ರಸೇನ, ಇಂದ್ರಸೇನಾ | ಈತನ ಸ್ಮರಣೆ ಮಾಡಿದಲ್ಲಿ ಕಲಿಬಾಧಿಸ. ವನದಲ್ಲಿ ಹಂಸಗಳ ಮೂಲಕ ದಮಯಂತಿಯ ವಾರ್ತೆ ತಿಳಿದ. ವಿವಾಹವಾದ ಇವನಲ್ಲಿ ಕಲಿಯ ಪ್ರವೇಶವಾಗಿ ದ್ಯೂತದಲ್ಲಿ ಎಲ್ಲವನ್ನೂ ಕಳೆದುಕೊಂಡು ಹೆಂಡತಿಯೊಂದಿಗೆ ಕಾಡು ಪಾಲಾದ.ಮಡದಿಯನ್ನೂ ತೊರೆದ. ಪುಷ್ಕರ, ಕರ್ಕೋಟಕರ ಸಹವಾಸವಾಯಿತು. ಸೌಂದರ್ಯ ವನ್ನು ತಿಳಿದ. ಮದುವೆಯಾದ. ಜೂಜಿನಿಂದ ಎಲ್ಲವನ್ನು ಕಳೆದುಕೊಂಡು ಕಾಡು ಸೇರಿ ಬಹಳ ಕಷ್ಟಪಟ್ಟರು. ಕಡೆಗೆ ಎಲ್ಲವನ್ನು ಪಡೆದು ರಾಜ್ಯವಾಳಿದ. ನಿಷಧ ದೇಶಾಧಿಪತಿಯಾದ. |
| ಭಗದತ್ತ 7 ಪುತ್ರರು | ವರಾಹರೂಪಿಯ ಬೆವರ ಹನಿ ಭೂಮಿಯಲ್ಲಿ ಬಿದ್ದಾಗ ಜನಿಸಿದ. ಬ್ರಹ್ಮರವರ, ಅಭೇದ್ಯವಾದ ದುರ್ಗ ಗಳಿದ್ದವು.ಲೋಕ ಕಂಟಕನಾದ ರಕ್ಕಸ. ಪ್ರಾಗ್ಜ್ಯೋತಿಷಪುರವನ್ನು ರಾಜಧಾನಿಯನ್ನಾಗಿಸಿಕೊಂಡು ಇಂದ್ರನ ಸಂಪತ್ತನ್ನು ಅಪಹರಿಸಿದ. ಕೃಷ್ಣ ಅಲ್ಲಿಗೆ ಹೋಗಿ ಯುದ್ಧವಾಡಿ ಮುರನ ಹಾಗೂ ಅವನ ಮಕ್ಕಳನ್ನು ಸಂಹರಿಸಿ, ಶತಘ್ನಿಯನ್ನು ನುಂಗಿದ. ಭಾಮೆಯೊಂದಿಗೆ ಸೋತನರಕಾಸುರನನ್ನು ಯುದ್ಧದಲ್ಲಿ ವಧಿಸಿದ. ಭಗದತ್ತನನ್ನು ರಾಜನನ್ನಾಗಿಸಿ, ಬಂಧನದಲ್ಲಿರಿಸಿದ್ದ 16 ಸಾವಿರ ರಾಜಕುವರಿಯರನ್ನು ಮುಕ್ತಗೊಳಿಸಿದ. |
| - | ಕುಬೇರನ ಸಭೆಯಲ್ಲಿದ್ದವರು. ಮಣಿಗ್ರೀವ ಇವನ ತಮ್ಮ. ಶಾಪದಿಂದ ಯುಗಳ ವೃಕ್ಷಗಳಾಗಿ, ಬಾಲಕೃಷ್ಣ ಇವುಗಳನ್ನು ಕೆಡವಲು ಮುಕ್ತರಾದರು. |
| - | ದೇವತೆಗಳೊಂದಿಗೆ ಯುದ್ಧ ಸಾರಿದ. ಲೋಕಕಂಟಕನಾಗಿದ್ದ. ಇಂದ್ರನಿಂದ ಸತ್ತ. |
| - | ಹತ್ತು ಅವತಾರಗಳಲ್ಲೊಂದು. ಬ್ರಹ್ಮದೇವರ ವರವನ್ನು ಸತ್ಯವಾಗಿಸಲು, ಬಾಲಕ ಪ್ರಹ್ಲಾದನ ಮಾತನ್ನು ಸತ್ಯವಾಗಿಸಲು ಮತ್ತು ಭಕ್ತಗೆ ಅಚಲ ನಂಬಿಕೆಗೆ ಒಲಿದು ದುಷ್ಟಸಂಹಾರಕ್ಕಾಗಿ ನರಸಿಂಹ ರೂಪದಲ್ಲಿ ಕಂಭದಿಂದ ಅದ್ಭುತಾಕಾರನಾಗಿ ಆವಿರ್ಭವಿಸಿದ. ಸಂಜೆ ಹೊಸ್ತಿಲ ಮೇಲೆ ಕುಳಿತು ಹಿರಣ್ಯಕಶಿಪುನನ್ನು ತನ್ನ ಉಗುರುಗಳಿಂದ ಹೊಟ್ಟೆ ಬಗೆದು ಸಂಹರಿಸಿ ಕೊರಳ ಮಾಲೆ ಧರಿಸಿದ. ಭಕ್ತ ಪ್ರಹ್ಲಾದಗೆ ಪಟ್ಟ ಕಟ್ಟಿದ. ಬ್ರಹ್ಮನಿಂದ ಸೃಷ್ಟವಲ್ಲದ ರೂಪ. ಎಲ್ಲ ಜೀವರ ಬಿಂಬರೂಪಿ. |
| - | ದೇವಾಂತಕನ ಸಹೋದರ. ಶಿವನ ವರವಿತ್ತು. ಅಂಗದನಿಂದ ಸತ್ತ. |
| - | ಅಗಸ್ತ್ಯರನ್ನು ಅಪಮಾನಿಸಿದ ಕಾರಣ ಶಾಪದಿಂದ ಮೊಸಳೆ ರೂಪ ಪಡೆದ. ಗಜೇಂದ್ರನನ್ನು ಹಿಡಿದವನು. ವಿಷ್ಣುವಿನ ಚಕ್ರದಿಂದ ಹತನಾಗಿ ಮೂಲರೂಪ ಹೊಂದಿದ. |
| ದುರ್ಗಾ, ಕೃಷ್ಣ, ಬಲ ರಾಮ(ಸಾಕುಮಕ್ಕಳು) | ಒಬ್ಬ ವಸು. ಶ್ರೀಹರಿ ಮಗನಾಗಬೇಕೆಂದು ತಪಸ್ಸು ಮಾಡಿದ. ಗೋಕುಲದಲ್ಲಿದ್ದ ಗೊಲ್ಲರ ಪಾಳೆಗಾರ, ವಸುದೇವನ ಆಪ್ತ. ಕೃಷ್ಣನ ಬಾಲಲೀಲೆಗಳನ್ನು ಕಂಡ ಪುಣ್ಯಾತ್ಮ. ಕೃಷ್ಣ ಕಂಸನ ಭೃತ್ಯರಾದ ರಾಕ್ಷಸರನ್ನು ಸಂಹರಿಸಿದ್ದು ಇವನಲ್ಲಿ ಇದ್ದಾಗಲೆ. ಕೃಷ್ಣ ದೊಡ್ಡವನಾದ ಮೇಲೆ ಇವನನ್ನು ಪರಿವಾರದೊಂದಿಗೆ ಸ್ಯಮಂತಪಂಚಕಕ್ಕೆ ಕರೆದೊಯ್ದು ಸನ್ಮಾನಿಸಿದ. |
| - | ವೃಷಭರೂಪಿ, ಈಶ್ವರನ ವಾಹನ, ರಾವಣನಿಗೆ ಶಾಪಕೊಟ್ಟ ಶಿವ ಪಾರ್ವತಿಯರನ್ನು ಅಪಮಾನಿಸಿದ ದಕ್ಷನನ್ನು, ದಕ್ಷಯಜ್ಞನನ್ನು ಧ್ವಂಸಮಾಡಿದ. |
| ಯತಿ, ಯಯಾತಿ ಸಂಯಾತಿ, ಆಯತಿ, | ಚಂದ್ರವಂಶಜ, ಪರಾಕ್ರಮಿ, ಇಂದ್ರದೇವರಿಗೆ ಬ್ರಹ್ಮಹತ್ಯಾದೋಷ ಬಂದು ಸ್ವರ್ಗಲೋಕ ತ್ಯಜಿಸಿದ್ದಾಗ - ಬ್ರಹ್ಮದೇವರು ದೇವತೆಗಳಿಗೆ ನಹುಷನನ್ನು ಇಂದ್ರನ ಪಟ್ಟದಲ್ಲಿ ಕುಳ್ಳಿರಿಸಲು ಆಜ್ಞೆ ಇತ್ತರು. ಭೂಲೋಕದ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ನಗ್ನಜಿತ್ | ಅರಸು | -- | ದ್ವಾ. | ಮ.ಭಾ. | - | |
| ನಚಿಕೇತ | ಮಹರ್ಷಿ | -- | - | ಮ.ಭಾ. | ಉದ್ದಾಲಕ(ಆರುಣಿ) | - |
| ನಾಭಾಗ | ಅರಸು | -- | ತ್ರೇತಾ. | ಭಾಗವತ | ವೈವಸ್ವತಮನು ಶ್ರದ್ಧಾ | - |
| ನಾಭಿ | ಅರಸು | -- | | ಭಾಗವತ | ಅಗ್ನೀಂಧ್ರ, ಅಪ್ಸರೆ | ಮೇರುದೇವಿ |
| ನಾರದ | ದೇವಋಷಿ | -- | ಕೃತ. | ಭಾಗವತ | ಚ. ಬ್ರಹ್ಮ | - |
| ನಾರಾಯಣ | ಮಹಾವಿಷ್ಣು | -- | ಅನಾದಿ, ಅನಂತ | ಭಾಗವತ ಮ.ಭಾ | - | ಮಹಾಲಕ್ಷ್ಮೀ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಅಯತಿ, ಧೃವ | ಇವನನ್ನು ಕೂಡಿಸಿದರು. ಒಮ್ಮೆ ಇಂದ್ರನ ರಾಣಿ ಶಚಿಯನ್ನು ಬಯಸಿ ಅವಳ ಆಶಯದಂತೆ ಸಪ್ತಋಷಿಗಳು ಹೊತ್ತ ಪಲ್ಲಕ್ಕಿಯಲ್ಲಿ ಬರುತ್ತಿರಲು ಅಗಸ್ತ್ಯರ ಶಾಪಕ್ಕೆ ಗುರಿಯಾಗಿ ದೊಡ್ಡ ಸರ್ಪವಾಗಿ ಬಿದ್ದ. ಒಮ್ಮೆ ವನವಾಸದಲ್ಲಿದ್ದ ಭೀಮನನ್ನು ಈ ಹೆಬ್ಬಾವು ಸುತ್ತಿಹಾಕಿದಂತಾಗಿ ಪ್ರಶ್ನೆಗಳನ್ನು ಕೇಳಿತು. ಧರ್ಮರಾಜ ಉತ್ತರಿಸಿ ಬಿಡಿಸಿದ. ಭೀಮನ ಸಂಪರ್ಕದಿಂದ ಹೆಬ್ಬಾವು ದೇಹವನ್ನು ತೊರೆದ ನಹುಷ ಸ್ವರ್ಗಕ್ಕೆ ಹೋದ. |
| ಸತ್ಯ (ನೀಲಾ) | ಕೋಸಲ ದೇಶದ ರಾಜ. ಈತನಲ್ಲಿ ಕೊಬ್ಬಿದ ದುಷ್ಟವಾದ ಏಳು ಘೂಳಿಗಳಿದ್ದವು. ಇವುಗಳನ್ನು ನಿಗ್ರಹಿಸಿದವನಿಗೆ ತನ್ನ ಮಗಳನ್ನು ಕೊಡುವುದಾಗಿ ಪಣವಿಟ್ಟ ಕೃಷ್ಣ ಈ ಘೂಳಿಗಳ ಸೊಕ್ಕನ್ನು ಮುರಿದು ನೀಲಾಳನ್ನು ಮದುವೆಯಾದ. ಒಮ್ಮೆ ಕರ್ಣನಿಂದ ಪರಾಜಿತನಾಗಿದ್ದ. |
| – | ತಂದೆಯ ಕೋಪದಿಂದಾಗಿ ಶಾಪ ಹೊಂದಿ ಯಮಲೋಕಕ್ಕೆ ಹೋಗಿ ಯಮನಿಂದ ಉಪದೇಶ ಪಡೆದ. ಅದೇ ಕಠೋಪನಿಷತ್ ಎಂದು ಪ್ರಸಿದ್ಧವಾಯಿತು.ಮಹಾಜ್ಞಾನಿ, ಜಿತೇಂದ್ರಿಯ. |
| ಅಂಬರೀಷ | ಸೂರ್ಯವಂಶಜ, ಇಕ್ಷ್ವಾಕುವಿನ ತಮ್ಮ. ಮನುವಿನ ಒಂಬತ್ತನೇ ಮಗ. ಸೋದರರು ಆಸ್ತಿಯಲ್ಲಿ ಭಾಗ ಕೊಡದ ಕಾರಣ ಕಡೆಗೆ ಯಜ್ಞದ ಉಚ್ಛಿಷ್ಟವು ಸಿಕ್ಕಿತು. ರುದ್ರದೇವರ ಅನುಗ್ರಹವಾಯಿತು. |
| ಋಷಭ | ಸೂರ್ಯವಂಶಜ, ಈತನು ಆಳಿದ ಭೂಪ್ರದೇಶಕ್ಕೆ ಭಾರತ ಎಂಬ ಹೆಸರು ಬಂತು. |
| – | ಬ್ರಹ್ಮರ ಹತ್ತು ಪುತ್ರರಲ್ಲಿ ಕಡೆಯವರು. ಬ್ರಹ್ಮರ ತೊಡೆಯಿಂದ ಜನಿಸಿದರು. ಬ್ರಹ್ಮರ ಮಾನಸಪುತ್ರರೂ ಆದವರು. ಬ್ರಹ್ಮಚಾರಿ. ತ್ರಿಲೋಕ ಸಂಚಾರಿ. ಮಹಾಜ್ಞಾನಿ, ಕಚ್ಛಪಿ ಇವರ ವೀಣೆ. ಲೋಕಕ್ಕೆ ಕಲ್ಯಾಣವನ್ನುಂಟುಮಾಡುವುದೇ ಪ್ರಧಾನಕಾರ್ಯ. ಶ್ರೀಹರಿಯ ಪರಮಭಕ್ತರು. ದಕ್ಷನ ಮಕ್ಕಳಾದ ಹರ್ಯಶ್ವ, ಶಬಲಾಶ್ವರಿಗೆ ಉಪದೇಶ ನೀಡಿ ಊರ್ಧ್ವಗಾಮಿಗಳನ್ನಾಗಿಸಿ ದಕ್ಷನಿಂದ ಶಾಪ ಪಡೆದು ತ್ರಿಲೋಕ ಸಂಚಾರಿಗಳಾದರು. ಇತಿಹಾಸದ ಎಲ್ಲೆಲ್ಲೂ ಇವರ ಪಾತ್ರ ಉಂಟು. ಅಸುರವರ್ಗದವರಿಗೂ ಪ್ರಿಯರಾದವರಾಗಿದ್ದರು. ದ್ರೌಪದಿಯು ಒಂದೊಂದು ವರುಷ ಐವರಲ್ಲಿರಲು ಇವರೇ ವ್ಯವಸ್ಥೆ ಮಾಡಿದರು. ಧ್ರುವ, ಪ್ರಹ್ಲಾದಾದಿಗಳಿಗೆ ಉಪದೇಶಕರು. ವೇದವ್ಯಾಸರನ್ನು ಪ್ರಾರ್ಥಿಸಿ ಭಾಗವತವನ್ನು ರಚಿಸಲು ಮೂಲರಾದರು. ಚಿತ್ರಕೇತುವಿಗೆ ಉಪದೇಶಮಾಡಿ ದುಃಖ ಕಳೆದರು. ಶ್ರೀಕೃಷ್ಣನು ದ್ವಾರಕೆಯಲ್ಲಿದ್ದಾಗ ಹೋಗಿ ಭಗವಂತನ ಅನಂತ ಗುಣಗಳನ್ನು + ಮಾಹಾತ್ಮೆಯನ್ನು ಪ್ರತ್ಯಕ್ಷ ಕಂಡು ಸಾರಿದರು. ಕೃಷ್ಣ ಎಲ್ಲ ಪತ್ನಿಯರೊಂದಿಗೆ ಏಕಕಾಲದಲ್ಲಿ ಇದ್ದ ವಿಶ್ವರೂಪವನ್ನು ಕಂಡ ಧನ್ಯಾತ್ಮರು. ಕೃಷ್ಣನಲ್ಲಿಯೇ ಸಂಗೀತಾಭ್ಯಾಸಮಾಡಿ ತುಂಬುರರ ಸರಿಸಾಟಿಯಾದರು. ದೇವತೆಗಳಿಗೆ ಮಹಾಭಾರತವನ್ನು ಪ್ರವಚನಗೈದವರು. ನಾರದರ ಪ್ರವೇಶವಿಲ್ಲದ ಸ್ಥಳವಿಲ್ಲ. ಭಗವಂತನ ಸರ್ವೋತ್ತಮತ್ವವನ್ನು ಜಗತ್ತಿಗೆ ಸಾರಿದರು. ಮೂರು ಯುಗಗಳಲ್ಲೂ ಇವರ ಪಾತ್ರ ಹಾಸುಹೊಕ್ಕಾಗಿ ಬಂದಿದೆ. |
| ಬ್ರಹ್ಮಾಂಡ | ಸರ್ವಗುಣಪೂರ್ಣನಾದ ಯಾವ ದೋಷಗಂಧವೂ ಇಲ್ಲದ ಸರ್ವೋತ್ತಮನಾದ ಸ್ವತಂತ್ರನಾದ ಪುರುಷೋತ್ತಮ, ಮಹಾವಿಷ್ಣುವಿನ ಮೂಲರೂಪ, ಪರಬ್ರಹ್ಮವಾಚ್ಯನು. ಸಕಲ ಶಬ್ದಗಳಿಂದ ವಾಚ್ಯನು. ಜಗತ್ತಿನ ಸೃಷ್ಟ್ಯಾದಿ ಅಷ್ಟಕರ್ತನು ಇವನೆ. ಮೋಕ್ಷದಾತನು ಇವನೇ ಆಗಿರುವ. ಅನಂತ ಅವತಾರಗಳೆತ್ತಿ ಅವನ ಅದ್ಭುತ ಮಹಾತ್ಮ್ಯೆಗಳನ್ನು ಪ್ರಕಟಿಸುವ, ಧರ್ಮಜ್ಞಾನಿಯಾದಾಗ ಅದನ್ನು ಮತ್ತೆ ಪುನಃ ಸ್ಥಾಪಿಸಲು ತಾನೇ ಅವತಾರವೆತ್ತಿ ಬಂದು ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ರಕ್ಷಿಸುವ. ಸಕಲ ಆಗಮಗಳಿಂದ ಸರ್ವೋತ್ತಮನೆಂದು ವೇದ್ಯನಾದವನು. ಚರಾಚರ ಜಗತ್ತು ಇವನ ದಾಸರು. ಅನುಚರರು. ಕೇವಲ ಅಮಲವಾದ ಭಕ್ತಿಗೆ ಮಾತ್ರ ನಿಲುಕುವವನು. ಅನಂತನಾದ ಇವನನ್ನು ರಮಾಬ್ರಹ್ಮರುದ್ರಾದಿಗಳೂ ಸಾಕಲ್ಯೇನ ತಿಳಿಯಲಾರರು. ಆದಕ್ಕೆ ಇವನೇ ಜ್ಞೇಯನು ಗಮ್ಯನು. (ನಾರಾಯಣ ಹೆಸರಿನಿಂದ ಯಮಧರ್ಮ ಮೂರ್ತಿಯರಲ್ಲಿ ಅವತರಿಸಿ ಬದರಿಕಾಶ್ರಮದಲ್ಲಿ ನೆಲೆಸಿದ.) |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ನಿಕುಂಭ | ರಾಕ್ಷಸ | -- | ತ್ರೇತಾ | ರಾ | ಕುಂಭಕರ್ಣ, ವೃತ್ರಜ್ವಾಲೆ | - |
| ನಿಕುಂಭ | ಅಸುರ | -- | ತ್ರೇತಾ. | ಭಾಗವತ | ಪ್ರಹ್ಲಾದ | - |
| ನಿಮಿ | ಚಕ್ರವರ್ತಿ | -- | ತ್ರೇತಾ. | ಭಾಗವತ | ಇಷ್ವಾಕು, | - |
| ನಿವಾತಕವಚರು | ಅಸುರರು | -- | ದ್ವಾ. | ಮ.ಭಾ. | ಸಂಹ್ಲಾದ | - |
| ನೀಲ | ಅಗ್ನಿ | | ತ್ರೇತಾ. | ರಾ. | ವಾನರಜ. | - |
| ನಿತಾ (ಸತ್ಯಾ) | ಗೋಪಿ | -- | ದ್ವಾ. | ಮ.ಭಾ. | ಕುಂಭಕ (ನಗ್ನಜಿತ್) | ಕೃಷ್ಣ |
| ನೀಲಕಂಠ | ರುದ್ರದೇವರು | -- | ತ್ರೇತಾ. | ಭಾಗವತ | ಚ. ಬ್ರಹ್ಮ | ಪಾರ್ವತಿ |
| ನೃಗ | ಅರಸು | -- | - | ಮ.ಭಾ. | ಇಕ್ಷ್ವಾಕು | - |
| ಪರಶುರಾಮ | ಮಹಾವಿಷ್ಣು | -- | ತ್ರೇತಾ./ದ್ವಾ | ಭಾಗವತ ರಾ.ಭಾ. | ಜಮದಗ್ನಿ ರೇಣುಕಾ | ಮಹಾಲಕ್ಷ್ಮೀ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| – | ಕುಂಭನ ತಮ್ಮ, ಲೋಕಕಂಟಕ, ಸೀತೆಯನ್ನು ರಾಮನಿಗೆ ಒಪ್ಪಿಸಬಾರದೆಂದು ರಾವಣನಿಗೆ ಹೇಳಿದ. ಹನುಮಂತ ಸೀತಾನ್ವೇಷಣೆಗೆ ಲಂಕೆಗೆ ಹೋದಾಗ ಅವನೊಂದಿಗೆ ಹೋರಾಡಿ ಸತ್ತ. |
| ಸುಂದೋಪ-ಸುಂದರು | ಪ್ರಹ್ಲಾದನ ಕಡೆಯ ಮಗ, ವಿರೋಚನ ಕುಂಭರ ತಮ್ಮ, ವಿರೋಚನೆ ಎಂಬ ಸಹೋದರಿ ಇದ್ದಳು. |
| ಜನಕ, (ವಿದೇಹ ಮಿಥಿ) | ಸೂರ್ಯವಂಶಜ, ಹನ್ನೆರಡನೆಯ ಮಗ, ಶಶಾದವಿಕುಕ್ಷಿಯರ ತಮ್ಮ, ಗೌತಮಾದಿಗಳಿಂದ ಸಹಸ್ರ ವರ್ಷ ಯಾಗ ಮಾಡಿದ, ವಶಿಷ್ಠರಿಂದ ಶಾಪ ಹೊಂದಿ ಸತ್ತ. ಇವನ ದೇಹದ ಬಲತೊಡೆಯನ್ನು ಮಥಿಸಿ ಮಕ್ಕಳನ್ನು ಪಡೆದರು. ಜನಕನೆ ಮುಂದಿನ ರಾಜನಾದ. ಇವನ ಮಗನೆ ಮಿಥಿಲಾನಗರ ನಿರ್ಮಿಸಿದ. |
| – | ಪ್ರಹ್ಲಾದನ ತಮ್ಮನ ಮಕ್ಕಳು. ಲೋಕಕಂಟಕರು, ಮೂರುಕೋಟಿ ಸಂಖ್ಯಾಕರು. ಬ್ರಹ್ಮವರ ಪಡೆದವರು ಇಂದ್ರನನ್ನೂ ಪೀಡಿಸುತ್ತಿದ್ದರು. ಅರ್ಜುನ ಇಂದ್ರನೊಂದಿಗೆ (ವನವಾಸಕಾಲದಲ್ಲಿ ಅಲ್ಲಿದ್ದಾಗ) ಈ ಪರಿವಾರವನ್ನು ಸಂಹರಿಸಿದ. ಇದೇ ಸಂದರ್ಭದಲ್ಲಿ ದೇವತೆಗಳು ಅರ್ಜುನನಿಗೆ ದೇವದತ್ತ ಎಂಬ ಶಂಖವನ್ನು ಕೊಟ್ಟರು. |
| – | ವಾನರ, ಸುಗ್ರೀವನ ಸೇನಾಪತಿಗಳಲ್ಲೊಬ್ಬ, ಬಲಶಾಲಿ, ಲಂಕಾಯುದ್ಧದಲ್ಲಿ ಅನೇಕ ಅಸುರರನ್ನು ಕೊಂದ. |
| – | ಯಶೋದೆಯ ಸೋದರನ ಮಗಳು. ಇವಳನ್ನು ಕಣ್ಕಿಟ್ಟದ್ದ, ವರಬಲದ ಏಳು ಗೂಳಿಗಳನ್ನು ಸಂಹರಿಸಿ ಕನ್ಯೆಯನ್ನು ಪಡೆದ. ನಿಲಾ ಕೃಷ್ಣನ ಮೊದಲ ಪತ್ನಿಯಾಗಬೇಕೆಂದು ವರ ಪಡೆದಿದ್ದಳು. ಮತ್ತೊಮ್ಮೆ ನಗ್ನಜಿತ್‌ನಲ್ಲಿ ಜನ್ಮವೆತ್ತಿ ಕೃಷ್ಣನನ್ನು ಮದುವೆಯಾದಳು. |
| ಗಣೇಶ, ಷಣ್ಮುಖ | ದೇವದಾನವರು ಅಮೃತಕ್ಕಾಗಿ ಸಮುದ್ರಮಥನ ಮಾಡುವ ಕಾಲದಲ್ಲಿ ವಿಷವು ಉತ್ಪನ್ನವಾಯಿತು. ಅದನ್ನು ವಾಯುದೇವರು ಪಾನಮಾಡಿ ಶೇಷವನ್ನು ದೇವತೆಗಳ ಪ್ರಾರ್ಥನೆ ಮೇಲೆ ಶಿವನು ಕುಡಿದನು. ವಿಷವನ್ನು ಕೊರಳಲ್ಲೆ ನಿಲ್ಲಿಸಿಕೊಂಡ ಕಾರಣ ಇವನಿಗೆ ಈ ಹೆಸರು ಬಂದಿತು. ವಿಷಕಂಠನೆಂದು ಹೆಸರಿದೆ. ಅಂದಿನ ದಿನವೆ ಶಿವರಾತ್ರಿ ಎನಿಸಿದೆ. ಹೆಚ್ಚಿನದ್ದನ್ನು ರುದ್ರ ಶಿವರಲ್ಲಿ ನೋಡುವುದು. |
| ವಸು | ಸೂರ್ಯವಂಶಜ, ಈತ ಅನೇಕ ಗೋವುಗಳನ್ನು ದಾನ ಮಾಡಿದ. ಒಮ್ಮೆ ಒಬ್ಬ ಬ್ರಾಹ್ಮಣನಿಗೆ ದಾನಕೊಟ್ಟ ಒಂದು ಓವು ಹೇಗೋ ಹಿಂದೆ ಬಂದು ರಾಜನ ಆಕಳುಗಳ ಮಂದಿಯನ್ನೇ ಸೇರಿತು. ರಾಜ ಅದನ್ನೇ ಇನ್ನೊಬ್ಬ ಬ್ರಾಹ್ಮಣನಿಗೆ ದಾನ ಕೊಟ್ಟ, ಹೇಗೋ ತಿಳಿದು ಇಬ್ಬರೂ ರಾಜನಲ್ಲಿಗೆ ಬಂದರು. ಜಗಳ ಬಗೆಹರಿಯದೆ ರಾಜ ಓತಿಯಾಗಲು ಶಪಿಸಿದರು. ಮುಂದೆ ಕೃಷ್ಣ ಓತಿಯಿಂದ ಈ ಕಥೆಯನ್ನು ಕೇಳಿ ರಾಜನನ್ನು ಉದ್ಧರಿಸಿದ. ಇವನನ್ನು ಸ್ವರ್ಗಕ್ಕೆ ಕಳಿಸಿದ. |
| – | ಭಗವಂತನ ಅವತಾರಗಳಲ್ಲೊಂದು. ಭೃಗುವಂಶದಲ್ಲಿ ಅವತರಿಸಿದ. ಕ್ಷತ್ರ ಕುಲಾಂತಕ. ಸೀತಾರಾಮರ ಸ್ವಯಂವರದ ನಂತರ ರಾಮನನ್ನು ಎದುರಾಗಿ ಯುದ್ಧಕ್ಕೆ ಕರೆದರು. ಅದಕ್ಕೂ ಮುಂಚೆ ತನ್ನಲ್ಲಿದ್ದ ಶಾರ್ಙ್ಗಧನಸ್ಸನ್ನು ರಾಮನ ಕೈಲಿ ಕೊಟ್ಟು ಹೆದೆಯೇರಿಸೆನಲು ಹೇಳಿದರು. ರಾಮ ಲೀಲೆಯಿಂದ ದಾರ ಕಟ್ಟಿ ಬಾಣ ಹಿಡಿಯಲು, ಇವರ ನಾಭಿಗೆ ಬಿಡಲು ಹೇಳಿ ಅಲ್ಲಿದ್ದ ಅತುಲನೆಂಬ ಅಸುರನನ್ನು ಸಂಹರಿಸಿದರು. ರಾಮ ಪರಶುರಾಮರು ಒಂದೇ ಎಂದು ಸಿದ್ಧಪಡಿಸಿದರು. ಉನ್ಮತ್ತ ದುಷ್ಟ ಕ್ಷತ್ರಿಯರನ್ನು ನಾಶಗೊಳಿಸಲು ಎತ್ತಿದ ಅವತಾರ. ಮಹಾಪರಾಕ್ರಮಿ. 21 ಸಲ ಭೂ ಪ್ರದಕ್ಷಿಣೆ ಮಾಡಿದ. ಕೊಡಲಿ ಇವರ ಆಯುಧ. ದ್ವಾಪರದಲ್ಲಿ ಭೀಷ್ಮ ದ್ರೋಣಾದಿಗಳಿಗೆ ಶಾಸ್ತ್ರ ಹಾಗೂ ಧನುರ್ವಿದ್ಯೆಯನ್ನು ಕಲಿಸಿದ. ಕರ್ಣನೂ ಇವರಲ್ಲೇ ಕಲಿತು ಕಡೆಗೆ ಶಾಪಕ್ಕೂ ಗುರಿಯಾದ. 17 ಅಕ್ಷೋಹಿಣಿ ಸೈನ್ಯ ಹಾಗೂ ಕಾರ್ತವೀರ್ಯಾರ್ಜುನನ ಎಲ್ಲ ಬಾಹುಗಳನ್ನು ಕತ್ತರಿಸಿ ಕೊಂದ. ತಂದೆಯ ಆಜ್ಞೆಯಂತೆ ತಾಯಿಯ ಶಿರವನ್ನು ಛೇದಿಸಿ ವರ ಪಡೆದು ಬದುಕಿಸಿದ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಪರಾಶರ | ಮಹರ್ಷಿ | -- | ದ್ವಾ | ಮ.ಭಾ. | ಶಕ್ತಿ ಅದೃಶ್ಯಂತಿ | (ಸತ್ಯವತಿ) |
| ಪರೀಕ್ಷಿತ | ಚಕ್ರವರ್ತಿ | ಪರೀಕ್ಷಿತ್ | ದ್ವಾ. | ಮ.ಭಾ. | ಅಭಿಮನ್ಯು, ಉತ್ತರಾ | ಭದ್ರವತಿ, ಸುವೇಷ (ಇರಾವತಿ), ಬಾಹ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಭೀಷ್ಮರೊಂದಿಗೆ ಯುದ್ಧವಾಡಿ (ಅಂಬೆಗಾಗಿ) ಸೋತಂತೆ ನಟಿಸಿದ. (ಕಶ್ಯಪರಿಗೆ ಭೂಮಿಯನ್ನು ದಾನ ಮಾಡಿದ. ತಾನು ಪರಶುರಾಮ ಕ್ಷೇತ್ರವನ್ನು ನಿರ್ಮಿಸಿಕೊಂಡ. ಇವನಿಗೆ ನಾಲ್ವರು ಸೋದರರು). ದ್ರೌಪದಿ ಸ್ವಯಂವರದಲ್ಲಿ ಪಾಂಡವರ ರಾಜಸೂಯಯಾಗದಲ್ಲಿ ಭಾಗವಹಿಸಿದ. ದುರ್ಯೋಧನನಿಗೆ ಸಂಧಿ ಮಾಡಿಕೊಳ್ಳಲು ಉಪದೇಶ ಮಾಡಿದ. ಪರಶುರಾಮ ಚಿರಂಜೀವಿಗಳಲ್ಲಿ ಒಬ್ಬ ಮಹೇಂದ್ರ ಪರ್ವತದಲ್ಲಿ ನೆಲೆಸಿರುವ.ಭಾರತದಲ್ಲಿ ಕೃಷ್ಣ ವೇದವ್ಯಾಸ ಪರಶುರಾಮರು ಜ್ಞಾನಿಗಳಿಗೆ ಭಗವಂತನ ಅವತಾರಗಳಾಗಿ ಕಂಡವು. |
| ಬಾದರಾಯಣ (ವೇದವ್ಯಾಸ) | ವಶಿಷ್ಠರ ಮೊಮ್ಮಗ. ಒಮ್ಮೆ ಶಕ್ತಿ ಋಷಿಗಳು ಕಾಡಿನಲ್ಲಿದ್ದಾಗ ಒಬ್ಬ ರಾಕ್ಷಸ ಇವರನ್ನು ಕೊಂದು ನುಂಗಿ ಹಾಕಿದ. ಇದನ್ನು ತಿಳಿದ ವಶಿಷ್ಠರು ಖಿನ್ನರಾಗಿ ದೇಹತ್ಯಾಗ ಮಾಡಲು ಯತ್ನಿಸಿದರು. ಪ್ರಯತ್ನ ವಿಫಲವಾದಾಗ ಆಶ್ರಮಕ್ಕೆ ಹಿಂತಿರುಗಿ ಬಂದಾಗ ಸೊಸೆ ಅದೃಶ್ಯಂತಿ ಗರ್ಭವತಿಯಾದದ್ದು ತಿಳಿಯಿತು. ಗರ್ಭದಲ್ಲಿದ್ದ ಶಿಶುವು ವೇದಪಠನ ಮಾಡುತ್ತಿರುವುದನ್ನು ಕೇಳಿದ ವಶಿಷ್ಠರು ಆಚ್ಚರಿಗೊಂಡರು. ಈ ಶಿಶುವೇ ಪರಾಶರರಾದರು. ತಂದೆಯ ದುರ್ಮರಣದ ದುಃಖ ಹಾಗೂ ರೋಷದಿಂದ ಸಕಲ ರಾಕ್ಷಸ ಸಮುದಾಯ ನಾಶಕ್ಕೆ ಯಜ್ಞ ಮಾಡಲಾಗಿ ತಾತ ನಿಲ್ಲಿಸಿದರು. ಒಮ್ಮೆ ಯಮುನಾ ನದಿಯ ಬಳಿಯಲ್ಲಿ ಬಂದು ದಾಟಲಿಚ್ಛಿಸಿದಾಗ ಒಬ್ಬ ಬೆಸ್ತ ತನ್ನ ಸಾಕುಮಗಳಾದ ಮತ್ಸ್ಯಗಂಧಿಯನ್ನು ದೋಣಿ ನಡೆಸಲು ಕಳುಹಿದ. ಆಗ ಇವರು ಅವಳ ಕನ್ಯಾವಸ್ಥೆಗೆ ಯಾವ ಭಂಗ ಉಂಟಾಗದಂತೆ ಅವಳಲ್ಲಿ ಸದ್ಯೋಗರ್ಭದಿಂದ ಬಾದರಾಯಣರನ್ನು ಪಡೆದರು. ಭಗವಂತನೆ ಅವತರಿಸಿ ಬಂದ. ಅವಳಿಗೆ ದುರ್ಗಂಧ ಹೋಗಿ ಕನ್ಯತ್ವವನ್ನು ಅನುಗ್ರಹಿಸಿದರು. ಈ ಶಿಶುವೇ ಕೃಷ್ಣದ್ವೈಪಾಯನ-ವೇದವ್ಯಾಸರೆಂದಾದರು. ಪರಾಶರರು ಗೋತ್ರ ಪ್ರವರ್ತಕರು. ಹಿಂದಿನ ಸಾಧನೆಗಳಿಂದಾಗಿ ಭಗವಂತನನ್ನೇ ಮಗನನ್ನಾಗಿ ಪಡೆದ ಪುಣ್ಯಾತ್ಮರು. |
| ಜನಮೇಜಯ<br>ಶ್ರುತಸೇನ, ಉಗ್ರಸೇನ<br>ಭೀಮಸೇನ | ಚಂದ್ರವಂಶಜ, ಅರ್ಜುನನ ಮೊಮ್ಮಗ, ಪಾಂಡುರಾಜನ ವಂಶೋದ್ಧಾರಕ. ತಾಯಿಯ ಗರ್ಭದಲ್ಲಿದ್ದಾಗ ಅಶ್ವತ್ಥಾಮರ ಬ್ರಹ್ಮಶಿರೋಸ್ತ್ರ ಏನೂ ಮಾಡದೆ ಶ್ರೀಕೃಷ್ಣನ ಪರಮಾನುಗ್ರಹದಿಂದ ಉಳಿದ. ಹುಟ್ಟಿ ಮೃತನಾಗಲು ಮತ್ತೆ ಕೃಷ್ಣ ಬದುಕಿಸಿದ. ಈತ ಗರ್ಭದಲ್ಲಿದ್ದಾಗ ಭಗವಂತ ದರುಶನಕೊಟ್ಟ ಕಾರಣ ಪರೀಕ್ಷಿತನೆನಿಸಿದ. ಒಮ್ಮೆ ಒಬ್ಬ ಶೂದ್ರಜ ಒಂದು ಗೋವು, ವೃಷಭವನ್ನು ಹಿಂಸಿಸುತ್ತಿರುವುದನ್ನು ಕಂಡ. ಆ ವೃಷಭ ಒಂದು ಕಾಲಲ್ಲಿ ನಿಂತಿತ್ತು. (ವೃಷಭ ಧರ್ಮದೇವತೆ ಒಂದು ಪಾದದಲ್ಲಿತ್ತು, ಗೋವು ಭೂದೇವಿ ಹಾಗೂ ಆ ಶೂದ್ರಜ ಕಲಿಪುರುಷ) ಆಗ ಕಲಿಯನ್ನು ನಿಗ್ರಹಿಸಲು ಹೋದಾಗ ಹೆದರಿದ ಕಲಿ ಬೇಡಿದಂತೆ ವರಕೊಟ್ಟು ಅವನನ್ನು ದೇಶದಿಂದ ಓಡಿಸಿದ. ಈತ ಮೂರು ಸಲ ಅಶ್ವಮೇಧಯಾಗವನ್ನು ಮಾಡಿದ, ಧರ್ಮಿಷ್ಠನಾಗಿ ಧರ್ಮವನ್ನು ಉಳಿಸಿದ. ಒಮ್ಮೆ ಬೇಟೆಗಾಗಿ ಹೋದಾಗ ಬಳಲಿ ಶಮೀಕರ ಆಶ್ರಮಕ್ಕೆ ಹೋದ. ಅಲ್ಲಿ ಸಮಾಧಿ ಸ್ಥಿತಿಯಲ್ಲಿದ್ದ ಶಮೀಕರನ್ನು ಪರೀಕ್ಷಿಸಲೆಂದು ಅಲ್ಲೇ ಸತ್ತು ಬಿದ್ದಿದ್ದ ಹಾವನ್ನು ತನ್ನ ಬಿಲ್ಲಿನ ತುದಿಯಿಂದ ಎತ್ತಿ ಅವರ ಕುತ್ತಿಗೆಗೆ ಹಾಕಿ ಹೊರಟ. ಇದನ್ನು ಕಂಡ ಶಮೀಕರ ಮಗ ವಟು ಶೃಂಗಿ ಕೋಪಗೊಂಡು ಈ ಕೃತ್ಯ ಎಸಗಿದವನು ಏಳು ದಿನಗಳಲ್ಲಿ ತಕ್ಷಕನಿಂದ ಕಚ್ಚಿಸಾಯಲೆಂದು ಶಾಪಕೊಟ್ಟ. ಎಚ್ಚೆತ್ತ ಶಮೀಕರು ಬಾಲಕನನ್ನು ಬೈದು ತಕ್ಷಣ ಪರೀಕ್ಷಿತನಿಗೆ ಶಿಷ್ಯನಿಂದ ತಿಳಿಸಿದರು. ಪಶ್ಚಾತ್ತಾಪದಿಂದ ರಾಜ ತಕ್ಷಣ ಮಗ ಜನಮೇಜಯನಿಗೆ ಪಟ್ಟಗಟ್ಟಿ ಗಂಗಾತೀರಕ್ಕೆ ಪ್ರಾಯೋಪವೇಶಕ್ಕೆ ಹೊರಟ. ಇವನು ಆಳಿದ ಅರವತ್ತು ವರುಷ ರಾಮರಾಜ್ಯದಂತಿತ್ತು. ಗಂಗಾತೀರದಲ್ಲಿ ಕುಳಿತಾಗ ಅನೇಕ ಋಷಿಮುನಿಗಳು ಆಗಮಿಸಿದರು. ಸಾಕ್ಷಾತ್ ಶುಕಮುನಿಗಳು ಆಗಮಿಸಿ ಏಳು ದಿನಗಳು ಶ್ರೀಮದ್ಭಾಗವತವನ್ನು ಉಪದೇಶಿಸಿ ಹೊರಟರು. ಧ್ಯಾನದಿಂದ ಪ್ರಾಯೋಪ್ರವೇಶಕ್ಕೆ ಕುಳಿತ ಪರೀಕ್ಷಿತ ತನ್ನ ಶರೀರವನ್ನು ತ್ಯಜಿಸಿದ ತಕ್ಷಣ ತಕ್ಷಕ ಕಚ್ಚಿದ. ಇವನ ನಿಮಿತ್ತದಿಂದ ಭಾಗವತ ಜಗತ್ತಿಗೆ ಬಂದಿತು. ಕಡೆಗೆ ಉತ್ತಮಗತಿ ಪಡೆದ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಪಂಚಜನ | ಅಸುರ | -- | ದ್ವಾ. | ಮ.ಭಾ. | ಸಂಹ್ಲಾದ | - |
| ಪಾಂಡು | ಪರಾವಹ | ವಾಯು | ದ್ವಾ. | ಮ.ಭಾ. | ವಿಚಿತ್ರವೀರ್ಯ ಅಂಬಾಲಿಕೆ (ವೇದವ್ಯಾಸ) | ಕುಂತಿ ಮಾದ್ರಿ |
| ಪಾರ್ವತಿ | ಉಮಾ | -- | ತ್ರೇತಾ. | - | ಪರ್ವತರಾಜ, ಮೇನೆ | ಶಿವ |
| ಪಿಪ್ಪಲಾದ | ಮಹರ್ಷಿ | -- | ದ್ವಾ. | - | ದಧೀಚಿ,ಸುವರ್ಚಾ (ಪ್ರಾತಿಥ್ಯೇ(ಯೀ) | ಪದ್ಮಾವತಿ |
| ಪೀವರಿ | ದೇವತೆ | -- | ದ್ವಾ. | ಮ.ಭಾ. | ಪಿತೃದೇವತೆಗಳು | ಶುಕಾಚಾರ್ಯ |
| ಪುರಂದರ | ಮಹಾವಿಷ್ಣು | -- | ತ್ರೇತಾ. | ಭಾಗವತ | ಕಶ್ಯಪ, ಅದಿತಿ | ಮಹಾಲಕ್ಷ್ಮಿ(ಶಚಿ) |
| ಪುರಂಜಯ (ಇಂದ್ರವಾಹ) | ಮಹಾರಾಜ | -- | ಕೃ. | ಭಾಗವತ | ವಿಕುಕ್ಷಿ | - |
| ಪುಂಜಕಸ್ಥಲಾ | ಅಪ್ಸರೆ | -- | ತ್ರೇತಾ. | ರಾ. | ಕುಂಜರ | ಕೇಶರಿ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| – | ಹಿರಣ್ಯಕಶಿಪುವಿನ ಮೊಮ್ಮಗ. ಕೃಷ್ಣ ಬಲರಾಮರ ಗುರುಗಳಾದ ಸಂದೀಪನಿಯ ಪುತ್ರರನ್ನು ಅಪಹರಿಸಿ ಸಮುದ್ರದಲ್ಲಿ ಬಚ್ಚಿಟ್ಟಿದ್ದ. ಕೃಷ್ಣ ಅಲ್ಲಿಗೆ ಹೋಗಿ ಇವನನ್ನು ಸಂಹರಿಸಿ, ಪಾಂಚಜನ್ಯ ಶಂಖವನ್ನು ಪಡೆದು ಮಗನನ್ನು ಗುರುಗಳಿಗೆ ಒಪ್ಪಿಸಿ ಗುರುದಕ್ಷಿಣೆಯಾಗಿ ನೀಡಿದ. |
| ಧರ್ಮರಾಜ, ಭೀಮಸೇನ, ಅರ್ಜುನ, ನಕುಲ, ಸಹದೇವ | ಒಬ್ಬ ಮರುತ್. ಚಂದ್ರವಂಶಜ. ವೇದವ್ಯಾಸರಿಂದ ನಿಯೋಗ ರೀತಿಯಲ್ಲಿ ಜನಿಸಿದ. ತಾಯಿಯ ದೋಷದಿಂದಾಗಿ ಬಿಳಿಯಾಗಿ ಬಿಳಿಚಿಕೊಂಡದ್ದರಿಂದ ಈ ಹೆಸರು. ಧೃತರಾಷ್ಟ್ರ ಹಾಗೂ ವಿದುರರು ಸಹೋದರರು. ಪರಾಕ್ರಮಿ. ಭೀಷ್ಮರು ಶಾಸ್ತ್ರ ವಿದ್ಯೆಯನ್ನು ಕಲಿಸಿ. ಇವನನ್ನೇ ಹಸ್ತಿನಾವತಿಯ ರಾಜನನ್ನಾಗಿಸಿದರು. ತನ್ನ ಪರಾಕ್ರಮದಿಂದ ರಾಜ್ಯವನ್ನು ವಿಸ್ತರಿಸಿದ. ಒಮ್ಮೆ ಅರಣ್ಯಕ್ಕೆ ಬೇಟೆಗಾಗಿ ಹೋದಾಗ ಕಿಂದಮನೆಂಬ ಮುನಿ ಮೃಗವೇಷದಲ್ಲಿ ತನ್ನ ಪತ್ನಿಯೊಂದಿಗೆ ಕ್ರೀಡಿಸುತ್ತಿರಲು ತಿಳಿಯದೆ ಗಂಡು ಮೃಗಕ್ಕೆ ಬಾಣಬಿಟ್ಟು ಕೊಂದ. ಸಾಯುವಾಗ ಆ ಮೃಗವೇಷಿ ಮುನಿ 'ನೀನು ನಿನ್ನ ಪತ್ನಿಯೊಂದಿಗೆ ಕೂಡಿದಾಗ ಸಾಯಿ' ಎಂದು ಶಪಿಸಿದ. ಪಾಂಡು ರಾಜ್ಯವನ್ನು ತೊರೆದು ಭೀಷ್ಮರಿಗೊಪ್ಪಿಸಿ ನಾರಾಯಣಾಶ್ರಮದ ಬಳಿಯ ಶತಶೃಂಗ ಪರ್ವತದ ಬಳಿ ನೆಲೆಸಿದರು. ಸನ್ಯಾಸಿಯಂತೆ ಜೀವನ ನಡೆಸಿದ. ಪಾಂಡುರಾಜ ಕುಂತಿಯಲ್ಲಿ ಧರ್ಮ, ಭೀಮ, ಅರ್ಜುನರನ್ನು ಮಾದ್ರಿಯಲ್ಲಿ ನಕುಲ-ಸಹದೇವರನ್ನು ಕುಂತಿ ಪಡೆದಿದ್ದ ದೂರ್ವಾಸರ ಮಂತ್ರಬಲದಿಂದ ಮಕ್ಕಳನ್ನು ಪಡೆದ. ಒಮ್ಮೆ ಮಾದ್ರಿಯೊಂದಿಗೆ ಬೆರೆತಾಗ ಶಾಪತಟ್ಟಿ ಮೃತನಾದ. ಮಾದ್ರಿಯು ಇವನೊಂದಿಗೆ ಸಹಗಮನ ಮಾಡಿದಳು. ಸ್ವರ್ಗ ಸೇರಿದ. |
| ಗಣೇಶ, ಷಣ್ಮುಖ | ದಕ್ಷಪ್ರಜೇಶ್ವರನ ಮಗಳಾಗಿ ಜನಿಸಿದ ಸತೀದೇವಿ ತಂದೆಯ ಯಾಗದಲ್ಲಿ ಪತಿಗೆ ಅಗೌರವ ಆದುದಕ್ಕೆ ಆತ್ಮಾಗ್ನಿಯಲ್ಲಿ ದೇಹತ್ಯಾಗ ಮಾಡಿ ಹಿಮವಂತನ ಮಗಳಾಗಿ ಜನಿಸಿದಳು. ಅತಿ ಕಠಿಣ ತಪಸ್ಸನ್ನಾಚರಿಸಿ ಶಿವನನ್ನು ವರಿಸಿ ಮದುವೆಯಾದಳು. ಇವಳಿಗೆ ಉಮಾ, ಅಪರ್ಣಾ, ಗಿರಿಜೆ ಎಂಬೆಲ್ಲಾ ಹೆಸರುಗಳು ಬಂದವು. ಇಂದ್ರನ ನಿಯತ ಗುರುವು. ಸೌಭಾಗ್ಯ ದೇವತೆ. ಮಹಾಪತಿವ್ರತೆಯಾಗಿ ಎಲ್ಲ ಸ್ತ್ರೀಯರ ಆರಾಧ್ಯಳು. ಶಿವನ ಅರ್ಧಾಂಗಿ. |
| – | 12 ವರ್ಷಕ್ಕಿಂತಲೂ ಚಿಕ್ಕವರಿಗೆ ಪೀಡಿಸದಿರಲು ಶನೈಶ್ಚರನಿಗೆ ಆಜ್ಞೆ ಮಾಡಿದ. ದಧೀಚಿ ಋಷಿಗಳು ತಮ್ಮ ಬೆನ್ನ ಮೂಳೆಯನ್ನು ದೇವರಾಜನಿಗೆ ದಾನ ಮಾಡಿ ದೇಹತ್ಯಾಗ ಮಾಡಿದ ನಂತರ ಇವರು ಜನಿಸಿದರು. ನಚಿಕೇತುವಿನಿಂದ ಅಧ್ಯಾತ್ಮ ವಿದ್ಯೆ ಕಲಿತರು. |
| ಕೃಷ್ಣ, ಶಂಭು, ಗೌರಪ್ರಭ, ಜಯಭೂರಿಶ್ರವ ಮತ್ತು ಕೃತ್ವಿ | ಈಕೆ ವಿಷ್ಣುವನ್ನು ತಪಸ್ಸಿನಿಂದ ಒಲಿಸಿ ವೈರಾಗ್ಯಶಾಲಿಯಾದ ಶುಕನನ್ನು ಪಡೆದಳು. ವೇದವ್ಯಾಸರ ಸೊಸೆ. ಜ್ಞಾನಿಯಾದವಳು. ಇವಳ ಮಗಳಾದ ಕೃತ್ವಿಯನ್ನು ಚಂದ್ರವಂಶದ ಅಣುಹನೆಂಬ ರಾಜನಿಗೆ ಕೊಟ್ಟು ಮದುವೆ ಮಾಡಿದಳು. |
| ಜಯಂತ | ವೈವಸ್ವತ ಮನ್ವಂತರದಲ್ಲಿ ಭಗವಂತನೆ ಇಂದ್ರನಾಗಿ ಅವತರಿಸಿ ಸ್ವರ್ಗಲೋಕವನ್ನು ಆಳಿ ದೇವೇಂದ್ರನಾದ. ಈತ ನೂರು ಅಶ್ವಮೇಧ ಯಾಗಗಳನ್ನು ಮಾಡಿದ್ದ. ಇವನ ಆಳ್ವಿಕೆಯಲ್ಲಿ ಭಗವಂತ ವಾಮನ ರೂಪಿಯಾಗಿ ಅವತರಿಸಿದ. |
| ಅನೇನಾ | ಸೂರ್ಯವಂಶಜ, ಬಲಿಷ್ಠರಾಜ, ದೇವತೆಗಳ ಜಯಕ್ಕೆ ಇಂದ್ರನನ್ನೇ ಎತ್ತಾಗಿಸಿಕೊಂಡು, ಮೇಲೆ ಕೂತು ಯುದ್ಧ ಮಾಡಿದ. ಇಂದ್ರನಿಗೆ ರಾಜ್ಯ ಕೊಡಿಸಿದ. |
| ಹನುಮಂತ | ಶಾಪದಿಂದ ಕಪಿಯಾಗಿ ಜನಿಸಿದಳು. ಇವಳೇ ಅಂಜನಾ. ಇವಳು ವಾಯುದೇವರನ್ನು ಸೇವಿಸಿ-ವರಿಸಿ ಮದುವೆಯಾದಳು. ಆಂಜನೇಯನನ್ನು ಪಡೆದಳು. ಜೀವೋತ್ತಮರಾದ ವಾಯುನಂದನನ ತಾಯಿ ಎನಿಸಿಕೊಂಡ ಧನ್ಯಾತ್ಮಳು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಪುಲಸ್ತ | ಮಹರ್ಷಿ | -- | ಕೃತ/ದ್ವಾ. | ಭಾಗವತ | ಚ.ಬ್ರಹ್ಮರ ಪುತ್ರ | ಹವಿರ್ಭುಕ್ ಕೇಕಸಿ, (ಕೈಕಸಿ) |
| | | | | | | ಪ್ರತೀಚ್ಯಾ, ಸಂಧ್ಯಾ ಇಲಿಬಿಲೆ |
| ಪುರುಜಿತ್ | ಅರಸು | -- | ದ್ವಾ. | ಮ.ಭಾ. | ಕುಂತೀಭೋಜ | - |
| ಪುಲಹ | ಬ್ರಹ್ಮರ್ಷಿ | -- | ಕೃ. | ಭಾಗವತ | ಚ.ಬ್ರಹ್ಮ | ಗತಿ |
| ಪುಲೋಮಾ | ರಾಕ್ಷಸಿ | -- | ದ್ವಾ. | ಮ.ಭಾ. | ವೈಶ್ವಾನರ | ಮಾರೀಚ |
| ಪೂರೂರವಸ್ | ಅರಸು | -- | ತ್ರೇ. | ಮ.ಭಾ. | ಬುಧ, ಇಲೆ | ಊರ್ವಶಿ ಪೌಷ್ಟೀ |
| ಪೂತನಾ | ತಾಟಕಿ | ಊರ್ವಶಿ | ದ್ವಾ. | ಮ.ಭಾ. | - | - |
| ಪೂರು | ಅರಸು | -- | ದ್ವಾ. | ಮ.ಭಾ. | ಯಯಾತಿ, ಶರ್ಮಿಷ್ಠೆ | ಕೌಸಲ್ಯೆ, ಪೌಷ್ಟಿ |
| ಪುರೋಚನ | ಅಸುರ (ಮ್ಲೇಚ್ಛ) | ಪ್ರಹಸ್ತ | ದ್ವಾ. | ಮ.ಭಾ. | ನಿಷಾದೀ | - |
| ಪೃಥು | ಚಕ್ರವರ್ತಿ | -- | - | ಭಾಗವತ | ವೇನ, | ಅರ್ಚಿ |
| ಪೃಷಧ್ರ | ಮಹಾರಾಜ | -- | ತ್ರೇ. | ಭಾಗವತ | ಮನು | - |
| ಪೈಲ | ಮಹರ್ಷಿ | ಶೇಷ | ದ್ವಾ. | ಮ.ಭಾ. | ಪಿಲಿಋಷಿ | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಅಗಸ್ತ್ಯ, ಕುಬೇರ ರಾವಣ, ಕುಂಭಕರ್ಣ | ವಿಶ್ರವಸ್ಸು ಎಂಬ ನಾಮಾಂತರವೂ ಇದೆ. ಬ್ರಹ್ಮರ ಕಿವಿಯಿಂದ ಜನಿಸಿದರು. ಅನೇಕ ಹೆಂಡರನ್ನು ಮಾಡಿಕೊಂಡು ಸತ್ಪುರುಷ ಹಾಗೂ ರಾಕ್ಷಸರನ್ನೂ ಪಡೆದ. ಒಮ್ಮೆ ಕಾರ್ತವೀರ್ಯಾರ್ಜುನ ರಾವಣನನ್ನು ಸೆರೆಯಲ್ಲಿರಿಸಿದ್ದಾಗ ಅವನನ್ನು ಬಿಡಿಸಿದ. |
| ವಿಭೀಷಣ, ಶೂರ್ಪಣಖಾ, ವಿಶ್ರವಸ್ಸು | ಮರೀಚಿ, ಅತ್ರಿ, ವಶಿಷ್ಠಾದಿಗಳು, ಇವನ ಸೋದರರು. ಕೃತ ಹಾಗೂ ದ್ವಾಪರದಲ್ಲಿದ್ದ ಮಹರ್ಷಿ. |
| – | ಕುಂತಿಯ ಒಡಹುಟ್ಟಿದವನು, ಅತಿರಥ, ಪಾಂಡವರ ಪರಹೋರಾಡಿ ದ್ರೋಣರಿಂದ ಹತನಾದ. |
| ಕರ್ಮ, ವರೀಯಸ್ ಸಹಿಷ್ಣು | ಬ್ರಹ್ಮರ ನಾಭಿಯಿಂದ ಜನಿಸಿದ. ಒಬ್ಬ ಪ್ರಜಾಪತಿ, ಕರ್ದಮರ ಅಳಿಯ. |
| ಅನೇಕ ಅಸುರರು (ಪೌಲೋಮರು) | ಈ ಅಸುರ ಮಕ್ಕಳ ಸೈನ್ಯಕ್ಕೆ ಪೌಲೋಮರೆಂದು ಹೆಸರು, ಅರ್ಜುನ ಇಂದ್ರಲೋಕದಲ್ಲಿದ್ದಾಗ ಇಂದ್ರನನ್ನು ಹಿಂಸಿಸಿದಾಗ ಇವರೆಲ್ಲರನ್ನೂ ಕೊಂದ. |
| ಆಯು, ಸತ್ಯಾಯು, ರಮ, ವಿಜಯ, ಜಯ ಶ್ರುತಾಯು, ಪ್ರವೀರ | ಚಂದ್ರವಂಶದ ಮೂಲಪುರುಷ. ಪರಾಕ್ರಮಿ. ಸುಂದರ. ಊರ್ವಶಿಯೊಂದಿಗೆ ಸಕಲ ಭೋಗಭಾಗ್ಯವನ್ನು ಅನೇಕ ವರುಷಗಳು ಅನುಭವಿಸಿದ. ಅವಳ ನಿಯಮ ಉಲ್ಲಂಘನೆಯಿಂದಾಗಿ ಸ್ವರ್ಗಕ್ಕೆ ಹಿಂತಿರುದಳು. ಊರ್ವಶಿಯಲ್ಲಿ ಏಳು ಮಕ್ಕಳನ್ನು ಪಡೆದ. ಕಡೆಗೆ ಬ್ರಾಹ್ಮಣರ ಶಾಪದಿಂದ ನಾಶಹೊಂದಿದ. |
| – | ಕಂಸನ ಭೃತ್ಯೆ ರಕ್ಕಸಿ, ಕಂಸನ ಅಪ್ಪಣೆಯಂತೆ ಬಾಲಕೃಷ್ಣನಿಗೆ ವಿಷಪೂರಿತ ಸ್ತನದ ಹಾಲನ್ನು ಕೊಟ್ಟು ಸಾಯಿಸಲು ಸುಂದರವಾದ ವೇಷಧರಿಸಿ ನಂದನ ಗೃಹಕ್ಕೆ (ಬೃಹದ್ವನ) ಬಂದು ಹಾಲನುಣಿಸಿ ತಾನೇ ಸತ್ತಳು. ಹಿಂದೆ ತಾಟಕಿಯಾಗಿ ರಾಮನಿಂದ ಹತಳಾಗಿದ್ದವಳು. ಇವಳ ಒಳಗಿದ್ದು ಊರ್ವಶಿ ಸ್ವರ್ಗಸೇರಿದಳು. ಪೂತನೆ ತಮಸ್ಸಿಗೆ ಹೋದಳು. |
| ಜನಮೇಜಯ, ಪ್ರವೀರ, ಈಶ್ವರ, ರೌದ್ರಾಶ್ವ ಹತ್ತು ಮಕ್ಕಳು | ಚಂದ್ರವಂಶಜ, ಅನು, ದ್ರುಹ್ಯು, ಇವನ ಅಣ್ಣಂದಿರು. ಈತನು ತನ್ನ ಯೌವನವನ್ನು ತನ್ನ ತಂದೆಗೆ ಕೊಟ್ಟು ತಂದೆಯ ವೃದ್ಧಾಪ್ಯವನ್ನು ಸ್ವೀಕರಿಸಿದ. ಕಡೆಗೆ ಸಂತುಷ್ಟನಾದ ಯಯಾತಿ, ತಾರುಣ್ಯವನ್ನು ಹಿಂತಿರುಗಿಸಿ ತನ್ನ ರಾಜ್ಯದಲ್ಲಿ ಇವನನ್ನೇ ಪಟ್ಟ ಕಟ್ಟಿದ. ಅನೇಕ ವರುಷ ರಾಜ್ಯವಾಳಿ ನಂತರ ಪ್ರವೀರನಿಗೆ ಪಟ್ಟಕಟ್ಟಿ ಅರಣ್ಯಕ್ಕೆ ಹೋದ. |
| – | ದುರ್ಯೋಧನನ ಆಪ್ತಮಂತ್ರಿ, ಅರಗಿನ ಮನೆಯನ್ನು ಕಟ್ಟಿದವನು, ಇವನ ಗುಟ್ಟನ್ನು ವಿದುರ ಪಾಂಡವರಿಗೆ ತಿಳಿಸಿದ್ದ. ದುಷ್ಟನಾದ ಇವನು ತಾಯಿ ಹೆಂಡತಿ ನಾಲ್ಕು ಅನುಜರೊಂದಿಗೆ ಅದೇ ಮನೆಯಲ್ಲಿ ಸುಟ್ಟು ಭಸ್ಮನಾದ. ಇವನು ರಾಮಾವತಾರದಲ್ಲಿ ಪ್ರಹಸ್ತನಾಗಿದ್ದ. |
| ಅಂತರ್ಧಾನ, ಫಲಿತ | ವೇನನು ಸಾತ್ವಿಕ ಜೊತೆಗೆ ದುಷ್ಟರಾಜನಾಗಿದ್ದ. ರಾಜ್ಯದಲ್ಲಿ ಕಳ್ಳಕಾಕರರ ಪ್ರವೃತ್ತಿ ಅಧರ್ಮ ತಾಂಡವವಾಡಿತು. ಕಾರಣನಾದ ವೇನನನ್ನು ಕೃದ್ಧ ಬ್ರಾಹ್ಮಣ ಋಷಿಮುನಿಗಳು ನಿಗ್ರಹಿಸಿದರು. ಇವನ ದೇಹದ ಭಾಗವನ್ನು ಮಥಿಸಲಾಗಿ ಪೃಥು ಹುಟ್ಟಿಬಂದ. ಸನ್ಯಾಸಿಗಳಿಂದ ಸಂವೃದ್ಧವಾಗಿ ಪೃಥುವಿನ ಮಗಳೆಂಬ ಅರ್ಥದಲ್ಲಿ ಪೃಥ್ವಿ ಎಂಬ ಹೆಸರು ಬಂತು. ಈತನಿಂದಾಗಿ ಚಾತುರ್ವರ್ಣಗಳು, ನಗರಪಟ್ಟಣಗಳು, ನಿರ್ಮಾಣವಾಗಿ ಸುವ್ಯವಸ್ಥಿತವಾದವು. |
| – | ಮನುವಿನ ಎಂಟನೇ ಮಗ. ರಾತ್ರಿಕಾಲದಲ್ಲಿ ಹುಲಿ ಎಂದು ಭ್ರಮಿಸಿ ಗೋವನ್ನು ಕೊಂದು ಶೂದ್ರನಾದ. ತಪಸ್ಸು ಮಾಡಿ ಉತ್ತಮಗತಿ ಪಡೆದ. |
| – | ವ್ಯಾಸ ಶಿಷ್ಯರು. ಋಗ್ವೇದ ಪ್ರವರ್ತಕ, ದೇವಮೀಮಾಂಸಾ ಬರೆದರು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಪೃಷತ | ಅರಸು | – | ದ್ವಾ. | ಮ.ಭಾ. | ಸೋಮಕ | – |
| ಪ್ರದ್ಯುಮ್ನ | ಮನ್ಮಥ | ಸನತ್ಕುಮಾರ | ದ್ವಾ. | ಮ.ಭಾ. | ಶ್ರೀಕೃಷ್ಣರುಕ್ಮಿಣಿ | ರುಕ್ಮವತಿ (ಶುಭಾಂಗಿ) |
| ಪ್ರತೀಪ | ಮಹಾರಾಜ | -- | ದ್ವಾ. | ಮ.ಭಾ. | ಭೀಮಸೇನ, ಸುಕುಮಾರಿ | ಸುನಂದ |
| ಪ್ರಲಂಬ | ರಾಕ್ಷಸ | -- | ದ್ವಾ. | ಮ.ಭಾ. | – | – |
| ಪ್ರಚೇತಸ | ಅರಸು | -- | – | ಭಾಗವತ | ಪ್ರಾಚೀನ ಬರ್ಹಿ ಶತದ್ರುತಿ | ಮಾರಿಷೆ (ವಾರ್ಕ್ಷೀ) |
| ಪ್ರಮ್ಲೋಚಾ | ಅಪ್ಸರೆ | -- | ದ್ವಾ. | ಮ.ಭಾ. | – | ಕಂಡುಮುನಿ |
| ಪ್ರಹ್ಲಾದ | ಮಹಾರಾಜ | ವಾಯು | ಕೃ. | ಭಾಗವತ | ಹಿರಣ್ಯಕಶಿಪು ಕಯಾಲು | – |
| ಪ್ರಹಸ್ತ | ರಾಕ್ಷಸ | -- | ತ್ರೇ. | ರಾ. | ಸುಮಾಲಿ | – |
| ಪ್ರಸೇನಜಿತ್ | ಯಾದವ | -- | ದ್ವಾ. | ಮ.ಭಾ. | ನಿಮ್ನ | – |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ದ್ರುಪದ | ಹೂಹೂ ಗಂಧರ್ವ ಅಯೋನಿಜನಾಗಿ ಜನಿಸಿದ. ಪಾಂಚಾಲದ ರಾಜ. ಭಾರದ್ವಾಜರ ಮಿತ್ರ. |
| ಅನಿರುದ್ಧ | ಶಂಬರಾಸುರ ಈ ಮಗುವನ್ನೇ ನಾರದರು ಹೇಳಿದಂತೆ ಮೃತ್ಯುವೆಂದು ಮಾಯೆಯಿಂದ ಎತ್ತಿಕೊಂಡು ಹೋಗಿ ಸಮುದ್ರದಲ್ಲಿ ಎಸೆದ. ಅದನ್ನು ಮೀನು ನುಂಗಿತು. ಬೆಸ್ತರವ ಈ ಮೀನನ್ನು ಶಂಬರಾಸುರನ ಮನೆಗೆ ಕೊಟ್ಟ. ಕೊಯ್ಯಲಾಗಿ ಸಿಕ್ಕ ಈ ಮಗುವನ್ನು ರಾಣಿ ಮಾಯಾವತಿ ನಾರದರ ಉಪದೇಶದಂತೆ ರಕ್ಷಿಸಿದಳು. ಎಲ್ಲ ಮಾಯಾವಿದ್ಯೆಯನ್ನು ಕಲಿಸಿದಳು. ಇವನ ಪತ್ನಿ ರತಿಯೇ ಶಾಪದಿಂದಾಗಿ ಮಾಯಾವತಿಯಾಗಿ ಶಂಬರ ನಲ್ಲಿದ್ದು ಪತಿಯನ್ನು ಬೆಳೆಸಿ ವಿದ್ಯೆ ಕಲಿಸಿದಳು. ಶಂಬರಾಸುರನನ್ನು ಯುದ್ಧಮಾಡಿ ಸಂಹರಿಸಿ ರುಕ್ಮಿಣಿ ಬಳಿಗೆ ಬಂದ. ಏಳು ದಿನದ ಮಗು ಹೋಗಿ ಮಡದಿಯೊಂದಿಗೆ ದ್ವಾರಕೆಗೆ ಬಂದವನು. ರುಕ್ಮಿಯ ಪುತ್ರಿ ರುಕ್ಮವತಿ ಯನ್ನು ಮದುವೆಯಾದ. ಭಾಸ್ಕರ ಕ್ಷೇತ್ರದಲ್ಲಿ ಬಂಧುಗಳೊಂದಿಗೆ ಮಡಿದ. |
| ದೇವಾಪಿ, ಶಂತನು ಬಾಹ್ಲಿಕ | ಚಂದ್ರವಂಶಜ, ಅವೀಕ್ಷಿತನ ವಂಶಜ, ಒಮ್ಮೆ ಗಂಗಾತೀರದಲ್ಲಿ ತಪಸ್ಸನ್ನಾಚರಿಸುತ್ತಿರುವಾಗ ಒಬ್ಬ ಸುಂದರ ಕನ್ಯೆ ಇವನ ಬಲತೊಡೆಯ ಮೇಲೆ ಕುಳಿತು ತನ್ನನ್ನು ವರಿಸಲು ಕೇಳಿದಳು. ಇವಳು ಗಂಗೆ. ಬಲತೊಡೆಯ ಮೇಲೆ ಕೂತಿದ್ದರಿಂದ ಮಗಳೆಂದು ಸ್ವೀಕರಿಸಿ ತನ್ನ ಸೊಸೆಯಾಗೆಂದ. ಹೀಗಾಗಿ ಶಂತನುವನ್ನು ಮದುವೆಯಾದಳು. |
| – | ಕಂಸನ ಅನುಚರ. ಸ್ಕಂದರ ವರವಿತ್ತು. ಗೋಕುಲದಲ್ಲಿ ಗೊಲ್ಲ ಬಾಲಕ ವೇಷಿಯಾಗಿ ಕೃಷ್ಣ ಬಲರಾಮರನ್ನು ಕೊಲ್ಲಲು ಬಂದ. ಎಲ್ಲರೊಂದಿಗೆ ಆಟವಾಡುತ್ತ ಬಲರಾಮನನ್ನು ಹೊತ್ತಿಕೊಂಡು ಹೋಗಿ, ಅವನಿಂದಲೇ ಸತ್ತ. |
| ದಕ್ಷ | ಪೃಥು ಚಕ್ರವರ್ತಿಯ ವಂಶಸ್ಥ ಪ್ರಜಾಪತಿಗಳಾಗಲು ಮಾಡಿದ ತಪಸ್ಸು ಫಲಿಸಲಿಲ್ಲ. ಈ ಹನ್ನೊಂದು ಜನ ಗೊಂಡಾರಣ್ಯವನ್ನು ನಾಶಪಡಿಸುತ್ತಿರಲು ಚಂದ್ರ ಇವರನ್ನು ಸಂತೈಸಲು ವೃಕ್ಷ ಪುತ್ರಿಯಾದ ಮಾರಿಷೆಯನ್ನು ಕೊಟ್ಟು ಮದುವೆ ಮಾಡಿದ. |
| ಮಾರಿಷೆ | ಇಂದ್ರನ ಮಾತಿನಂತೆ ಕಂಡು ಮುನಿಯ ತಪಸ್ಸನ್ನು ಕೆಡಿಸಲು ಬಂದು ಅವನ ವಶವಾದಳು. ಗರ್ಭಿಣಿಯಾಗಿ ಆ ಗರ್ಭ ಮುನಿಯ ಭಯಕ್ಕೆ ಕರಗಿ ನೀರಾಯಿತು. ಅದು ಸ್ರವಿಸಿ ಅರಣ್ಯದಲ್ಲಿ ಮಗುವಾಯಿತು. |
| ವಿರೋಚನ, ಕುಂಭ ನಿಕುಂಭ, ರಚನೆ | ಶ್ರೀಹರಿಯ ಅಚ್ಛಿನ್ನ ಭಕ್ತ. ತಾಯಿಯ ಗರ್ಭದಲ್ಲಿದ್ದಾಗ ನಾರದರಿಂದ ಉಪದೇಶ ಪಡೆದ. ಇವನಿಗೆ ಸಂಹ್ಲಾದ, ಅನುಹ್ಲಾದ, ಶಿಬಿ ಮತ್ತು ಬಾಷ್ಕರೆಂಬ ಸೋದರರು. ಇವನು ಬಾಲ್ಯದಲ್ಲಿ ಶಂಡಾಮರ್ಕರ ನಾಸ್ತಿಕಪಾಠಕ್ಕೆ ವಿರುದ್ಧವಾಗಿ ಬೋಧಿಸಿದ. ಇವನಲ್ಲಿಯ ಹರಿಭಕ್ತಿಯನ್ನು ತೊಲಗಿಸಲೆಂದು ತಂದೆ ಮಾರಣಾಂತಿಕ ಶಿಕ್ಷೆಗಳನ್ನು ವಿಧಿಸಿದ. ಎಲ್ಲ ಪ್ರಯತ್ನಗಳೂ ವ್ಯರ್ಥವಾದವು. ಕಡೆಗೆ ತಂದೆಗೆ ಬುದ್ಧಿ ಹೇಳಿದ ಇವನನ್ನು 'ನಿನ್ನ ಹರಿ ಎಲ್ಲಿರುವ' ನೆಂದು ಕೇಳಲು 'ಸರ್ವತ್ರ' ನೆಂದ. ಕಂಭಕ್ಕೆ ತುಳಿದು ತಾಡಿಸಿದಾಗ ಅದ್ಭುತರೂಪ ನರಸಿಂಹ ರೂಪದಿಂದ ಶ್ರೀಹರಿ ಹೊರಬಂದು ಹಿರಣ್ಯಕಶಿಪುನನ್ನು ಕೊಂದ. ಇವನು ಬಾಲಕರಿಗೆ ಮಾಡಿದ ಉಪದೇಶ ನರಸಿಂಹ ಸ್ತುತಿ ಅದ್ಭುತವಾಗಿದೆ. ನಂತರ ಇವನೇ ಭಗವಂತನಿಂದ ಪಟ್ಟಾಭಿಷಿಕ್ತನಾಗಿ ರಾಜ್ಯವಾಳಿದ. ತಂದೆಯನ್ನು ಮುಕ್ತಗೊಳಿಸಿದ. |
| – | ರಾವಣನ ಮಂತ್ರಿ, ರಾವಣನ ಸೋದರಮಾವ, ನೀಲನೆಂಬ ಕಪಿನಾಯಕನಿಂದ ಸತ್ತ. ಇವನೇ ಮುಂದೆ ದುರ್ಯೋಧನನ ಆಪ್ತನಾದ ಪುರೋಚನ ಆದ. ಬಂಧು ಸಮೇತ ಪಾಂಡವರಿಂದ ಅರಗಿನ ಮನೆಯಲ್ಲಿ ಸತ್ತ. |
| – | ಸತ್ರಾಜಿತನ ತಮ್ಮ (ಸತ್ಯಭಾಮೆಯ ಚಿಕ್ಕಪ್ಪ) ಒಮ್ಮೆ ಸ್ಯಮಂತಕ ಮಣಿಯನ್ನು ಧರಿಸಿ ಅಶ್ವವನ್ನೇರಿ ಅರಣ್ಯಕ್ಕೆ ಹೋಗಿ ಒಂದು ಸಿಂಹದಿಂದ ಹತನಾದ. ಇವನಿಂದಾಗಿ ಕೃಷ್ಣನ ಮೇಲೆ ಅಪವಾದ ಬಂದಿತು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಪ್ರಿಯವ್ರತ | ಚಕ್ರವರ್ತಿ | ಪ್ರಿಯವ್ರತ | ಕೃ.ಯು. | ಭಾಗವತ | ಸ್ವಾಯಂಭುವ, ಶತರೂಪಾ | ಬರ್ಹಿಷ್ಮತಿ, ಕುಕ್ಷಿ |
| ಪೌಂಡ್ರಕ | ವೇನ(ಅಸುರ) | -- | ದ್ವಾ. | ಮ.ಭಾ. | ವಸುದೇವ, | - |
| ಬಲರಾಮ | ಶೇಷ | ಸಂಕರ್ಷಣ ವಾಯು | ದ್ವಾ. | ಮ.ಭಾ. | ವಸುದೇವ, ರೋಹಿಣಿ | ರೇವತಿ, ಸುನಾಮ್ನಿ ಶ್ರೀದೇವಿ |
| ಬಕಾಸುರ | ರಾಕ್ಷಸ | -- | ದ್ವಾ. | ಮ.ಭಾ. | - | - |
| ಬಕ | ರಾಕ್ಷಸ | -- | ದ್ವಾ. | ಮ.ಭಾ. | - | - |
| ಬಭ್ರು ವಾಹನ | ಜಯಂತ | ಕಾಮ | ದ್ವಾ. | ಮ.ಭಾ. | ಅರ್ಜುನ, ಚಿತ್ರಾಂಗದ | - - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಅಗ್ನೀಧ್ರ, ಇದ್ಮಜಿಹ್ವ ಯಜ್ಞಬಾಹು ಹೀಗೆ 9 ಪುತ್ರರು, ಊರ್ಜಸ್ವತಿ, ಪುತ್ರಿ ಉತ್ತಮ, ತಾಪಸ, ರೈವತ | ಉತ್ತಾನಪಾದನ ಅಣ್ಣ. ವಿಶ್ವಕರ್ಮನ ಅಳಿಯ, ಶುಕ್ರಾಚಾರ್ಯರಿಗೆ ಮಗಳನ್ನು ಕೊಟ್ಟು ಮದುವೆಮಾಡಿದ. ಕುಕ್ಷಿಯಲ್ಲಿ 10 ಮಕ್ಕಳನ್ನು ಪಡೆದ. ರಾತ್ರಿಯನ್ನು ಹಗಲನ್ನಾಗಿಸಿದ ಮಹಾಪರಾಕ್ರಮಿ. ಈತನ ರಥದ ಚಕ್ರಗಳ ಚಲನೆಯಿಂದಾಗಿ ಸಪ್ತ ಸಮುದ್ರ, ಸಪ್ತದ್ವೀಪಗಳಾದವು. ಇವನು ಹನ್ನೊಂದು ಅರ್ಬುದ ವರ್ಷಕಾಲ ರಾಜ್ಯವನ್ನಾಳಿದ. ಕಡೆಗೆ ನಾರದರಿಂದ ತತ್ತ್ವೋಪದೇಶ ಪಡೆದು ತಪಸ್ಸಿಗಾಗಿ ಹೊರಟ. |
| – | ಇವನನ್ನು ಪೌಂಡ್ರಕ ವಾಸುದೇವನೆನ್ನುವರು. ಪುತ್ರಿಕಾ ಪುತ್ರ ಧರ್ಮದಿಂದ ಆಲ್ಲೇ ಉಳಿದ. ದುಷ್ಟ ಅಸುರ. ಯಾದವರಿಗೆ ಶತೃವಾಗಿದ್ದ. ಕೃಷ್ಣನಿಗೆ ಸಮಾನನೆಂದು ಮೆರೆಯುತ್ತಿದ್ದ. ಕೃಷ್ಣನಂತಾಗಲು ಕೃತಕ ಶಂಖು ಚಕ್ರಗಳನ್ನು ಧರಿಸಿದ, ಶ್ರೀವತ್ಸ ಚಿಹ್ನೆಗೆಂದು ಎದೆ ಸುಟ್ಟುಕೊಂಡ ಪಾಪಿ. ನಾನೇ ನಿಜವಾಸುದೇವನೆಂದು ಭ್ರಮಿಸಿದ. ಕಡೆಗೆ ಕೃಷ್ಣನ ಮೇಲೆ ಕಾಶೀ ರಾಜನೊಂದಿಗೆ ಬಂದು ಇಬ್ಬರೂ ಸತ್ತರು. |
| ಶಠ, ಉಲ್ಮುಕ, ದುರ್ಮದ, ವತ್ಸಲಾ | ವಸುದೇವನಿಂದ ದೇವಕಿಗರ್ಭಸೇರಿ ಅಲ್ಲಿಂದ ದುರ್ಗಾದೇವಿ ರೋಹಿಣಿಯ ಗರ್ಭಕ್ಕೆ ವರ್ಗಾಯಿಸಿ ಅವಳಲ್ಲಿ ಜನಿಸಿದ. ಗೋಕುಲದಲ್ಲಿ ನಂದನ ಮನೆಯಲ್ಲಿ ಹುಟ್ಟಿದ. ಕೃಷ್ಣನ ಅಣ್ಣ. ಬಹುಪರಾಕ್ರಮಿ. ಬಾಲ್ಯದಲ್ಲಿ ಕೃಷ್ಣನೊಂದಿಗೆ ಬೆಳೆದ. ಗೋಕುಲದಲ್ಲಿ ಧೇನುಕಾಸುರನನ್ನು ಪ್ರಲಂಬಾಸುರನನ್ನು ಕೊಂದ. ಕಂಸನ ವಧಾ ನಂತರ ಉಪನಯನವಾಗಿ ಕೃಷ್ಣನೊಂದಿಗೆ ಸಂದೀಪಿನಿಯ ಬಳಿಗೆ ವಿದ್ಯಾಭ್ಯಾಸಕ್ಕೆ ಹೋದರು. ಕುಕುದ್ಮಿಯ ಮಗಳಾದ ರೇವತಿಯನ್ನು ತಕ್ಕವಳನ್ನಾಗಿಸಿಕೊಂಡು ಮದುವೆಯಾದ. ಪ್ರದ್ಯುಮ್ನನ ಮದುವೆಯಲ್ಲಿ ಜೂಜಾಡುತ್ತಿದ್ದ ರುಕ್ಮಿಯನ್ನು ಸಿಟ್ಟಿನಿಂದ ಕೊಂದಿದ್ದ. ಸಾಂಬ ದುರ್ಯೋಧನನ ಮಗಳು ಲಕ್ಷಣೆಯನ್ನು ಅಪಹರಿಸಿದಾಗ ಬಂಧಿಸಿ ಸೆರೆಯಲ್ಲಿಟ್ಟರು. ಆಗ ಕೃದ್ಧನಾದ ಇವನು ಬಲಪ್ರಯೋಗಿಸಿ ಹಸ್ತಿನಾವತಿಯನ್ನು ಗಂಗೆಯಲ್ಲಿ ಹಾಕುವುದಾಗಿ ಹೇಳಿ ಬಿಡಿಸಿಕೊಂಡು ಬಂದ. ಭೀಮಸೇನಗೆ ಗದಾವಿದ್ಯೆಯನ್ನು ಕಲಿಸಿದ ಗುರು. ಶಮಂತಕ ಮಣಿಯ ಬಗ್ಗೆ ಕೃಷ್ಣನ ಮೇಲೆ ತಪ್ಪಾಗಿ ತಿಳಿದು ವಿದೇಹಕ್ಕೆ ಹೋದ. ಅಲ್ಲಿಗೆ ಬಂದ ದುರ್ಯೋಧನನಿಗೆ ಗದಾವಿದ್ಯೆ ಕಲಿಸಿದ. ತಂಗಿ ಸುಭದ್ರೆಯನ್ನು ದುರ್ಯೋಧನನಿಗೆ ಕೊಡುವುದಾಗಿ ವಾಗ್ದಾನಮಾಡಿ ವಿಫಲನಾದ. ಮಹಾಭಾರತ ಯುದ್ಧದಲ್ಲಿ ಭಾಗವಹಿಸದೆ ತೀರ್ಥಯಾತ್ರೆಗೆ ಹೊರಟ. ಕಂಟಕನಾಗಿದ್ದ ಬಲ್ವಲನನ್ನು ಕೊಂದು, ರೊಮಹರ್ಷಣನನ್ನು ವಧಿಸಿ ನಂತರ ಬದುಕಿಸಿದ. ಹಿಂತಿರುಗಿ ಬಂದಾಗ ಭೀಮದುರ್ಯೋಧನರ ಯುದ್ಧ ನಡೆದಿತ್ತು. ದುರ್ಯೋಧನನ ಮೇಲಿನ ಅಭಿಮಾನದಿಂದ ಭೀಮನನ್ನೇ ಕೊಲ್ಲಲು ಹೋಗಿ ಕೃಷ್ಣನಿಂದ ಸಂತೈಸಿಸಲ್ಪಟ್ಟ. ಪ್ರಭಾಸ ಕ್ಷೇತ್ರದಲ್ಲಿ ಯಾದವರು ಹೊಡೆದಾಡಿ ಮಡಿದದ್ದನ್ನು ಕಂಡು ತಾನೂ ಯೋಗದಿ ಶೇಷರೂಪಿಯಾಗಿ ಸಮುದ್ರ ಪ್ರವೇಶಿಸಿ ಮೂಲರೂಪ ಸೇರಿದ. |
| – | ಲೋಕಕಂಟಕ ಅಲಾಯುಧನ ಅಣ್ಣ. ಇವನು ರಾವಣನ ಸೋದರಮಾವ. ತ್ರೇತಾಯುಗದವ . ಅಂದಿನಿಂದ ಎಲ್ಲರನ್ನೂ ಹೆದರಿಸುತ್ತಾ ಬದುಕಿದ್ದ. ಏಕಚಕ್ರನಗರದಲ್ಲಿ ವಾಸವಾಗಿದ್ದ. ಊರಿನವರನ್ನು ಹೆದರಿಸಿ ಒಪ್ಪಂದದಂತೆ ಪ್ರತಿಹದಿಮೂರು ವರುಷಕ್ಕೆ ಒಂದು ಬಂಡಿ ಅನ್ನ ಕೋಣಗಳು ಬಂದವರನ್ನು ಭಕ್ಷಿಸಿ ಹಿಂಸಿಸುತ್ತಿದ್ದ. ಕುಂತಿ ಭೀಮನನ್ನು ಕಳುಹಿಸಲಾಗಿ ಭೀಮನೇ ಎಲ್ಲವನ್ನೂ ತಿಂದ. ನಂತರ ಇವನಿಂದಲೇ ಈ ರಕ್ಕಸ ಸತ್ತ. ಊರಿನ ಭಯ ಪರಿಹಾರವಾಯಿತು. |
| – | ಕಂಸನ ಪರಿವಾರದವನು. ಬಕಪಕ್ಷಿಯ ರೂಪದ ಅಸುರ. ಒಮ್ಮೆ ಗೋಕುಲದಲ್ಲಿ ಕೃಷ್ಣ ಬಲರಾಮರು ಗೋಪಾಲರೊಂದಿಗೆ ಕರುಗಳನ್ನು ಮೇಯಿಸುತ್ತಿರುವಾಗ ಬಂದು ಕೃಷ್ಣನನ್ನು ನುಂಗಿ ಉಗುಳಿದ. ನಂತರ ಕೃಷ್ಣ ಅವನು ಕಚ್ಚಲು ಬಂದಾಗ ಕೊಕ್ಕುಗಳನ್ನು ಸೀಳಿಹಾಕಿ ಕೊಂದ. |
| –<br>– | ಅರ್ಜುನ ತೀರ್ಥಯಾತ್ರೆಗೆಂದು ಹೊರಟಾಗ ಚಿತ್ರಾಂಗದೆಯನ್ನು ಮದುವೆಯಾದ. ಚಿತ್ರಾಂಗದೆಯಲ್ಲಿ ಪುತ್ರಿಕಾಪತ್ರ ನಿಯಮದಂತೆ ಜನಿಸಿದ ಇವನನ್ನು ಅಲ್ಲಿಯೇ ಬಿಟ್ಟು ಬಂದ. ಇವನ ತಾತ ಚಿತ್ರವಾಹನನ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಬರ್ಬರೀಕ | ರಾಕ್ಷಸ | -- | ದ್ವಾ. | ಮ.ಭಾ. | ಘಟೋತ್ಕಚ, ಕಾಮಕಟಂಕಟೆ | - |
| ಬಲಿ | ಅಸುರ ಚಕ್ರವರ್ತಿ | ಬಲಿ | ತ್ರೇ. | ಭಾಗವತ | ವಿರೋಚನ | ವಿಂಧ್ಯಾವಳಿ, ಕೊಟರೆ |
| ಬಾಣ | ಅಸುರ | -- | ದ್ವಾ. | ಮ.ಭಾ. | ಬಲಿ, ವಿಂಧ್ಯಾವಳಿ | ಲೋಹಿತಿ |
| ಬಾಹ್ಲಿಕ | ಪ್ರಹ್ಲಾದ | ವಾಯು | - | - | ಪ್ರತೀಪ, ಸುನಂದ | - |
| ಬಾಹು | ಅರಸು | -- | ತ್ರೇ. | ರಾ. | ವೃಕ | ಯಾದವಿ |
| ಬಿಂದುಮತಿ | ಮಹಾರಾಣಿ | | ತ್ರೇ. | ರಾ. | ಶಶಿಬಿಂದು | ಮಾಂಧಾತ |
| ಬುಧ | ಗ್ರಹ | -- | - | ಭಾಗವತ | ಚಂದ್ರ, ತಾರ | ಇಲಾ |
| ಬುದ್ಧ | ಮಹಾವಿಷ್ಣು | -- | ಕಲಿ (ಸಂಧಿಕಾಲ) | ಭಾಗವತ | (ಶುದ್ಧೋದನ ಮಾಯಾದೇವಿ) | - |
| ಬೃಹದ್ರಥ | ಅರಸು | ವಸು | ದ್ವಾ. | ಮ.ಭಾ. | ಉಪರಿಚರ, | ಕಾಶೀರಾಜನ ಇಬ್ಬರು ಪುತ್ರಿಯರು |
| ಬೃಹದ್ಬಲ | ಅರಸು | -- | ದ್ವಾ. | ಮ.ಭಾ. | - | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಮಗನೆನಿಸಿದ. ಮಣಲೂರಿನ ಮಹರಾಜನಾದ. ಅಶ್ವಮೇಧಯಾಗದ ಕುದುರೆಯನ್ನು ಕಟ್ಟಿ ಅರ್ಜುನನೊಂದಿಗೆ ಯುದ್ಧ ಮಾಡಿದ. ಅರ್ಜುನ ಸತ್ತು ಮಣಿಯಿಂದ ಬದುಕಿದ. ಸುಖಾಂತ್ಯವಾಯಿತು. ನಂತರ ಅಶ್ವಮೇಧ ಯಾಗಕ್ಕೆ ಬಂದ. |
| - | ಪರಾಕ್ರಮಿ, ಮಂತ್ರಸಿದ್ಧಿಪಡೆದಿದ್ದ. ಚಂಡೀಭಕ್ತ, ಒಂದು ಪ್ರಸಂಗದಲ್ಲಿ ಕೃಷ್ಣ ಚಕ್ರದಿಂದ ಇವನ ತಲೆ ತರೆದ. ಆದರೂ ಬೆಟ್ಟದ ಮೇಲೆ ರುಂಡದಲ್ಲೇ ಕೂತು ಭಾರತಯುದ್ಧ ವೀಕ್ಷಿಸಿದ. |
| ಬಾಣಾಸುರ, ಧೃತರಾಷ್ಟ್ರ | ಪ್ರಹ್ಲಾದನ ಮೊಮ್ಮಗ. ದಾನವರ ರಾಜನೂ ಆಗಿದ್ದ. ಇಂದ್ರನ ಶತ್ರು. ಭೃಗುಕಚ್ಛ ಎಂಬಲ್ಲಿ ಶುಕ್ರಾಚಾರ್ಯರ ನೇತೃತ್ವದಲ್ಲಿ ವಿಶ್ವಜಿತ್ ಎಂಬ ಯಾಗ ಮಾಡಿದ. ಇಂದ್ರನನ್ನು ಗೆದ್ದು ಸ್ವರ್ಗವನ್ನು ವಶಪಡಿಸಿಕೊಂಡ. ನರ್ಮದಾ ತೀರದಲ್ಲಿ ಬೃಹತ್ ಯಾಗ ಮಾಡಿದಾಗ ದೇವತೆಗಳ ಪ್ರಾರ್ಥನೆಗೆ ಭಗವಂತ ವಾಮನನಾಗಿ ಕಶ್ಯಪ ಅದಿತಿಯರಲ್ಲಿ ಅವತರಿಸಿ ಬಂದ. ಬಲಿಯಲ್ಲಿ ಮೂರು ಪಾದ ಭೂಮಿಯಾಚಿಸಿ, ಎರಡು ಪಾದಗಳಿಂದ ಭೂಮ್ಯಂತರಿಕ್ಷವನ್ನು ಅಳೆದ. ಮೂರನೇ ಪಾದದಿಂದ ಬಲಿಯನ್ನು ರಸಾತಲಕ್ಕೆ ಮೆಟ್ಟಿದ. ಅಲ್ಲಿ ಭಗವಂತ ಒಂದು ರೂಪದಿಂದ ದ್ವಾರಪಾಲಕನಾಗಿ ನಿಂತ. ಮುಂದಿನ ಮನ್ವಂತರದಲ್ಲಿ ಇವನೇ ಇಂದ್ರನಾಗುವಂತೆ ಅನುಗ್ರಹಿಸಿದ. ಇವನೂ ಒಬ್ಬ ಚಿರಂಜೀವಿ. |
| ಉಷಾ, ಇಂದ್ರದಮನ | ಶಿವಭಕ್ತ, ಬಲಿಯ ಜೇಷ್ಟ ಪುತ್ರ. ಕೃಷ್ಣನ ಮೊಮ್ಮಗ ಅನಿರುದ್ಧ ಕದ್ದು ಉಷೆಯನ್ನು ಮದುವೆಯಾದ. ಇವನಿಗೆ ಸಾವಿರ ಕೈಗಳಿದ್ದವು. ಮಾಯಾವಿಯಾಗಿದ್ದ ಕೃಷ್ಣ ಚಕ್ರದಿಂದ ಕತ್ತರಿಸಿದ. |
| ಸೋಮದತ್ತ | ಚಂದ್ರವಂಶಜನಾದರೂ ಚಂದ್ರವಂಶದ ರಾಜನಾಗಲಿಲ್ಲ. ಪುತ್ರಿಕಾ ಪುತ್ರನೆನಿಸಿ ಬಾಹ್ಲೀಕದ ರಾಜನಾದ. ಭೀಷ್ಮರ ದೊಡ್ಡಪ್ಪ, ಪರಾಕ್ರಮಿ, ಅತಿರಥಿ, ದುರ್ಯೋಧನನ ಪರವಾಗಿ ಯುದ್ಧ ಮಾಡಿ ಭೀಮನಿಂದ ಹತನಾದ. |
| ಸಗರ | ಸೂರ್ಯವಂಶಜ, ವೈವಸ್ವತ ಮನುವಿನ ಮಗ ಇವನ ರಾಜ್ಯ ಸುಭಿಕ್ಷತವಾಗಿತ್ತು. ಮಗನಿಗೆ ರಾಜ್ಯ ಒಪ್ಪಿಸಿ ಪರಲೋಕ ಸೇರಿದ. |
| ಪುರುಕುತ್ಸ, ಅಂಬರೀಷ ಮುಚಕುಂದ | ಸೂರ್ಯವಂಶಕ್ಕೆ ಸೇರಿದಳು. ಗೃಹಸ್ಥಾಶ್ರಮಿ ಆಗಬಯಸಿದ ಸೌಭರಿ ಋಷಿಗೆ ಇವಳ 50 ಹೆಣ್ಣುಮಕ್ಕಳನ್ನು ಕೊಟ್ಟುಮದುವೆ ಮಾಡಿದರು. |
| ಪುರೂರವಸ್ | ಚಂದ್ರ ವಂಶಜ, ನವಗ್ರಹಗಳಲ್ಲಿ ಒಬ್ಬ ಚಂದ್ರನ ಮಗ ಇಲಾ ವನದಲ್ಲಿ ಸ್ತ್ರೀಯಾಗಿದ್ದಾಗ ಬುಧನಿಂದ ಮಗನನ್ನು ಪಡೆದ. ಪುರೂರವಸ್ ಚಂದ್ರವಂಶವನ್ನು ಮುಂದುವರೆಸಿದ. |
| - | ಭಗವಂತನ ದಶಾವತಾರದಲ್ಲಿ ಒಂಬತ್ತನೇಯದು. ಸಂಧಿಕಾಲದಲ್ಲಾದ, ಕೆಲವೇ ನಿಮಿಷಗಳಿದ್ದ ಅವತಾರ. ನಾಸ್ತಿಕ್ಯ - ಶೂನ್ಯ ಮತವನ್ನು ಅಸುರರಿಗೆ ಪ್ರಚಾರ ಮಾಡಿದ. ದುಷ್ಟರನ್ನು ಮೋಹಗೊಳಿಸಿದ. ದಿಗಂಬರನಾಗಿ ಇದ್ದು ನಾಸ್ತಿಕ್ಯ ಮತವನ್ನು ಪ್ರವರ್ತಿಸಿದ. (ಗೌತಮ ಬುದ್ಧ ವಿಷ್ಣು ಅವತಾರಿಯಲ್ಲ) |
| ಜರಾಸಂಧ | ಮಘದ ದೇಶದ ಅರಸು. ಚಂದ್ರವಂಶಜ. ಬಲಶಾಲಿರಾಜ. ಒಂದು ಮಂತ್ರಿತ ಹಣ್ಣನ್ನು ಎರಡು ಭಾಗ ಮಾಡಿ ಹೆಂಡಂದಿರಿಗೆ ಕೊಟ್ಟ, ಇವನ ಇಬ್ಬರು ಪತ್ನಿಯರು ಜರಾಸಂಧನ ಒಂದೊಂದು ಹೋಳನ್ನು (ದೇಹ) ಹೆತ್ತರು. ಚಂಡಕೌಶಿಕ ಋಷಿಯ ಅನುಗ್ರಹದಿಂದ ಪಡೆದಿದ್ದ. ಜರಾ ಎಂಬ ರಾಕ್ಷಸಿ ಎರಡು ಹೋಳನ್ನು ಸೇರಿಸಿ ಆ ಮಗುವನ್ನು ಇವನಿಗೆ ಕೊಟ್ಟಳು. ಇವನೇ ಜರಾಸಂಧ. |
| ಬೃಹದ್ರಣ | ಸೂರ್ಯವಂಶಜ, ಪರಾಕ್ರಮಿ. ಯುದ್ಧದಲ್ಲಿ ಅಭಿಮನ್ಯುವಿನಿಂದ ಸತ್ತ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಬೃಹಸ್ಪತಿ | ಮಹರ್ಷಿ | -- | ತ್ರೇ. | ಭಾಗವತ | ಅಂಗಿರಸ | ತಾರಾದೇವಿ (ಚಾಂದ್ರಮಶಿ) |
| ಬೃಹನ್ನಳಾ | ಇಂದ್ರ (ಅರ್ಜುನ) | -- | ದ್ವಾ. | ಮ.ಭಾ. | ಪಾಂಡು, ಕುಂತಿ | - |
| ಬ್ರಹ್ಮ | ಚತುರ್ಮುಖ ಬ್ರಹ್ಮ | ಬ್ರಹ್ಮ(ವಿಷ್ಣು) | ಬ್ರಹ್ಮಕಲ್ಪ | - | ಪದ್ಮನಾಭ (ಮಹಾವಿಷ್ಣು) | ಸರಸ್ವತಿ |
| ಬ್ರಹ್ಮದತ್ತ (ಸಾಲ್ವ) | ಅರಸು | | ದ್ವಾ | ಮ.ಭಾ. | ಶಿವಪಾಲ | 2 ಮಡದಿಯರು |
| ಭಗದತ್ತ | ಕುಬೇರ | ಭಾಷ್ಕಲ(ಅಸುರ) ರುದ್ರ | ದ್ವಾ. | ಮ.ಭಾ. | ನರಕಾಸುರ, | - |
| ಭಗೀರಥ | ಚಕ್ರವರ್ತಿ | -- | ತ್ರೇ. | ಭಾಗವತ | ದಿಲೀಪ, ಸುದಕ್ಷಿಣೆ | - |
| ಭದ್ರಾವತಿ | ಮಹಾರಾಣಿ | -- | ದ್ವಾ. | ಮ.ಭಾ. | - | ಪರೀಕ್ಷಿತ |
| ಭದ್ರಾ | ರಾಜಕುವರಿ | -- | ದ್ವಾ. | ಮ.ಭಾ. | ಪುರುರಾಜ | ವಸುದೇವ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಭಾರದ್ವಾಜ, ಆರು ಅಗ್ನಿಗಳು, ಸ್ವಾಹಾ ಕಚ, ಬೃಹಚ್ಚಂದ್ರ | ದೇವತೆಗಳ ಗುರು, ತನ್ನ ಅಣ್ಣ ಉಚಥ್ಯನ ಪತ್ನಿ ಮಮತಾನಲ್ಲಿ ಭಾರದ್ವಾಜನನ್ನು ಪಡೆದ. ಗುರುವಾದ ಶುಕ್ರಾಚಾರ್ಯ ತಪಸ್ಸಿಗೆ ಹೋದಾಗ ಇವನ ವೇಷಧರಿಸಿ ಅಸುರರಿಗೆ ನಾಸ್ತಿಕವಾದವನ್ನು ಉಪದೇಶ ಮಾಡಿದ. ಒಮ್ಮೆ ನಹುಷ ಇಂದ್ರನ ಸ್ಥಾನದಲ್ಲಿದ್ದಾಗ ಶಚೀದೇವಿಯನ್ನು ಪಡೆಯಲಿಚ್ಚಿಸಿದಾಗ ಈತ ಉಪಾಯ ದಿಂದ ಶಚಿಯ ಪಾವಿತ್ರ್ಯವನ್ನು ಕಾಪಾಡಿದ. ದೈತ್ಯರಿಗೆ ವಿರೋಧಿಯಾಗಿದ್ದು ದೇವತೆಗಳ ಗೆಲುವಿಗಾಗಿ ಯಾಗಗಳನ್ನು ಮಾಡಿದ. ಈತನೇ ದ್ರೋಣರಾಗಿ ಅವತರಿಸಿ ಅಂದಿನ ರಾಜಕುವರರಿಗೆ ಕುರುಪಾಂಡವರಿಗೆ ವಿದ್ಯಾಗುರುಗಳಾದರು. ಯುಧಿಷ್ಠಿರನಿಗೆ ಧರ್ಮೋಪದೇಶ ಮಾಡಿದ. |
| – | ಅಜ್ಞಾತವಾಸದಲ್ಲಿ ವಿರಾಟನಗರದಲ್ಲಿದ್ದಾಗ ಅರ್ಜುನ ಧರಿಸಿದ್ದ ನಪುಂಸಕ ವೇಷ. ಒಮ್ಮೆ ಊರ್ವಶಿಯು ಕೊಟ್ಟ ಶಾಪವನ್ನು ಇಲ್ಲಿ ಉಪಯೋಗಿಸಿಕೊಂಡ. ಗಂಧರ್ವವಿದ್ಯೆಯಾದ ನರ್ತನವನ್ನು ಉತ್ತರೆಗೆ ಕಲಿಸಿದ. ದುರ್ಯೋಧನನ ಉತ್ತರಗೋಗ್ರಹಣ ಕಾಲದಲ್ಲಿ ಉತ್ತರನಿಗೆ ಸಾರಥಿಯಾದ. ಉತ್ತರನಿಂದಾಗದಿರಲು ಇವನೇ ಯುದ್ಧಮಾಡಿ ಗೆದ್ದ. ಆಗಿದ್ದ ಇವನ ಹೆಸರು ಬೃಹನ್ನಳೆ. |
| ಸಕಲಜಗತ್ತು | ವಿಷ್ಣುವಿನ ನಾಭಿ ಕಮಲದಿಂದ ಜನಿಸಿದ. ಜೋವೋತ್ತಮನಾದವನು. ಹಿಂದಿನ ಕಲ್ಪದಲ್ಲಿ ವಾಯುದೇವ ನಾಗಿದ್ದವನೆ ಈಗ ಈ ಪದವಿಗೆ ಬಂದಿರುವ. ಇವನನ್ನೆ ಸೃಷ್ಟಿಕರ್ತನೆಂದು ಶ್ರೀಮನ್ನಾರಾಯಣ ನಿಯಮನ ಮಾಡಿದ. ರುದ್ರದೇವರಾದಿ ಪೂರ್ಣ ಜಗತ್ತು ಇವರಿಂದಾದದ್ದು. ಪಿತಾಮಹರು. ದೇವಮಾನದ 100 ವರ್ಷ ಆಯುಷ್ಯ. ಇವನ ಒಂದು ದಿನದಲ್ಲಿ 14 ಮನ್ವಂತರಗಳು ಉರುಳುವುದು. ಭಗವಂತನ ಪ್ರತಿಬಿಂಬ. ಇವನಿಗೆ ಅವತಾರಗಳಿಲ್ಲ, ಮೂರ್ತಿ ಪೂಜೆಯಿಲ್ಲ, ತ್ರಿಮೂರ್ತಿಗಳಲ್ಲೊಬ್ಬನು. ಸತ್ಯ ಲೋಕಾಧಿಪತಿ. ವಿಷ್ಣುವನ್ನು ಕಾಣಲು ದೇವತೆಗಳೆಲ್ಲಾ ಬ್ರಹ್ಮನನ್ನು ಮುಖಮಾಡಿಕೊಳ್ಳುವರು. ಪರಶುಕ್ಲತ್ರಯರಲ್ಲಿ ಒಬ್ಬರು. ತಾರತಮ್ಯ ದಲ್ಲಿ ಶ್ರೀಹರಿ ಲಕ್ಷ್ಮಿಯರ ನಂತರದ ಸ್ಥಾನ. ಪ್ರಾರಂಭದಲ್ಲಿ 6 ಮಾನಸ ಪುತ್ರರನ್ನು ಸೃಷ್ಟಿಸಿದ. ಇವನಿಗಿದ್ದ ಪಂಚಮುಖಗಳಲ್ಲಿ ಒಂದನ್ನು ಶಿವ ಕತ್ತರಿಸಿದ. ಬ್ರಹ್ಮಕಲ್ಪದ ಕಡೆಯಲ್ಲಿ ಜೀವರು ಇವರ ಮೂಲಕ ಇವರೊಂದಿಗೆ ಮುಕ್ತಿ ಹೊಂದುವರು. |
| ಸೌಭಾದಿಪತಿ, ಹಂಸಡಿಂಬಿಕರು | ಸಾಲ್ವದೇಶದ ಅರಸು. ಶಿಶುಪಾಲನ ಮಿತ್ರ. ಅಂಬೆ ಇವನನ್ನು ವರಿಸಿದ್ದಳು. ಭೀಷ್ಮ ಅಪಹರಿಸಿ ಕೊಂಡೊಯ್ದು ಕಾರಣ ಇವನು ತಿರಸ್ಕರಿಸಿದ. ಕೃಷ್ಣದ್ವೇಷಿಯಾದ ಇವನು ದ್ವಾರಕೆ ಮೇಲೆ ಯುದ್ಧಕ್ಕೆ ಹೋದಾಗ ಸಾತ್ಯಕಿಯಿಂದ ಸತ್ತ. |
| ಕೃತಪ್ರಜ್ಞ, ವಜ್ರದತ್ತ | ನರಕಾಸುರನ ನಂತರ ಪ್ರಾಗ್ಜ್ಯೋತಿಷ ಪುರಕ್ಕೆ ಕೃಷ್ಣ ರಾಜನನ್ನಾಗಿಸಿದ. ಇವನಲ್ಲಿ ನಾರಾಯಣಾಸ್ತ್ರ ಸುಪ್ರತೀಕ ಗಜವಿತ್ತು. ರಾಜಸೂಯ ಯಾಗ ಸಮಯದಲ್ಲಿ ಅರ್ಜುನನೊಂದಿಗೆ ಎಂಟು ದಿನ ಯುದ್ಧಮಾಡಿ ಸೋತು ಕಪ್ಪಕೊಟ್ಟ. ಕರ್ಣನ ಜೊತೆಗೂ ಸೋತ. ಭಾರತಯುದ್ಧದಲ್ಲಿ ಇವನು ಬಿಟ್ಟ ನಾರಾಯಣಾಸ್ತ್ರವನ್ನು ಕೃಷ್ಣಹಾರವಾಗಿ ಧರಿಸಿದ. ಅರ್ಜುನ ಸುಪ್ರತೀಕ ಹಾಗೂ ಇವನನ್ನು ಕೊಂದ. ಇವನ ಮಗ ನಕುಲನಿಂದ ಸತ್ತ. |
| ಹಂಸಿ, ಶ್ರುತ | ಸೂರ್ಯವಂಶಜ. ಧರ್ಮಾತ್ಮ. ಕೌತ್ಸಮುನಿ ಇವನ ಅಳಿಯ. ಇವನ 60 ಸಾವಿರ ಹಿರಿಯರು ಕಪಿಲ ಮುನಿ ಯಿಂದ ಭಸ್ಮರಾದವರನ್ನು ಉದ್ಧರಿಸಲು ಗಂಗೆಯನ್ನು ದೇವಲೋಕದಿಂದ ಭೂಲೋಕಕ್ಕೆ ತರಲು ಬಹು ಸಾಹಸ ಮಾಡಿದ. ಹಿಮಾಲಯದಲ್ಲಿ ಶಿವನನ್ನು ಒಲಿಸಲು ಖಠಿಣತಪಸ್ಸು ಮಾಡಿದ. ಗಂಗೆಯ ವೇಗವನ್ನು ತಡೆದು ಶಿವ ಜಟೆಯಲ್ಲಿ ಶ್ರೀಹರಿ ಪಾದೋದಕವನ್ನು ಧರಿಸಿದ. ಅಲ್ಲಿಂದ ಬಂದ ಗಂಗೆಯನ್ನು ಜನ್ಹು ಋಷಿ ಪಾನ ಮಾಡಿ ಬಿಟ್ಟು ಪಾತಾಳದಲ್ಲಿಯ ಸಗರ ಮಕ್ಕಳ ಮೇಲೆ ಹರಿಯಲು ಸದ್ಗತಿ ಪಡೆದರು.ಇವನು ಕಡೆಗೆ ಒಂದು ಲಕ್ಷ ಗೋದಾನ ಮಾಡಿ ಸದ್ಗತಿ ಪಡೆದ. ಇವನ ಸಾಹಸವು ಭಗೀರಥಪ್ರಯತ್ನವೆಂದು ಪ್ರಸಿದ್ಧಿ. |
| ಜನಮೇಜಯ | ಅಭಿಮನ್ಯುವಿನ ಸೊಸೆ. ರಾಜ್ಯಭಾರದಲ್ಲಿ ಗಂಡನಿಗೆ ಸಹಕರಿಸಿದಳು. |
| – | ವಸುದೇವನ 14 ಪತ್ನಿಯರಲ್ಲಿ ಒಬ್ಬಳು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಭದ್ರಾ | ರಾಜಕುವರಿ | -- | ದ್ವಾ. | ಮ.ಭಾ. | ದೃಷ್ಟಕೇತು | ಶ್ರೀಕೃಷ್ಣ |
| ಭರತ | ಚಕ್ರವರ್ತಿ | -- | ತ್ರೇ. | ಭಾಗವತ | ಋಷಭದೇವ, ಜಯಂತಿ | ಪಂಚಜನಿ |
| ಭರತ | ಚಕ್ರವರ್ತಿ | -- | | ಭಾಗವತ | ದುಷ್ಯಂತ, ಶಕುಂತಳೆ | ತಾಸು, ಸುಂದೆ ಮುಖ್ಯೆ |
| ಭರತ | ಕಾಮ | ಪ್ರದ್ಯುಮ್ನ | ತ್ರೇ. | ರಾ. | ದಶರಥ, ಕೈಕೇಯಿ | ಮಾಂಡವಿ |
| ಭರದ್ವಾಜ | ಮಹರ್ಷಿ | -- | – | ಭಾಗವತ | ಬೃಹಸ್ಪತ್ಯಾಚಾರ್ಯ ಮಮತೆ (ಉಚಥ್ಯನ ಪತ್ನಿ) | ಘೃತಾಚಿ (ಅಪ್ಸರೆ) |
| ಭರದ್ವಾಜ | ಮಹರ್ಷಿ | -- | ತ್ರೇ | ರಾ. | ಭರತ, ಮರುತ್ತುಕನ್ಯೆ | – |
| ಭಾನುಸೇನ | ಯೋಧ | -- | ದ್ವಾ. | ಮ.ಭಾ. | ಕರ್ಣ, | – |
| ಭಾನುಮತಿ | ಯಾದವಳು | -- | ದ್ವಾ. | ಮ.ಭಾ. | ಕೃತವೀರ್ಯ | ಅಹಂಯಾತಿ |
| ಭಾನುಮತಿ | ಕ್ಷತ್ರಿಯೆ | -- | ದ್ವಾ. | ಮ.ಭಾ. | ಭಾನುಮಂತ | ದುರ್ಯೋಧನ |
| ಭಾನುಮಂತ | ಅರಸು | -- | ದ್ವಾ. | ಮ.ಭಾ. | – | – |
| ಭಾರತಿ | ಋಜು ಶ್ರೇಷ್ಠಳು | -- | – | ಭಾಗವತ | ಪ್ರದ್ಯುಮ್ನ, ಕೃತಿ | ವಾಯು |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| - | ಕೃಷ್ಣನ ಸೋದರತ್ತೆ ಮಗಳು. ಇವಳ ಸೋದರರು ಕೃಷ್ಣನಿಗೆ ಧಾರೆಯೆರೆದು ಕೊಟ್ಟರು. ಅಷ್ಟ ಮಹಿಷಿಯಲ್ಲಿ ಒಬ್ಬಳು. |
| 5 ಪುತ್ರರು | ಇವನ ಕಾಲದಲ್ಲಿ ಅಜನಾಭವರ್ಷ ಎಂದಿದ್ದದ್ದು ಭರತವರ್ಷವೆಂದು ಹೆಸರಾಯಿತು. ಮುಂದಿನ ಜನ್ಮದಲ್ಲಿ ಜಿಂಕೆ ಮರಿಯ ಸಹವಾಸದಿಂದಾಗಿ ಜಿಂಕೆಯಾಗಿ ಹುಟ್ಟಿ ನಂತರ ಬ್ರಾಹ್ಮಣನಾಗಿ ಹುಟ್ಟಿದ. ಜಡಭರತ ನೆಂದೆನಿಸಿದ. ಇವನನ್ನು ಕಾಳಿಗೆ ಬಲಿ ಕೊಡಲು ಕರೆದೊಯ್ದು ಅವರೇ ಸತ್ತರು. ರಹೂಗಣರಾಜನಿಗೆ ಪಲ್ಲಕ್ಕಿ ಹೊತ್ತು ನಂತರ ಅವನಿಗೆ ತತ್ತ್ವಗಳನ್ನು ಉಪದೇಶ ಮಾಡಿದ. ಮಹಾಜ್ಞಾನಿ. |
| ಭರದ್ವಾಜ<br>ವಿತಥ / ಭುಮನ್ಯು | ಚಂದ್ರವಂಶದ ಪೂರುವಂಶಹಜ ಮಹಾಶೂರ. ಈತನ ಕುಲಗುರು ದೀರ್ಘತಮ. ಕೆಲವು ಅಶ್ವಮೇಧ ಯಾಗಗಳನ್ನು ಮಾಡಿದ. ಈತನಿಂದಲೂ ಈ ದೇಶಕ್ಕೆ ಭಾರತ ಎಂದು ಹೆಸರು ಬಂತು. 37 ಸಾವಿರ ವರ್ಷ ರಾಜ್ಯವಾಳಿದ. ಭಾರದ್ವಾಜರು ಇವನ ಸಾಕು ಮಗ. ಇವರು ತಪಸ್ಸಿಗೆ ಹೋಗಲು ಭುಮನ್ಯು ರಾಜನಾದ. |
| ತಕ್ಷ, ಪುಷ್ಕಲ | ಸೂರ್ಯವಂಶಜ, ಶ್ರೀರಾಮಾನುಜ, ವಿಷ್ಣುವಿನ ಚಕ್ರಾಭಿಮಾನಿ ದೇವತೆ. ಶ್ರೀರಾಮನ ಪಟ್ಟಾಭಿಷೇಕಕ್ಕೆ ವಿಘ್ನ ಮಾಡಿ ಅಣ್ಣನನ್ನು ಕಾಡಿಗೆ ಅಟ್ಟಿದ್ದನ್ನು ತಿಳಿದು ಕೃದ್ಧನಾಗಿ ನಿಂದಿಸಿ ಶ್ರೀರಾಮನಿದ್ದ ಚಿತ್ರಕೂಟಕ್ಕೆ ಹೋಗಿ ಅವನು ಅಯೋಧ್ಯೆಗೆ ಬಾರದಿರಲು ಪಾದುಕೆಗಳನ್ನು ತಂದು ಅದರ ಪ್ರತಿನಿಧಿಯಾಗಿ ರಾಜ್ಯಭಾರ ಮಾಡಿದ. ಅಯೋಧ್ಯಾ ಪ್ರವೇಶಿಸದೆ ರಾಮನಂತಿದ್ದು 14 ವರ್ಷ ನಂದೀಗ್ರಾಮದಲ್ಲಿದ್ದ. ರಾಮ ಬಾರದಿದ್ದರೆ ಅಗ್ನಿಪ್ರವೇಶಮಾಡುವುದಾಗಿ ಪ್ರತಿಜ್ಞೆ ಮಾಡಿದ. ಅಚಲ ಭಕ್ತನಾದ ಇವನು ರಾಮನು ಲಂಕೆಯಿಂದ ಬಂದ ಕೂಡಲೆ ರಾಮ ಪಟ್ಟಾಭಿಷೇಕಕ್ಕೆ ಅಣಿಮಾಡಿದ. ಶ್ರೀರಾಮ ನೊಂದಿಗೆ ಭರತ ಮಹಾಪ್ರಸ್ಥಾನ ಮಾಡಿದ. |
| ಯವಕ್ರೀತ, ಅಗ್ನಿವೇಶ್ಯ<br>ದ್ರೋಣಾಚಾರ್ಯ<br>ದ್ರೋಣರೆಂದಾದರು. | ಈ ಮಮತೆಗೆ ಉಚಥ್ಯ ಋಷಿಗಳಿಂದ ಜನಿಸಿದವನು ದೀರ್ಘತಮ. ಇವರು ಗಂಗಾತೀರದಲ್ಲಿ ತಪಸ್ಸು ಮಾಡುವಾಗ ಘೃತಾಚಿ ಎಂಬ ಅಪ್ಸರೆ ಮನಸೋತು ಸ್ಖಲಿತ ರೇತಸ್ಸನ್ನು ಒಂದು ದ್ರೋಣ (ದೊನ್ನೆ) ಯಲ್ಲಿಡಲು ಅದೇ ಉಚಥ್ಯರ ಪತ್ನಿ ಮಮತೆ ಬೃಹಸ್ಪತ್ಯಾಚಾರ್ಯರಿಂದ ಗರ್ಭಧಾರಣ ಮಾಡಿ ಶಿಶುವನ್ನು ತ್ಯಾಗಮಾಡಲು ಮರುತ್ ದೇವತೆಗಳು ಪೋಷಣ ಮಾಡಿದ ಕಾರಣ ಈ ಹೆಸರು ಬಂತು. ಇವರು ದಿವೋದಾಸನಿಂದ ಪುತ್ರಕಾಮೇಷ್ಟಿಯಾಗ ಮಾಡಿಸಿದರು. ಗೋತ್ರ ಪ್ರವರ್ತಕರು. ದ್ರೋಣರಿಗೆ ವಿದ್ಯೆಯನ್ನು ಕಲಿಸಿದರು. ಇವರು ಸಪ್ತ ಋಷಿಗಳಲ್ಲೊಬ್ಬರು. ಮಹಾತ್ಯಾಗಿಗಳು, ಭರತ ಇವರನ್ನು ಸಾಕಿ ಬೆಳೆಸಿದ. ಇವರು ಸಂಹಿತಾ, ಸ್ಮೃತಿ ಗ್ರಂಥಗಳನ್ನು ರಚಿಸಿರುವರು. |
| - | ವಾಲ್ಮೀಕಿಯ ಶಿಷ್ಯ. ಪ್ರಯಾಗ ಕ್ಷೇತ್ರವಾಸಿ. ಶ್ರೀರಾಮ ದಂಡಕಾರಣ್ಯಕ್ಕೆ ಹೋಗುವಾಗ ಇವನ ಆಶ್ರಮಕ್ಕೆ ಹೋಗಿದ್ದ. ಭರತನೂ ಹೋಗಿದ್ದ. ಲಂಕೆಯಿಂದ ರಾಮಸೀತೆಯರು ಹಿಂತಿರುಗಿ ಬರುವಾಗ ಇವನಲ್ಲಿಗೆ ಹೋಗಿದ್ದರು. ಹನುಮಂತನ ಮೂಲಕ ಭರತನಿಗೆ ರಾಮನ ಆಗಮನ ತಿಳಿಸಿದ್ದು ಇಲ್ಲಿಂದಲೆ. |
| - | ಭಾರತಯುದ್ಧದಲ್ಲಿ 15 ನೇ ದಿನ ಭೀಮನಿಂದ ಹತನಾದ. |
| ಸಾರ್ವಭೌಮ | ಯದುವಂಶಜಳು. |
| ಲಕ್ಷ್ಮಣ ಆದಿಯಾಗಿ,<br>ಲಕ್ಷಣೆ | ಕಳಿಂಗದೇಶದ ರಾಜನ ಮಗಳು. ಇವಳ ಬಗ್ಗೆ ಹೆಚ್ಚಿನ ವಿವರಗಳಿಲ್ಲ. |
| ಭಾನುಮತಿ | ಇವನಿಗೆ ಚಿತ್ರಾಂಗದನೆಂದ ಹೆಸರಿದೆ. ಯುದ್ಧದಲ್ಲಿ ಮೊದಲ ದಿನ ಭೀಮನಿಂದ ಸತ್ತ. |
| ಬ್ರಹ್ಮಾಂಡ | ಅವ್ಯಕ್ತ ತತ್ತ್ವಾಭಿಮಾನಿ, ವೇದಾಭಿಮಾನಿ, ಸರಸ್ವತಿಪದ ಹೊಂದುವವಳು, ಪರಶುಕ್ಲರಲ್ಲಿ ಒಬ್ಬಳು. ಸಕಲ ವೇದ ತಿಳಿದವಳು. ದ್ವಾಪರದಲ್ಲಿ ದ್ರೌಪದಿಯಾಗಿ ಅವತರಿಸಿದಳು. ಸಕಲ ವಿದ್ಯಾಭಿಮಾನಿ, ತತ್ತ್ವಾಭಿಮಾನಿ ದೇವತೆಗಳಿಗೆ ಗುರುವೆನಿಸಿರುವಳು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಭೀಷ್ಮ | ದ್ಯುವಸು | ಬ್ರಹ್ಮ | ದ್ವಾ. | ಮ.ಭಾ. | ಶಂತನು, ಗಂಗಾ | - |

## ಮಹಾಭಾರತ ಯುದ್ಧದ ಸೈನ್ಯದ ವಿವರಣೆ

1 ಪತ್ತಿ = 1 ರಥ, 1 ಆನೆ, 3 ಕುದುರೆ, 55 ಕಾಲಾಳುಗಳು

3 ಪತ್ತಿ = 1 ಸೇನಾಮುಖ

3 ಸೇನಾಮುಖ = 1 ಗುಲ್ಮ

3 ಗುಲ್ಮ = 1 ಗಣ

3 ಗಣ = 1ವಾಹಿನಿ

3 ವಾಹಿನಿ = 1 ಪೃತನೆ

3 ಪೃತನೆ = 1 ಚಮು

3 ಚಮು = 1 ಅನೀಕಿನಿ

10 ಅನೀಕಿನಿ = 1 ಅಕ್ಷೌಹಿಣಿ

1 ಅಕ್ಷೌಹಿಣಿ = 21,870 ಆನೆ + ಅಷ್ಟೇ ರಥಗಳು + 3ರಷ್ಟು ಕುದುರೆಗಳು + 5ರಷ್ಟು ಕಾಲಾಳುಗಳು,

ಮಹಾಭಾರತ ಯುದ್ಧದಲ್ಲಿ - ಪಾಂಡವರ ಕಡೆ – 7 ಅಕ್ಷೋಹಿಣಿ
ಕೌರವರ ಕಡೆ – 11 ಅಕ್ಷೋಹಿಣಿ

**ಯುದ್ಧದಲ್ಲಿಯ ವೀರರು :** ರಥೋದಾರರು, ಅತಿರಥರು, ಮಹಾರಥರು, ರಥಿಕರು, ಸಮರಥರು, ಏಕರಥರು, ಅರ್ಧರಥರು ಮುಂತಾದವರು.

**ಅತಿರಥ:** 11 ಸಾವಿರ ವೀರರೊಡನೆ ತನ್ನ ರಥ, ಕುದುರೆ, ಸಾರಥಿಯರನ್ನು ರಕ್ಷಿಸಿಕೊಂಡು ಹೋರಾಡಬಲ್ಲ ವೀರ.

**ಮಹಾರಥ:** 10 ಸಾವಿರ ಧನುರ್ಧಾರಿಗಳನ್ನು ಎದುರಿಸಬಲ್ಲ ವೀರ.

| | | | | | | |
|---|---|---|---|---|---|---|
| ಭೀಮಸೇನ | ವಾಯುದೇವ | -- | ದ್ವಾ. | ಮ.ಭಾ. | ಪಾಂಡುರಾಜ, ಕುಂತಿ, | ದ್ರೌಪದಿ, ಹಿಡಿಂಬಾ, ಕಾಲೀ, ಜಲಂಧರಾ, ದೇವಿ ಹೀಗೆ 24 ಮಡದಿಯರು |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಒಬ್ಬ ವಸು. ಚಂದ್ರವಂಶಜ. ಆಜನ್ಮ ಬ್ರಹ್ಮಚಾರಿ. ಶಂತನುವಿನ ಹಿರಿಯ ಮಗ. ಈತನ ಮೊದಲ ಹೆಸರು ದೇವ ವ್ರತ. ಈತನ ಮೂಲರೂಪಕ್ಕೆ ಬ್ರಹ್ಮದೇವರ ಶಾಪ., ಮನುಷ್ಯನಾಗೆಂದು. ಗಂಗೆಗೂ ಶಾಪ ತಲುಪಿತು. ಶಂತನುವಿನಿಂದ ಗಂಗೆಯಲ್ಲಿ ಎಂಟನೆಯ ಮಗುವಾಗಿ ಜನಿಸಿದ. ಕೂಸನ್ನು ಗಂಗೆಯೇ ತನ್ನ ಲೋಕಕ್ಕೆ ಕರೆದೊಯ್ದಳು. ಬೃಹಸ್ಪತಿಗಳ ಬಳಿ ಐವತ್ತು ವರ್ಷ ವಿದ್ಯಾಭ್ಯಾಸವನ್ನು ಮಾಡಿಸಿದಳು. ನಂತರ ಪರಶು ರಾಮರಲ್ಲಿ ಐವತ್ತು ವರ್ಷ ಶಾಸ್ತ್ರ ಹಾಗೂ ಇಪ್ಪತ್ತೈದು ವರ್ಷ ಶಸ್ತ್ರಗಳ ವಿದ್ಯಾಭ್ಯಾಸ. ಗಂಗೆ ಶಂತನುವಿಗೆ ಮಗನನ್ನು ಒಪ್ಪಿಸಿದಳು. ಯೌವರಾಜ್ಯಾಭಿಷೇಕವಾಯಿತು. ಮತ್ತೆ ಪರಶುರಾಮರಲ್ಲಿ ಶಾಸ್ತ್ರ ಶಿಕ್ಷೆ, ವಿದ್ಯೆ ಕಲಿತ. ಶಂತನು ಸತ್ಯವತಿಗೆ ಮನಸೋತು ವಿವಾಹವಾಗಲು ಬಯಸಿದಾಗ ದಾಶರಾಜನ ನಿಯಮಗಳಿಗೆ ಒಪ್ಪಿ ಭೀಷ್ಮ ಪ್ರತಿಜ್ಞೆ ಮಾಡಿದ. ವಿವಾಹವಾಗದೆ ರಾಜನಾಗದಂತಹ ಘೋರ ಪ್ರತಿಜ್ಞೆ. ತಂದೆಯ ಮದುವೆ ಮಾಡಿಸಿದ ಪುಣ್ಯಾತ್ಮ. ತಂದೆಯಿಂದ ಸ್ವೇಚ್ಛಾಮರಣತ್ವ ವರ ಪಡೆದ. ತನ್ನ ತಮ್ಮಂದಿರಿಗಾಗಿ ಕಾಶೀರಾಜನ ಪುತ್ರಿಯರಾದ ಅಂಬಾ, ಅಂಬಾಲಿಕಾ, ಅಂಬಿಕೆಯರನ್ನು ಅಪಹರಿಸಿ ತಂದ. ಅಂಬಿಕೆ ಒಪ್ಪದೆ ಹಿಂತಿರುಗಿ ಇವನಿಗೆ ಮೃತ್ಯುವಾದಳು. ಇವಳಿಂದಾಗಿ ಪರಶುರಾಮರೊಂದಿಗೆ ಯುದ್ಧ. ಗುರುಗಳು ಸೋತಂತೆ ನಟಿಸಿದರು. ಪಾಂಡುರಾಜ ವನಕ್ಕೆ ತೆರಳಿದ ನಂತರ ಧೃತರಾಷ್ಟ್ರನನ್ನೇ ಸಿಂಹಾಸನದಲ್ಲಿ ಕುಳ್ಳಿರಿಸಿ ಈತನೇ ರಾಜ್ಯವನ್ನಾಳಿದ. ಮೊಮ್ಮಕ್ಕಳಾದ ದುರ್ಯೋಧನಾದಿಗಳಿಗೆ ಪಾಂಡವರಿಗೆ ವಿದ್ಯಾಭ್ಯಾಸಕ್ಕೆಂದು ಕೃಪಾಚಾರ್ಯರಲ್ಲಿ ನಂತರ ದ್ರೋಣಾಚಾರ್ಯರನ್ನು ನಿಯಮಿಸಿದ. ಪ್ರತಿಹಂತದಲ್ಲೂ ರಾಜ್ಯದ ಸುಖಕ್ಕೆ ಶ್ರಮಿಸಿದ. ಪಾಂಡವರ ರಾಜಸೂಯಯಾಗದಲ್ಲಿ ಕೃಷ್ಣನಿಗೇ ಅಗ್ರ ಪೂಜೆ ಎಂದು ಪ್ರತಿಪಾದಿಸಿದ. ದ್ರೌಪದಿಯ ವಸ್ತ್ರಾಪಹರಣ ಪ್ರಸಂಗದಲ್ಲಿ ಅಸಹಾಯಕನಾಗಿ ಮೌನತಾಳಿದ, ದುರ್ಯೋಧನನಿಗೆ ಮಾಡಿದ ಉಪದೇಶಗಳೆಲ್ಲವೂ ವ್ಯರ್ಥ ವಾಯಿತು, ಉತ್ತರಗೋಗ್ರಹಣ ಪ್ರಸಂಗದಲ್ಲಿ ದುರ್ಯೋಧನನ ಪರವಾಗಿ ಹೋಗಿ ಸೋತ. ಆದರೆ ಪಾಂಡವರ ಅಜ್ಞಾತವಾಸ ಸರಿ ಎಂದು ವಾದಿಸಿದ. ಕೃಷ್ಣನ ಸಂಧಾನ ವಿಫಲವಾದಾಗ ಭೀಷ್ಮ ಯುದ್ಧಕ್ಕೆ ಸನ್ನದ್ಧನಾದ. ಭೀಷ್ಮಕರ್ಣರ ವಾಗ್ಯುದ್ಧ. ಕೌರವರಪರವಾಗಿ ಸೈನ್ಯಾಧಿಪತಿಯಾಗಿ ಹತ್ತುದಿನಗಳು ಯುದ್ಧ ಮಾಡಿದ. ಆದರೂ ಭೀಷ್ಮ ಪಾಂಡವ ಪಕ್ಷಪಾತಿಯೇ ಆಗಿದ್ದ. ಯುದ್ಧದಲ್ಲಿ ಕೃಷ್ಣನಿಂದ ಚಕ್ರವನ್ನು ಹಿಡಿಸಿ ಕೃಷ್ಣನ ಪ್ರೀತಿಪಾತ್ರನೆಂದೆನಿಸಿದ. ಕೃಷ್ಣಪಾಂಡವರು ಭೀಷ್ಮನ ಸಾವಿನ ರಹಸ್ಯವನ್ನು ಅವನಿಂದಲೇ ಪಡೆದು ಶಿಖಂಡಿಯನ್ನು ಮುಂದು ಮಾಡಿದ ಅರ್ಜುನ ಇವನನ್ನು ಶರಪಂಜರದ ಮೇಲೆ ಉರುಳಿಸಿದ. ರಾತ್ರಿ ರಹಸ್ಯವಾಗಿ ಭೀಷ್ಮನಲ್ಲಿಗೆ ಹೋದ ಕರ್ಣ ಕ್ಷಮೆಯಾಚಿಸಿದ. ಪಾಂಡವರಿಗೆ ಧರ್ಮದ, ರತಾಜನೀತಿಯ ರಹಸ್ಯಗಳನ್ನು ಬೋಧಿಸುವಂತೆ ಕೃಷ್ಣ ಇವರಲ್ಲಿಗೆ ಕರೆದೊಯ್ದ. ಭೀಷ್ಮನಲ್ಲಿ ಕೃಷ್ಣ ಸನ್ನಿಹಿತನಾಗಿ ಎಲ್ಲವನ್ನೂ ಪಾಂಡವರಿಗೆ ಬೋಧಿಸಿದ. ವಿಷ್ಣುಸಹಸ್ರನಾಮ, ರಾಜನೀತಿ, ಆಪದ್ಧರ್ಮ, ಮೋಕ್ಷಧರ್ಮ ಮುಂತಾದ ಅನೇಕ. ಅನುಮತಿ ಪಡೆದು ತನ್ನಿಚ್ಛೆಯಂತೆ ಉತ್ತರಾಯಣದಲ್ಲಿ ಬ್ರಹ್ಮರಂಧ್ರದಿಂದ ಪ್ರಾಣತ್ಯಾಗ ಮಾಡಿದ. ಪಾಂಡವರು ಅಂತ್ಯಕ್ರಿಯೆಗಳನ್ನು ಮಾಡಿ ತರ್ಪಣಾದಿಗಳನ್ನು ಕೊಟ್ಟರು. 800 ವರುಷ ಕಾಲ ಜೀವಿಸಿ ಕೃಷ್ಣಭಕ್ತನಾಗಿ, ನೈಷ್ಠಿಕ ಬ್ರಹ್ಮಚಾರಿಯಾಗಿ, ಪಾಂಡವರ ಪ್ರೀತಿಪಾತ್ರ ಪಿತಾಮಹನಾಗಿ, ರಾಷ್ಟ್ರಪ್ರೇಮಿಯಾದ ಭೀಷ್ಮ ಮಹಾಭಾರತದಲ್ಲಿ ವಿಶಿಷ್ಟಸ್ಥಾನವನ್ನು ಪಡೆದ. ಸಜ್ಜನರು ಇಂದಿಗೂ ಭೀಷ್ಮತರ್ಪಣ ಕೊಡುವುದೇ ಸಾಕ್ಷಿ. ಆಧ್ಯಾತ್ಮದಲ್ಲಿ ಭೀಷ್ಮನು ವಾಕ್‌ನ ಸಂಕೇತ. |
| ಶ್ರುತಸೋಮ, ಘಟೋತ್ಕಚ, ಶರ್ವ-ತ್ರಾತ, ಸರ್ವೋತ್ತುಂಗ | ಭೀಮ ಜ್ಞಾನ ಬಲಗಳ ಸಂಕೇತ. ಭಕ್ತ್ಯಾದಿ ಹತ್ತು ಗುಣಗಳನ್ನು ಪ್ರತಿನಿಧಿಸುವ. ಜೀವೋತ್ತಮರಾದ ವಾಯು ದೇವರ ಅವತಾರಿ. ಪಾಂಡವ ಮಧ್ಯಮ. ವಾಯುದೇವರ ಅನುಗ್ರಹದಿಂದ ಕುಂತಿಯಲ್ಲಿ ಯುಧಿಷ್ಠಿರ ಜನಿಸಿದ ಒಂದು ವರುಷದ ನಂತರ ಜನಿಸಿದ. ಜಗತ್ತಿನ ಬಲವಂತರಲ್ಲಿ ಶ್ರೇಷ್ಠನೆಂದು ಆಕಾಶವಾಣಿಯಾಯಿತು. ದ್ವಾತ್ರಿಂಶಲ್ಲಕ್ಷಣಭರಿತವಾದ ದೇಹ ಇವನದಾಗಿತ್ತು. ಹುಟ್ಟಿದ ಹತ್ತು ದಿನದ ಶಿಶುವು ತಾಯಿಯ ಕೈಯಿಂದ ಜಾರಿ ಒಂದು ದೊಡ್ಡ ಬಂಡೆಯ ಮೇಲೆ ಬಿದ್ದಾಗ ಆ ಬಂಡೆ ಚೂರು ಚೂರಾಗಿ ಶತಶೃಂಗವೆನಿಸಿತು. ಅಂದೇ |

## ಭೀಮಾವತಾರ ಹಾಗೂ ವಿಶೇಷಗಳು

ಸನಾತನ ಧರ್ಮ ರಕ್ಷಣೆಗೆ ಬೇಕಾದದ್ದು- ಜ್ಞಾನಬಲ ಹಾಗೂ ಬಾಹುಬಲ

'ದೇವೇಷು ವಾಯುಃ ಪುರಷೋತ್ತಮಾದೃತೇ' ಭಗವಂತನ ನಂತರ ಈ ಎರಡು ಗುಣಗಳಿಂದ ಶ್ರೇಷ್ಠನಾದವನು ವಾಯುವೇ. 'ದೇವ ಶ್ರೇಷ್ಠಸ್ತು ಮಾರುತಃ'. ಅದಕ್ಕೆಂದೇ ಪಾಂಡು ವಾಯು ದೇವನನ್ನು ಕರೆಸಿದ. ಇವನೇ ಭೀಮನಾಗಿ ಅವತರಿಸಿ ಬಂದ ಜೀವೋತ್ತಮ.

**ಭೀಮ ಹತ್ತು ಗಣಗಳ ಸಂಕೇತ:**

ಭಕ್ತಿರ್ಜ್ಞಾನಂ ಸ ವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಃ ಸ್ಥಿತಿಃ।
ಯೋಗಃ ಪ್ರಾಣೋ ಬಲಂ ಚೈವ ವೃಕೋದರ ಇತಿ ಸ್ಮೃತಃ।
ಏತದ್ದಶಾತ್ಮಕೋ ವಾಯುಃ ತಸ್ಮಾತ್ ಭೀಮಸ್ತದಾತ್ಮಕಃ॥

ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞಾ, ಮೇಧಾ, ಧೃತಿ, ಸ್ಥಿತಿ, ಯೋಗ, ಪ್ರಾಣ, ಬಲ,

(ಈ ಹತ್ತನ್ನು ಪೂರ್ಣಮಟ್ಟದಲ್ಲಿ ಉಳ್ಳವನು ಭೀಮನೆಂದೆನಿಸಿರುವ)

ಭೂಭಾರ ಹರಣೇ ವಿಷ್ಣೋಃ ಪ್ರಧಾನಾಂಗಂ ಹಿ ಮಾರುತಿಃ।
ಭೀಮಸೇನ ಸಮೋ ನಾಸ್ತಿ ಸೇನಯೋರುಭಯೋರಪಿ।
ಪಾಂಡಿತ್ಯೇ ಚ ಪಟುತ್ವೇ ಚ ಶೂರತ್ವೇಽಪಿ ಬಲೇಪಿ ಚ॥

## ಭೀಮಸೇನ

ಸ ವಾಯುರೇವಾಭವದತ್ರ ಭೀಮನಾಮಾ
ಭೃತಾ ಮಾಃ ಸಕಲಾ ಹಿ ಯಸ್ಮಿನ್।
ಸ ವಿಷ್ಣುನೇಶೇನ ಯುತಃ ಸದೈವ ನಾಮ್ನಾ
ಸೇನೋ ಭೀಮಸೇನಸ್ತಾತೋಽಸೌ॥ – ಮ.ಭಾ.ತಾ (12-54)

(ಭೀಮಶ್ಚಾಸೌ ಸೇನಶ್ಚ= ಭೀಮಸೇನಃ)

ಭೀಮ = ಭೀ – ಭೃತ-ಮಾಃ = ಸಕಲ ವಿದ್ಯೆಗಳನ್ನ ಸಂಪೂರ್ಣವಾಗಿ ತಿಳಿದವನು,

ಸೇನ = ಇನೇನ ಸಹಿತಃ = ಸ್ವಾಮಿಯಾದ ವಿಷ್ಣುವಿನಿಂದ ಸದಾ ಸಹಿತನಾದವನು.

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಕುಂತಿ ಇವನ ಬಗ್ಗೆ ಚಿಂತೆ ತೊರೆದಳು. ಅಲ್ಲಿಯ ಋಷಿಯಿಂದ ನಾಮಕರಣ, ಕಾಶ್ಯಪರಿಂದ ಉಪನಯನ ಸಂಸ್ಕಾರ ವಾಯಿತು. ಹಸ್ತಿನಾಪುರಕ್ಕೆ ಬಂದ ನಂತರ ಭೀಷ್ಮರ ಆದೇಶದಂತೆ ಕೃಪಾಚಾರ್ಯರಲ್ಲಿ ಶಸ್ತ್ರ ಅಸ್ತ್ರಾಭ್ಯಾಸ ನಡೆಯಿತು. ನಂತರ ದ್ರೋಣಾಚಾರ್ಯರಲ್ಲಿ ಶಿಕ್ಷಣ. ಪ್ರಾರಂಭದಿಂದಲೂ ಇವನೊಂದಿಗೆ ದುರ್ಯೋಧನಾದಿಗಳ ದ್ವೇಷ. ಹೆಜ್ಜೆ ಹೆಜ್ಜೆಗೂ ಭೀಮನ ಕೈ ಮೇಲಾಗಿ ಆಟಪಾಟಗಳಲ್ಲಿ ಪರಾಜಯ ಅನುಭವಿಸುತ್ತಿದ್ದರು. ಒಮ್ಮೆ ಇವನಿಗೆ ದುರ್ಯೋಧನ ವಿಷ ಮಿಶ್ರಿತ ಕಾಲಕೂಟ ಆಹಾರ ತಿನ್ನಿಸಿದ. ಮೂರ್ಛಿತನಾದ ಇವನನ್ನು ಪ್ರಮಾಣ ಕೋಟಿ ಎಂಬ ದೊಡ್ಡ ಗಂಗಾ ಮಡುವಿನಲ್ಲಿ ಕಟ್ಟಿ ಎಸೆದರು. ನಾಗಲೋಕಕ್ಕೆ ಹೋಗಿ ಜಯಶಾಲಿಯಾಗಿ ಹಿಂತಿರುಗಿದ. ಒಮ್ಮೆ ವಿಷಸರ್ಪಗಳಿಂದ ಕಚ್ಚಿಸಿದರೂ ಏನೂ ಆಗಲಿಲ್ಲ. ಪರೀಕ್ಷೆಯ ರಂಗಭೂಮಿಯಲ್ಲಿ ದುರ್ಯೋಧನನೊಂದಿಗೆ ಆದ ಗದಾಯುದ್ಧವನ್ನು ಅಶ್ವತ್ಥಾಮನು ಬಂದು ನಿಲ್ಲಿಸಿದ. ಬಲರಾಮನಿಂದ ವಿಶೇಷ ಗದಾವಿದ್ಯೆಯನ್ನು ಕಲಿತ. ಕುಂತಿಯೊಂದಿಗೆ ಪಾಂಡವರು ಲಾಕ್ಷಾಗೃಹದಲ್ಲಿದ್ದಾಗ ಅಲ್ಲಿದ್ದವರನ್ನೂ ಸೇರಿಸಿ ಸುಟ್ಟು ಎಲ್ಲರನ್ನೂ ರಕ್ಷಿಸಿದ. ಹಿಡಿಂಬವನದಲ್ಲಿ ಹಿಡಿಂಬಾಸುರನನ್ನು ವಧಿಸಿ ವೇದವ್ಯಾಸರ ಆಜ್ಞೆಯಂತೆ ಹಿಡಿಂಬೆಯನ್ನು ಮದುವೆಯಾದ. ಅವಳಲ್ಲಿ ಘಟೋತ್ಕಚನ ಜನನವಾಯಿತು. ಬ್ರಾಹ್ಮಣರ ವೇಷದಿಂದ ಏಕಚಕ್ರ ನಗರದಲ್ಲಿ ವಾಸ. ಅವರಿದ್ದ ಮನೆಯವರ ದುಃಖ ನಿವಾರಣೆಗಾಗಿ ತಾಯಿಯ ಅಪ್ಪಣೆಯಂತೆ ಭೋಜನ ಸಾಮಗ್ರಿಯೊಂದಿಗೆ ಬಕಾಸುರನಲ್ಲಿಗೆ ಹೋಗಿ ಅವನನ್ನೇ ಸಾಯಿಸಿ ಊರಿಗೆ ಹಿತವನ್ನುಂಟು ಮಾಡಿದ. ಯಾರನ್ನು ಹಿಂಸಿಸದಿರುವಂತೆ ದಂಡಿಸಿ ಬಕನ ಪರಿವಾರಕ್ಕೆ ಜೀವದಾನ ಮಾಡಿದ. ಮಿಕ್ಕ ಪಾಂಡವರೊಂದಿಗೆ ದ್ರೌಪದೀ ಸ್ವಯಂವರಕ್ಕೆ ಹೋದ. ಅಲ್ಲಿಯ ಯುದ್ಧದಲ್ಲಿ ಶಲ್ಯಾದಿಗಳನ್ನು ಪರಾಭವಗೊಳಿಸಿದ. ವಿಧಿವತ್ತಾಗಿ ದ್ರೌಪದಿಯನ್ನು ವ್ಯಾಸರ ಆಶಯದಂತೆ ಮದುವೆಯಾದ. ನಿಜಾಂಶದಲ್ಲಿ ದ್ರೌಪದಿ ಭೀಮನ ಮಡದಿಯೆ. ಕೃಷ್ಣ ಬಲರಾಮರ ದರ್ಶನವಾಯಿತು. ಕಾಶಿರಾಜನ ಮಗಳಾದ ಕಾಳಿಯನ್ನು ಮದುವೆಯಾಗಿ ಶರ್ವತ್ರಾತನನ್ನು ಪಡೆದ. ದ್ರೌಪದಿಯಲ್ಲಿ ಶ್ರುತಸೋಮ ಜನಿಸಿದ. ಯುಧಿಷ್ಠಿರನ ರಾಜಸೂಯಯಾಗದ ಸಿಂಹಪಾಲು ಸಾಧನೆ ಭೀಮನದು. ಕೃಷ್ಣಾರ್ಜುನರೊಂದಿಗೆ ಮಾಗಧಕ್ಕೆ ಹೋಗಿ ಜರಾಸಂಧನನ್ನು ಬಾಹುಯುದ್ಧದಲ್ಲಿ ಸೀಳಿಹಾಕಿ ಸಂಹರಿಸಿ ಪುಣ್ಯವನ್ನು ಕೃಷ್ಣನಿಗೆ ಸಮರ್ಪಿಸಿದ. ನಂತರ ಪೂರ್ವದಿಕ್ಕಿಗೆ ಹೋಗಿ ಜಯಿಸಿ ಕಪ್ಪಕಾಣಿಕೆಯ ಸಂಪತ್ತಿನ ರಾಶಿಯನ್ನೇ ಹಾಕಿದ. ನಂತರದ ಜೂಜಾಟದಲ್ಲಿ ಸೋತ ಧರ್ಮರಾಜ ದ್ರೌಪದಿಯನ್ನೂ ಪಣಕ್ಕಿಟ್ಟು ವಸ್ತ್ರಾಪಹರಣವೂ ಆಯಿತು. ಕೃಷ್ಣನ ಇಚ್ಛೆಯಂತೆ ತಡೆದುಕೊಂಡಿದ್ದ. ದುಶ್ಯಾಸನನ ಎದೆ ಸೀಳುವುದಾಗಿ, ದುರ್ಯೋಧನನ ತೊಡೆಮುರಿಯು ವುದಾಗಿ ಭೀಕರ ಪ್ರತಿಜ್ಞೆ ಮಾಡಿದ. ಅಪಹಾಸ್ಯ ಮಾಡಿದ ಎಲ್ಲ ಧಾರ್ತರಾಷ್ಟ್ರರನ್ನೂ ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದ. ವನಪ್ರವೇಶ ಮಾಡಿದರು. ಅಲ್ಲಿದ್ದ ದುಷ್ಟರಾಕ್ಷಸರಾದ ಕಿರ್ಮಿರಾದಿಗಳನ್ನು ಕೊಂದ. ಯುಧಿಷ್ಠಿರನಿಗೆ ಉಪದೇಶ. ಮುಂದೆ ಯುದ್ಧ ಮಾಡಲು ಸಿದ್ಧಪಡಿಸಿದ. ದ್ರೌಪದಿಗಾಗಿ ಸೌಗಂಧಿಕಾವನಕ್ಕೆ ಹೋಗಿ ಅಲ್ಲಿ ಸಿಕ್ಕ ತನ್ನ ಮತ್ತೊಂದು ರೂಪ ಹನುಮಂತನನ್ನು ಸಂದಿಸಿದ. ಸಂವಾದದ ನಂತರ ಇವನನ್ನು ಅರ್ಜುನನ ರಥದ ಮೇಲೆ ಕೂಡಲು ಕೋರಿದ. ಸರೋವರದ ಬಳಿಯಲ್ಲಿದ್ದ ಕ್ರೋಧವಶರನ್ನು ಸಂಹರಿಸಿದ. ಮಣಿಮಂತನ ವಧೆ. ಜಟಾಸುರನನ್ನು ಕೊಂದ. ಅಜಗರ ರೂಪದ ನಹುಷನಿಂದ ಬಂಧಿತನಾಗಿ ಬಿಡುಗಡೆ ಹೊಂದಿದ. ಚಿತ್ರಸೇನನಿಂದ ಬಂಧಿತ ದುರ್ಯೋಧನಾದಿಗಳನ್ನು ಬಿಡಿಸಿದ. ಕೋಟಿಕಾಸ್ಯನನ್ನು ಕೊಂದು ಜಯದ್ರಥನನ್ನು ಅವಮಾನಿಸಿದ. ವಿರಾಟನಗರದಲ್ಲಿ ವಿರಾಟನಲ್ಲಿ ಬಲ್ಲವ(ವಲಲ)ನೆಂದು ಅಡುಗೆ ಮಾಡುವವನಾಗಿ ಸೇರಿದ. ಜೀಮೂತಮಲ್ಲನನ್ನು ಕೊಂದ. ಕಾಮುಕನಾದ ಕೀಚಕನನ್ನು ಸಾಯಿಸಿ ಅವನ ನೂರೈದು ಉಪಕೀಚಕರನ್ನು ಕೊಂದ. ಗೋಗ್ರಹಣಕ್ಕೆಂದು ಬಂದ ಸುಶರ್ಮ ವಿರಾಟನನ್ನು ಸೆರೆಹಿಡಿಯಲು ಭೀಮ ಅವನನ್ನು ಸೋಲಿಸಿ ಸೆರೆ ಬಿಡಿಸಿದ. ಕೃಷ್ಣ ಸಂಧಾನದ ನಂತರ ಕುರು-ಪಾಂಡವರ ಯುದ್ಧ. ಈ ಯುದ್ಧದಲ್ಲಿ ಸಿಂಹಪಾಲು ಹನನ ಇವನದ್ದೆ. ಇವನ ಅದ್ಭುತ ಪೌರುಷ ಪ್ರದರ್ಶನ-ಪ್ರತಿದಿನ ಧೃತರಾಷ್ಟ್ರನ 8-10 ಮಕ್ಕಳನ್ನು ಸಂಹರಿಸಿದ. ದ್ರೋಣರನ್ನು ಮೂರ್ಛೆಗೊಳಿಸಿದ. ಇನ್ನೊಂದು ಸಲ ರಥ ಸಹಿತರಾದ ದ್ರೋಣರನ್ನು ಎಂಟು ಸಲ ಆಕಾಶಕ್ಕೆಸೆದ. ಧನುರ್ಯುದ್ಧದಲ್ಲಿ ಕರ್ಣನನ್ನು ಸೋಲಿಸಿದ. ಸೋಮದತ್ತನನ್ನು ಮೂರ್ಛೆಗೊಳಿಸಿ, ಬಾಹ್ಲೀಕನನ್ನು ವಧಿಸಿದ. ಅಶ್ವತ್ಥಾಮ ಎಂಬ ಆನೆಯನ್ನು ಕೃಷ್ಣನ ಮಾತಿನಂತೆ ಕೊಂದ. ದುಃಶಾಸನನೊಂದಿಗೆ ಯುದ್ಧ ಮಾಡಿ ಎಲ್ಲರ ಸಮ್ಮುಖದಲ್ಲಿ ಅವನ ಎದೆ ಸೀಳಿ |

## ಭೀಮಾವತಾರ ಹಾಗೂ ವಿಶೇಷಗಳು

ಸನಾತನ ಧರ್ಮರಕ್ಷಣೆಗೆ ಬೇಕಾದದ್ದು- ಜ್ಞಾನಬಲ ಹಾಗೂ ಬಾಹುಬಲ

'ದೇವೇಷು ವಾಯುಃ ಪುರಷೋತ್ತಮಾದೃತೇ' ಭಗವಂತನ ನಂತರ ಈ ಎರಡು ಗುಣಗಳಿಂದ ಶ್ರೇಷ್ಠನಾದವನು ವಾಯುವೇ. 'ದೇವ ಶ್ರೇಷ್ಠಸ್ತು ಮಾರುತಃ'. ಆದಕ್ಕೆಂದೇ ಪಾಂಡು ವಾಯು ದೇವನನ್ನು ಕರೆಸಿದ. ಇವನೇ ಭೀಮನಾಗಿ ಅವತರಿಸಿ ಬಂದ ಜೀವೋತ್ತಮ.

**ಭೀಮ ಹತ್ತು ಗಣಗಳ ಸಂಕೇತ:**

ಭಕ್ತಿರ್ಜ್ಞಾನಂ ಸ ವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಃ ಸ್ಥಿತಿಃ ।
ಯೋಗಃ ಪ್ರಾಣೋ ಬಲಂ ಚೈವ ವೃಕೋದರ ಇತಿ ಸ್ಮೃತಃ ।
ಏತದ್ದಶಾತ್ಮಕೋ ವಾಯುಃ ತಸ್ಮಾತ್ ಭೀಮಸ್ತದಾತ್ಮಕಃ ॥

ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞಾ, ಮೇಧಾ, ಧೃತಿ, ಸ್ಥಿತಿ, ಯೋಗ, ಪ್ರಾಣ, ಬಲ,

(ಈ ಹತ್ತನ್ನು ಪೂರ್ಣಮಟ್ಟದಲ್ಲಿ ಉಳ್ಳವನು ಭೀಮನೆಂದೆನಿಸಿರುವ)

ಭೂಭಾರ ಹರಣೇ ವಿಷ್ಣೋಃ ಪ್ರಧಾನಾಂಗಂ ಹಿ ಮಾರುತಿಃ ।
ಭೀಮಸೇನ ಸಮೋ ನಾಸ್ತಿ ಸೇನಯೋರುಭಯೋರಪಿ ।
ಪಾಂಡಿತ್ಯೇ ಚ ಪಟುತ್ವೇ ಚ ಶೂರತ್ವೇऽಪಿ ಬಲೇಪಿ ಚ ॥

## ಭೀಮಸೇನ

ಸ ವಾಯುರೇವಾಭವದತ್ರ ಭೀಮನಾಮಾ
ಭೃತಾ ಮಾಃ ಸಕಲಾ ಹಿ ಯಸ್ಮಿನ್।
ಸ ವಿಷ್ಣುನೇಶೇನ ಯುತಃ ಸದೈವ ನಾಮ್ನಾ
ಸೇನೋ ಭೀಮಸೇನಸ್ತತೋऽಸೌ ॥ - ಮ.ಭಾ.ತಾ (12-54)

(ಭೀಮಶ್ಚಾಸೌ ಸೇನಶ್ಚ= ಭೀಮಸೇನಃ)

ಭೀಮ = ಭೀ - ಭೃತ-ಮಾಃ = ಸಕಲ ವಿದ್ಯೆಗಳನ್ನ ಸಂಪೂರ್ಣವಾಗಿ ತಿಳಿದವನು,

ಸೇನ = ಇನೇನ ಸಹಿತಃ = ಸ್ವಾಮಿಯಾದ ವಿಷ್ಣುವಿನಿಂದ ಸದಾ ಸಹಿತನಾದವನು.

ಕುಂತಿ ಇವನ ಬಗ್ಗೆ ಚಿಂತೆ ತೊರೆದಳು. ಅಲ್ಲಿಯ ಋಷಿಯಿಂದ ನಾಮಕರಣ, ಕಾಶ್ಯಪರಿಂದ ಉಪನಯನ ಸಂಸ್ಕಾರ ವಾಯಿತು. ಹಸ್ತಿನಾಪುರಕ್ಕೆ ಬಂದ ನಂತರ ಭೀಷ್ಮರ ಆದೇಶದಂತೆ ಕೃಪಾಚಾರ್ಯರಲ್ಲಿ ಶಸ್ತ್ರ ಅಸ್ತ್ರಾಭ್ಯಾಸ ನಡೆಯಿತು. ನಂತರ ದ್ರೋಣಾಚಾರ್ಯರಲ್ಲಿ ಶಿಕ್ಷಣ. ಪ್ರಾರಂಭದಿಂದಲೂ ಇವನೊಂದಿಗೆ ದುರ್ಯೋಧನಾದಿಗಳ ದ್ವೇಷ. ಹೆಜ್ಜೆ ಹೆಜ್ಜೆಗೂ ಭೀಮನ ಕೈ ಮೇಲಾಗಿ ಆಟಪಾಟಗಳಲ್ಲಿ ಪರಾಜಯ ಅನುಭವಿಸುತ್ತಿದ್ದರು. ಒಮ್ಮೆ ಇವನಿಗೆ ದುರ್ಯೋಧನ ವಿಷ ಮಿಶ್ರಿತ ಕಾಲಕೂಟ ಆಹಾರ ತಿನ್ನಿಸಿದ. ಮೂರ್ಛಿತನಾದ ಇವನನ್ನು ಪ್ರಮಾಣ ಕೋಟಿ ಎಂಬ ದೊಡ್ಡ ಗಂಗಾ ಮಡುವಿನಲ್ಲಿ ಕಟ್ಟಿ ಎಸೆದರು. ನಾಗಲೋಕಕ್ಕೆ ಹೋಗಿ ಜಯಶಾಲಿಯಾಗಿ ಹಿಂತಿರುಗಿದ. ಒಮ್ಮೆ ವಿಷಸರ್ಪಗಳಿಂದ ಕಚ್ಚಿಸಿದರೂ ಏನೂ ಆಗಲಿಲ್ಲ. ಪರೀಕ್ಷೆಯ ರಂಗಭೂಮಿಯಲ್ಲಿ ದುರ್ಯೋಧನನೊಂದಿಗೆ ಆದ ಗದಾಯುದ್ಧವನ್ನು ಅಶ್ವತ್ಥಾಮನು ಬಂದು ನಿಲ್ಲಿಸಿದ. ಬಲರಾಮನಿಂದ ವಿಶೇಷ ಗದಾವಿದ್ಯೆಯನ್ನು ಕಲಿತ. ಕುಂತಿಯೊಂದಿಗೆ ಪಾಂಡವರು ಲಾಕ್ಷಾಗೃಹದಲ್ಲಿದ್ದಾಗ ಅಲ್ಲಿದ್ದವರನ್ನೂ ಸೇರಿಸಿ ಸುಟ್ಟು ಎಲ್ಲರನ್ನೂ ರಕ್ಷಿಸಿದ. ಹಿಡಿಂಬವನದಲ್ಲಿ ಹಿಡಿಂಬಾಸುರನನ್ನು ವಧಿಸಿ ವೇದವ್ಯಾಸರ ಆಜ್ಞೆಯಂತೆ ಹಿಡಿಂಬೆಯನ್ನು ಮದುವೆಯಾದ. ಅವಳಲ್ಲಿ ಘಟೋತ್ಕಚನ ಜನನವಾಯಿತು. ಬ್ರಾಹ್ಮಣರ ವೇಷದಿಂದ ಏಕಚಕ್ರ ನಗರದಲ್ಲಿ ವಾಸ. ಅವರಿದ್ದ ಮನೆಯವರ ದುಃಖ ನಿವಾರಣೆಗಾಗಿ ತಾಯಿಯ ಅಪ್ಪಣೆಯಂತೆ ಭೋಜನ ಸಾಮಗ್ರಿಯೊಂದಿಗೆ ಬಕಾಸುರನಲ್ಲಿಗೆ ಹೋಗಿ ಅವನನ್ನೇ ಸಾಯಿಸಿ ಊರಿಗೆ ಹಿತವನ್ನುಂಟು ಮಾಡಿದ. ಯಾರನ್ನು ಹಿಂಸಿಸದಿರುವಂತೆ ದಂಡಿಸಿ ಬಕನ ಪರಿವಾರಕ್ಕೆ ಜೀವದಾನ ಮಾಡಿದ. ಮಿಕ್ಕ ಪಾಂಡವರೊಂದಿಗೆ ದ್ರೌಪದೀ ಸ್ವಯಂವರಕ್ಕೆ ಹೋದ. ಅಲ್ಲಿಯ ಯುದ್ಧದಲ್ಲಿ ಶಲ್ಯಾದಿಗಳನ್ನು ಪರಾಭವಗೊಳಿಸಿದ. ವಿಧಿವತ್ತಾಗಿ ದ್ರೌಪದಿಯನ್ನು ವ್ಯಾಸರ ಆಶಯದಂತೆ ಮದುವೆಯಾದ. ನಿಜಾಂಶದಲ್ಲಿ ದ್ರೌಪದಿ ಭೀಮನ ಮಡದಿಯೆ. ಕೃಷ್ಣ ಬಲರಾಮರ ದರ್ಶನವಾಯಿತು. ಕಾಶಿರಾಜನ ಮಗಳಾದ ಕಾಳಿಯನ್ನು ಮದುವೆಯಾಗಿ ಶರ್ವತ್ರಾತನನ್ನು ಪಡೆದ. ದ್ರೌಪದಿಯಲ್ಲಿ ಶ್ರುತಸೋಮ ಜನಿಸಿದ. ಯುಧಿಷ್ಠಿರನ ರಾಜಸೂಯಯಾಗದ ಸಿಂಹಪಾಲು ಸಾಧನೆ ಭೀಮನದು. ಕೃಷ್ಣಾರ್ಜುನರೊಂದಿಗೆ ಮಾಗಧಕ್ಕೆ ಹೋಗಿ ಜರಾಸಂಧನನ್ನು ಬಾಹುಯುದ್ಧದಲ್ಲಿ ಸೀಳಿಹಾಕಿ ಸಂಹರಿಸಿ ಪುಣ್ಯವನ್ನು ಕೃಷ್ಣನಿಗೆ ಸಮರ್ಪಿಸಿದ. ನಂತರ ಪೂರ್ವದಿಕ್ಕಿಗೆ ಹೋಗಿ ಜಯಿಸಿ ಕಪ್ಪಕಾಣಿಕೆಯ ಸಂಪತ್ತಿನ ರಾಶಿಯನ್ನೇ ಹಾಕಿದ. ನಂತರದ ಜೂಜಾಟದಲ್ಲಿ ಸೋತ ಧರ್ಮರಾಜ ದ್ರೌಪದಿಯನ್ನೂ ಪಣಕ್ಕಿಟ್ಟು ವಸ್ತ್ರಾಪಹರಣವೂ ಆಯಿತು. ಕೃಷ್ಣನ ಇಚ್ಛೆಯಂತೆ ತಡೆದುಕೊಂಡಿದ್ದ. ದುಶ್ಶಾಸನನ ಎದೆ ಸೀಳುವುದಾಗಿ, ದುರ್ಯೋಧನನ ತೊಡೆಮುರಿಯು ವುದಾಗಿ ಭೀಕರ ಪ್ರತಿಜ್ಞೆ ಮಾಡಿದ. ಅಪಹಾಸ್ಯ ಮಾಡಿದ ಎಲ್ಲ ಧಾರ್ತರಾಷ್ಟ್ರರನ್ನೂ ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದ. ವನಪ್ರವೇಶ ಮಾಡಿದರು. ಅಲ್ಲಿದ್ದ ದುಷ್ಟರಾಕ್ಷಸರಾದ ಕಿರ್ಮಿರಾದಿಗಳನ್ನು ಕೊಂದ. ಯುಧಿಷ್ಠಿರನಿಗೆ ಉಪದೇಶ. ಮುಂದೆ ಯುದ್ಧ ಮಾಡಲು ಸಿದ್ಧಪಡಿಸಿದ. ದ್ರೌಪದಿಗಾಗಿ ಸೌಗಂಧಿಕಾವನಕ್ಕೆ ಹೋಗಿ ಅಲ್ಲಿ ಸಿಕ್ಕ ತನ್ನ ಮತ್ತೊಂದು ರೂಪ ಹನುಮಂತನನ್ನು ಸಂದಿಸಿದ. ಸಂವಾದದ ನಂತರ ಇವನನ್ನು ಅರ್ಜುನನ ರಥದ ಮೇಲೆ ಕೂಡಲು ಕೋರಿದ. ಸರೋವರದ ಬಳಿಯಲ್ಲಿದ್ದ ಕ್ರೋಧವಶರನ್ನು ಸಂಹರಿಸಿದ. ಮಣಿಮಂತನ ವಧೆ. ಜಟಾಸುರನನ್ನು ಕೊಂದ. ಅಜಗರ ರೂಪದ ನಹುಷನಿಂದ ಬಂಧಿತನಾಗಿ ಬಿಡುಗಡೆ ಹೊಂದಿದ. ಚಿತ್ರಸೇನನಿಂದ ಬಂಧಿತ ದುರ್ಯೋಧನಾದಿಗಳನ್ನು ಬಿಡಿಸಿದ. ಕೋಟಿಕಾಸ್ಯನನ್ನು ಕೊಂದು ಜಯದ್ರಥನನ್ನು ಅವಮಾನಿಸಿದ. ವಿರಾಟನಗರದಲ್ಲಿ ವಿರಾಟನಲ್ಲಿ ಬಲ್ಲವ(ವಲಲ)ನೆಂದು ಅಡುಗೆ ಮಾಡುವವನಾಗಿ ಸೇರಿದ. ಜೀಮೂತಮಲ್ಲನನ್ನು ಕೊಂದ. ಕಾಮುಕನಾದ ಕೀಚಕನನ್ನು ಸಾಯಿಸಿ ಅವನ ನೂರೈದು ಉಪಕೀಚಕರನ್ನು ಕೊಂದ. ಗೋಗ್ರಹಣಕ್ಕೆಂದು ಬಂದ ಸುಶರ್ಮ ವಿರಾಟನನ್ನು ಸೆರೆಹಿಡಿಯಲು ಭೀಮ ಅವನನ್ನು ಸೋಲಿಸಿ ಸೆರೆ ಬಿಡಿಸಿದ. ಕೃಷ್ಣ ಸಂಧಾನದ ನಂತರ ಕುರು-ಪಾಂಡವರ ಯುದ್ಧ. ಈ ಯುದ್ಧದಲ್ಲಿ ಸಿಂಹಪಾಲು ಹನನ ಇವನದ್ದೆ. ಇವನ ಅದ್ಭುತ ಪೌರುಷ ಪ್ರದರ್ಶನ-ಪ್ರತಿದಿನ ಧೃತರಾಷ್ಟ್ರನ 8-10 ಮಕ್ಕಳನ್ನು ಸಂಹರಿಸಿದ. ದ್ರೋಣರನ್ನು ಮೂರ್ಛೆಗೊಳಿಸಿದ. ಇನ್ನೊಂದು ಸಲ ರಥ ಸಹಿತರಾದ ದ್ರೋಣರನ್ನು ಎಂಟು ಸಲ ಆಕಾಶಕ್ಕೆಸೆದ. ಧನುರ್ಯುದ್ಧದಲ್ಲಿ ಕರ್ಣನನ್ನು ಸೋಲಿಸಿದ. ಸೋಮದತ್ತನನ್ನು ಮೂರ್ಛೆಗೊಳಿಸಿ, ಬಾಹ್ಲೀಕನನ್ನು ವಧಿಸಿದ. ಅಶ್ವತ್ಥಾಮ ಎಂಬ ಆನೆಯನ್ನು ಕೃಷ್ಣನ ಮಾತಿನಂತೆ ಕೊಂದ. ದುಃಶಾಸನನೊಂದಿಗೆ ಯುದ್ಧ ಮಾಡಿ ಎಲ್ಲರ ಸಮ್ಮುಖದಲ್ಲಿ ಅವನ ಎದೆ ಸೀಳಿ

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಭೀಷ್ಮಕ | ಅರಸು | ಸೂರ್ಯ, ರಾಹು | ದ್ವಾ. | ಮ.ಭಾ. | ಭೋಜವಂಶಜ | - |
| ಭೂರಿ | ಅರಸು | ಅಜೈಕಪಾತ್ ರುದ್ರ | ದ್ವಾ. | ಮ.ಭಾ. | ಸೋಮದತ್ತ | - |
| ಭೂರಿಶ್ರವ | ಅರಸು | ಅಹಿರ್ಬುಧ್ನಿ, ರುದ್ರ | ದ್ವಾ. | ಮ.ಭಾ. | ಸೋಮದತ್ತ | - |
| ಭೃಗು | ಮಹರ್ಷಿ | -- | - | ಭಾಗವತ | ಚ. ಬ್ರಹ್ಮ | ಪುಲೋಮಾ (ಖ್ಯಾತಿ) |
| ಭುಮನ್ಯು | ಅರಸು | -- | ದ್ವಾ. | ಮ.ಭಾ. | ಭರತ ಸುನಂದಾ | ಸುವರ್ಣ |
| ಮಧ್ವಾಚಾರ್ಯ | ವಾಯು | -- | ಕಲಿಯುಗ | - | ಮಧ್ಯಗೇಹ ಭಟ್ಟರು | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ರಕ್ತವನ್ನು ಕುಡಿದಂತೆ ಮಾಡಿದ. ದುರಾತ್ಮ ಹೀನಾಯವಾಗಿ ಸತ್ತ. ದುರ್ಯೋಧನನನ್ನು ಬಿಟ್ಟು ಅವನ ಎಲ್ಲ 99 ಸೋದರರ ಸಾವಾಯಿತು. ಕೃಷ್ಣನೊಂದಿಗೆ ದುರ್ಯೋಧನ ಅಡಗಿದ್ದ ಮಡುವಿಗೆ ಹೋಗಿ ಯುದ್ಧಕ್ಕೆ ಆಹ್ವಾನಿಸಿದ. ಬೇರೆ ದಾರಿ ಇಲ್ಲದೆ ಎದ್ದು ಬಂದವನೊಂದಿಗೆ ಭೀಕರ ಯುದ್ಧ. ದುರ್ಯೋಧನನ ತೊಡೆ ಮುರಿದ. ಅವನ ತಲೆಯನ್ನು ತುಳಿಯುತ್ತ ಹಿಂದಿನ ದುಷ್ಟತನಗಳನ್ನು ಎತ್ತಿ ಆಡಿದ. ಪುತ್ರಶೋಕದ ದ್ರೌಪದಿ ಮುಂದೆ ಅಶ್ವತ್ಥಾಮರನ್ನು ಎಳೆ ತಂದು ಅವರ ತಲೆಯಲ್ಲಿದ್ದ ಮಣಿಯನ್ನು ಕಿತ್ತಿದ. ರಾಜ್ಯದ ಯುವರಾಜನಾಗಿ ದುರ್ಯೋಧನನ ಅರಮನೆಯಲ್ಲಿದ್ದ. ದ್ರೌಪದಿಯು ಇವನೊಂದಿಗೆ ಇದ್ದಳು. ರಾಜ್ಯ ಶಾಂತಿ ಸಂಮೃದ್ಧಿ ಹೊಂದಿತು. ಧೃತರಾಷ್ಟ್ರನಿಗೆ ವೈರಾಗ್ಯ ಬರಲು ಚುಚ್ಚು ಮಾತುಗಳನ್ನಾಡುತ್ತಾ ಪೀಡಿಸಿದ. ವ್ಯಾಸರ ಇಚ್ಛೆಯಂತೆ ರಾಜ್ಯವಾಳಿದ. ತನ್ನ ಸಹೋದರರೊಂದಿಗೆ ಮಹಾಪ್ರಸ್ಥಾನಕ್ಕೆ ಹಿಮಾಲಯಕ್ಕೆ ಹೊರಟ. ಧರ್ಮಜ ಸ್ವರ್ಗದಲ್ಲಿ ದ್ರೌಪದಿ ಯೊಂದಿರುವುದನ್ನು ಕಂಡ. ಮಹಾಭಾರತದಲ್ಲಿ ಶ್ರೇಷ್ಠ ವೈಷ್ಣವ ಧರ್ಮದೀಕ್ಷೆ ಹೊಂದಿದ್ದ ಪಾತ್ರ ಭೀಮಸೇನ. |
| ರುಕ್ಮಿಣಿ, ರುಕ್ಮಿ ರುಕ್ಮರಥ, ರುಕ್ಮಬಾಹು, ರುಕ್ಮೇಶ. ರುಕ್ಮಮಾಲಿ | ಆದಿತ್ಯರಲ್ಲಿ ಒಬ್ಬ, ವಿದರ್ಭದೇಶದ ಅರಸು, ಶೂರ, ಇಂದ್ರನ ಸ್ನೇಹಿತ, ಜರಾಸಂಧನ ಮೇಲೆ ಗೌರವ ಇಟ್ಟಿದ್ದ ಮಗ ರುಕ್ಮಿಯ ವಶದಲ್ಲಿದ್ದ. ಇವನಿಗೆ ಕೃಷ್ಣ ವಿಶ್ವರೂಪ ತೋರಿ ತಾನಾರೆಂದು ತಿಳಿಸಿದ. ಮಗಳಾದ ರುಕ್ಮಿಣಿಯನ್ನು ಕೃಷ್ಣನಿಗೆ ಒಪ್ಪಿಸಿದ. |
| – | ಚಂದ್ರವಂಶಜ, ಒಬ್ಬ ರುದ್ರ, ಭೂರಿಶ್ರವ, ಶಲರ ಅಣ್ಣ, ಬಾಹ್ಲೀಕನ ಮೊಮ್ಮಗ. ಪರಾಕ್ರಮಿ, ಭಾರತಯುದ್ಧದಲ್ಲಿ ದುರ್ಯೋಧನನ ಪರವಾಗಿ ಯುದ್ಧಮಾಡಿದ. ಪ್ರಾಯೋಪ್ರವೇಶಕ್ಕೆ ಕೂತಾಗ ಸಾತ್ಯಕಿ ತಲೆ ತೆಗೆದ. |
| – | ಮಹಾಪರಾಕ್ರಮಿ, ಒಬ್ಬ ರುದ್ರ, ಭೂರಿ ಹಾಗೂ ಶಲರ ಮಧ್ಯಮ. ಬಾಹ್ಲೀಕನ ಮೊಮ್ಮಗ. ದುರ್ಯೋದನನಿಗೆ ಸಂಧಿ ಮಾಡುವಂತೆ ಸಲಹೆ ಕೊಟ್ಟ, ಒಂದು ಅಕ್ಷೋಹಿಣೀ ಸೈನ್ಯದೊಂದಿಗೆ ದುರ್ಯೋಧನನಿಗೆ ಸಹಕರಿಸಿದ. ಅರ್ಜುನ ಇವನ ಬಲಕೈಯನ್ನು ಕತ್ತರಿಸಿದ. ಪ್ರಾಯೋಪ್ರವೇಶಕ್ಕೆ ಕೂತಾಗ ಸಾತ್ಯಕಿ ತಲೆ ತೆಗೆದ. |
| ಚ್ಯವನ, ಶುಕ್ರ, ಕವಿ ಧಾತ, ವಿಧಾತ, ಭಾರ್ಗವಿ ಇನ್ನೂ ಆರು ಮಕ್ಕಳು | ವಂಶಪ್ರವರ್ತಕ, ಬ್ರಹ್ಮರ ಚರ್ಮದಿಂದ ಜನಿಸಿದ. ಯಜ್ಞದಲ್ಲಿ ಅಗ್ನಿಜ್ವಾಲೆಯಿಂದಲೂ ಹುಟ್ಟಿದ. ಅದಕ್ಕೆ ಭೃಗು ಎಂದಾಯಿತು. ಇವರ ಒಂದು ಪಾದದಲ್ಲಿ ಕಣ್ಣಿತ್ತು. ಮಹಾ ವಿಷ್ಣುವೇ ಸರ್ವೋತ್ತಮನೆಂದು ಸಾರಿದವರು. ಕರ್ಮಯೋಗ ಪ್ರವರ್ತಕ. ವೇದ ದ್ರಷ್ಟಾರರು. ವಿಷ್ಣುವಿನ ಮಾವ. ಸಂಜೀವಿನಿ ವಿದ್ಯೆ ತಿಳಿದಿದ್ದ. ಅಂಗಿರಸರ ಅಣ್ಣ, ಗೋತ್ರ ಪ್ರವರ್ತಕರು. |
| ಸುಹೋತ್ರ 6 ಜನ | ದುಷ್ಯಂತನ ಮೊಮ್ಮಗ, ಭಾರದ್ವಾಜರ ಕೃಪೆಯಿಂದ ಹುಟ್ಟಿದ. |
| – | ಪರಶುಕ್ಲತ್ರಯರಲ್ಲಿ ಒಬ್ಬರು. ಜೀವೋತ್ತಮರು. ವಾಯುದೇವರ ಮೂರನೇ ಅವತಾರರು. ದ್ವೈತಸಿದ್ಧಾಂತ ಪ್ರವರ್ತಕರು. ಶ್ರೀಹರಿಯ ಪ್ರತಿಬಿಂಬರು. ಭೂಲೋಕದಲ್ಲಿ ತತ್ವಜ್ಞಾನವು ಕ್ಷೀಣವಾಗಿ ಬ್ರಹ್ಮಸೂತ್ರಗಳಿಗೆ ದುರ್ಭಾಷ್ಯಗಳು ಬಂದು ಅಜ್ಞಾನವು ಆವರಿಸಲು ಭಗವಂತನ ಆಜ್ಞೆ ಹಾಗೂ ಸಜ್ಜನರ ಮೇಲಿನ ಕಾರುಣ್ಯದಿಂದ ಪಾಜಕ ಎಂಬ ಕ್ಷೇತ್ರದಲ್ಲಿ ವಾಸುದೇವ ಎಂಬ ಹೆಸರಿನಿಂದ ಅವತರಿಸಿದರು. ಅದ್ಭುತ ಬಾಲಲೀಲೆಗಳನ್ನು ತೋರಿದ ವಾಸುದೇವ ಅಚ್ಯುತಪ್ರೇಕ್ಷರಿಂದ ಆಶ್ರಮ ಪಡೆದು ಪೂರ್ಣಪ್ರಜ್ಞರಾದರು. ಭರತಖಂಡವನ್ನು ಎರಡು ಸಲ ದಿಗ್ವಿಜಯಗೈದು ದುರ್ವಾದಿಗಳನ್ನು ಜಯಿಸಿ ಸತ್ಸಿದ್ಧಾಂತವಾದ ವೈಷ್ಣವ ಮತವನ್ನು ಪುನಃ ಸ್ಥಾಪಿಸಿದರು. ಸರ್ವಮೂಲಗ್ರಂಥಗಳನ್ನು ರಚಿಸಿ ವೇದವ್ಯಾಸರ ಪ್ರೀತಿ ಪಾತ್ರರಾದರು. ಅನೇಕ ಮಹಾತ್ಮೆಗಳನ್ನು ತೋರಿ ಭಗವಂತನ ಕೃಷ್ಣರೂಪವನ್ನು ಪ್ರತಿಷ್ಠಾಪಿಸಿದರು. ಪದ್ಮನಾಭಾದಿಯತಿಗಳಿಗೆ ಅಷ್ಟಯತಿಗಳಿಗೆ ಸನ್ಯಾಸದೀಕ್ಷೆ ಕೊಟ್ಟ ಪರಂಪರೆ ಬೆಳೆಸಿದರು. ಶ್ರೀ ಮದಾಚಾರ್ಯರ ಆದ್ಭುತ ಲೀಲೆಗಳು, ಗ್ರಂಥರಚನೆ, ಮಾಡಿದ ಪರಿವರ್ತನೆಗಳು, ತೋರಿದ ಕಾರುಣ್ಯಾದಿಗಳು ಅನುಪಮ ಹಾಗೂ ಅನನ್ಯವಾದದ್ದು. ಮಾಘ ಶುದ್ಧ ನವಮಿಯಂದು ಐತರೇಯ ಪಾಠ ಹೇಳುತ್ತಿರಲು ದೇವತೆಗಳು ಪುಷ್ಪವೃಷ್ಟಿಗೈಯ್ಯಲು ಅಂತರ್ಧಾನರಾಗಿ ಬದರಿಯಲ್ಲಿ ವೇದವ್ಯಾಸರಲ್ಲಿ ನೆಲೆಸಿರುವರು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
| --- | --- | --- | --- | --- | --- | --- |
| ಮಹಾ ಭಿಷಕ್ | ವರುಣ | -- | ಕೃತ | ಮ.ಭಾ. | ಪ್ರತೀಪ | ಗಂಗಾ |
| ಮಕರಾಕ್ಷ | ರಾಕ್ಷಸ | -- | ತ್ರೇ. | ರಾ. | ಖರಾಸುರ | - |
| ಮಯಾಸುರ | ರಾಕ್ಷಸಶಿಲ್ಪಿ | ದಾನವ | ದ್ವಾ. | ಮ.ಭಾ. | - | - |
| ಮತ್ಸ್ಯ | ಮಹಾವಿಷ್ಣು | -- | - | ಭಾಗವತ | - | ವೇದಾ |
| ಮಣಿಮಂತ | ರಾಕ್ಷಸ | -- | ದ್ವಾ. | ಮ.ಭಾ. | - | - |
| ಮತಂಗ | ಮಹ | -- | ತ್ರೇ. | ರಾ | - | - |
| ಮಂಡೋದರಿ | ಅಪ್ಸರೆ | -- | ತ್ರೇ | ರಾ. | ಮಯಾಸುರ ಹೇಮ | ರಾವಣ |
| ಮಂಥರಾ | ಅಲಕ್ಷ್ಮೀ | -- | ತ್ರೇ. | ರಾ. | - | ಕಲಿ |
| ಮಧು | ಅಸುರ | -- | ತ್ರೇ. | ರಾ. | ಲೋಲಾ | ಕುಂಭೀನಸಿ |
| ಮಧು-ಕೈಟಭರು | ದೈತ್ಯರು |  | ಕೃ. | ಭಾಗವತ | ವಿಷ್ಣು | - |
| ಮನಸ್ಯು | ಸಾಮ್ರಾಟ್ | -- | ದ್ವಾ. | ಭಾ. | ಪ್ರವೀರ, ಶೂರಸೇನಿ | ಸೌವೀರಿ ಮಿತ್ರಕೇಶಿ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| (ಭೀಷ್ಮ) | ಇಕ್ಷ್ವಾಕು ವಂಶಜ, ಅರಸು, ಮಹಾಪರಾಕ್ರಮಿ, ಸಾವಿರ ಅಶ್ವಮೇಧ - ನೂರು ರಾಜಸೂಯ ಯಾಗ ಮಾಡಿದ. ಬ್ರಹ್ಮ ಸಭೆಯಲ್ಲಿ ಕುಳಿತಿದ್ದಾಗ ಹೆಂಡತಿ ಗಂಗೆಯನ್ನು ಕಾಮುಕ ದೃಷ್ಟಿಯಿಂದ ನೋಡಿದ್ದಕ್ಕೆ ಬ್ರಹ್ಮನಿಂದ ಶಾಪಹೊಂದಿ ಭೂಲೋಕದಲ್ಲಿ ಪ್ರತೀಪನ ಮಗ ಶಂತನುವಾಗಿ ಜನಿಸಿದ. (ನೋಡಿ-ಶಂತನು). |
| - | ರಾವಣನ ಆಪ್ತ, ಯುದ್ಧದಲ್ಲಿ ರಾಮನಿಂದ ಸತ್ತ. |
| - | ಶುಕ್ರಾಚಾರ್ಯರ ಶಿಷ್ಯ ಕಾಂಡವ ವನದಲ್ಲಿ ವಾಸಿಸುತ್ತಿದ್ದ ಇವನನ್ನು ದಹನದ ಸಂದರ್ಭದಲ್ಲಿ ಅರ್ಜುನ ರಕ್ಷಿಸಿದ. ಶ್ರೇಷ್ಠ ಶಿಲ್ಪಿ. ಶ್ರೀಕೃಷ್ಣನ ಸೂಚನೆಯಂತೆ ಯುಧಿಷ್ಠಿರನ ರಾಜಸೂಯಯಾಗಕ್ಕೆಂದು ಅದ್ಭುತವಾದ ಭವನವನ್ನು ಕಟ್ಟಿಕೊಟ್ಟ. ಭೀಮನಿಗೆ ದಿವ್ಯವಾದ ಗದೆಯನ್ನು, ಅರ್ಜುನನಿಗೆ ದೇವದತ್ತ ಎಂಬ ಶಂಖವನ್ನು ಕೊಟ್ಟ. ಬಿಂದು ಸರೋವರದ ಬಳಿ ನೆಲೆಸಿದ. ತ್ರಿಪುರವನ್ನೂ ಇವನೇ ನಿರ್ಮಿಸಿದ. |
| - | ವಿಷ್ಣುವಿನ ಹತ್ತು ಅವತಾರಗಳಲ್ಲಿ ಮೊದಲನೆಯದು. ಚ. ಬ್ರಹ್ಮರಲ್ಲಿದ್ದ ವೇದರಾಶಿಯನ್ನು ಹಯಗ್ರೀವಾಸುರ ಅಪಹರಿಸಿ ಸಮುದ್ರ ಮಧ್ಯ ಸೇರಿದಾಗ, ವಿಷ್ಣುವು ಮತ್ಸ್ಯರೂಪದಿಂದ ಅವನನ್ನು ಸಂಹರಿಸಿ ತಂದ. ಇನ್ನೊಮ್ಮೆ ಸತ್ಯವ್ರತ ರಾಜರ್ಷಿ ಕೃತಮಾಲಾ ನದಿಯಲ್ಲಿ ಅರ್ಘ್ಯ ಕೊಡುವ ಸಮಯದಲ್ಲಿ ಕೈಯಲ್ಲಿ ಬಂದ ಮೀನು ದೊಡ್ಡದಾಗುತ್ತಾ ಬೃಹದಾಕಾರ ಪಡೆಯಿತು. ರಾಜನು ಆಶ್ಚರ್ಯಹೊಂದಿ ಪ್ರಾರ್ಥಿಸಲಾಗಿ ಅಂದಿನಿಂದ ಏಳನೇದಿನ ಆಗುವ ಪ್ರಳಯೋದಕದಲ್ಲಿಯ ನಾವೆಯಲ್ಲಿ ಕುಳಿತು ತನ್ನ ಮತ್ಸ್ಯರೂಪದ ಕೋಡಿಗೆ ನಾವೆಯನ್ನು ಕಟ್ಟಲು ಹೇಳಿದ. ಹೀಗೆ ಸತ್ಯವ್ರತ ರಾಜರ್ಷಿಯನ್ನು ಉದ್ಧರಿಸಿದ. ಮತ್ಸ್ಯಪುರಾಣ ಹೇಳಿದ. |
| - | ಸೌಗಂಧಿಕಾವನ ರಕ್ಷಕ, ದೊಡ್ಡ ಅಸುರ, ಕುಬೇರನ ಸಖನೂ ಆಗಿದ್ದ. ಸೌಗಂಧಿಕಾ ಪುಷ್ಪ ತರಲು ಹೋಗಿದ್ದ ಭೀಮಸೇನನೊಂದಿಗೆ ಯುದ್ಧವಾಡಿ ಸತ್ತ. ಕ್ರೋಧವಶ ದೈತರಿಗೆ ನಾಯಕನಾಗಿದ್ದ. |
| - | ಋಷ್ಯಮೂಕ ಪರ್ವತದ ಬಳಿಯ ಆಶ್ರಮದಲ್ಲಿದ್ದ. ಒಮ್ಮೆ ವಾಲಿ ದುಂದುಭಿಯನ್ನು ಕೊಂದ ರುಂಡವನ್ನು ಎಸೆದು ಆಶ್ರಮವನ್ನು ಅಪವಿತ್ರ ಮಾಡಲಾಗಿ, ಈ ಮುನಿಯಿಂದ ಇಲ್ಲಿಗೆ ಬಂದರೆ ಮರಣ ಹೊಂದಲೆಂದು ಶಾಪ ಪಡೆದ. ಆದಕ್ಕೆಂದೆ ಸುಗ್ರೀವ ಇಲ್ಲಿ ಬಂದು ನೆಲೆಸಿದ. |
| ಇಂದ್ರಜಿತ್, ಅಕ್ಷಕುಮಾರ | ಪತಿವ್ರತೆ, ಸಾತ್ವಿಕ ಸ್ವಭಾವದವಳು, ಕೆಲವು ಸಲ ಗಂಡನಿಗೂ, ಮಕ್ಕಳಿಗೂ ಬುದ್ಧಿ ಹೇಳಿದವಳು. ಲಂಕಾದ ಮಹಾರಾಣಿ. |
| - | ಕೈಕೇಯಿಯ ದಾಸಿ. ಸಮುದ್ರಮಥನ ಕಾಲದಲ್ಲಿ ಹುಟ್ಟಿದವಳು, ದುಷ್ಟ ಚೇತನ. ಅಪ್ಸರೆಯಾಗಿ ನಂತರ ಬ್ರಹ್ಮದೇವರು ಅಂದಂತೆ ಮಂಥರೆಯಾದಳು. ದಶರಥ ರಾಮನಿಗೆ ಯುವರಾಜ ಪದವಿ ಕೊಡಲಿಚ್ಛಿಸಿದಾಗ ಕೈಕೇಯಿಗೆ ದುರ್ಬುದ್ಧಿ ಬೋಧಿಸಿದವಳು. ರಾಮಸೀತಾಲಕ್ಷ್ಮಣರನ್ನು ಕಾಡಿಗಟ್ಟಿದವಳು. ಇದಕ್ಕೆಂದೇ ಅವತರಿಸಿ ಬಂದ ದುರಾತ್ಮಳು. ಭರತನಿಂದ ಶಿಕ್ಷಿತಳಾದಳು. ಕಡೆಗೆ ಅಂಧನ್ತಮಸನ್ನೇ ಪಡೆದಳು. |
| ಲವಣ | ಶಿವಭಕ್ತ, ತಪಸ್ಸನ್ನು ಮಾಡಿ ಶಿವನಿಂದ ತ್ರಿಶೂಲಾಯುಧ ಪಡೆದ. ದುಷ್ಟಮಗನಾದ ಲವಣನಿಗೆ ಅದನ್ನು ಒಪ್ಪಿಸಿ ಸಮುದ್ರ ಸೇರಿದ. ಲವಣನನ್ನು ಯುದ್ಧದಲ್ಲಿ ಶತ್ರುಘ್ನ ಸಂಹಾರ ಮಾಡಿದ. |
| - | ಕಲ್ಪಾದಿಯಲ್ಲಿ ವಿಷ್ಣುವಿನಿಂದ ಹುಟ್ಟಿದ ಮಹಾ ದೈತ್ಯರು. ಬ್ರಹ್ಮರಿಂದ ಅವಧ್ಯ ವರ ಪಡೆದರು. ವೇದಗಳನ್ನು (ಅಭಿಮಾನಿಗಳನ್ನು) ಕದ್ದರು. ನೀರೊಳಗೆ ಅಡಗಿದ್ದ ಇವರನ್ನು ಹಯಗ್ರೀವರೂಪಿ ವೇದಗಳನ್ನು ತಂದು ಅವರನ್ನು ಹೊಸಕಿ ಸಂಹರಿಸಿದ. ಇವರ ಮೇದಸ್ಸಿನಿಂದ 'ಮೇದಿನಿ' ನಿರ್ಮಿಸಿದ. |
| ಶಕ್ತ, ಸಂಹನನ ವಾಗ್ಮಿ | ಚಂದ್ರವಂಶದ ಅರಸು, ಪರಾಕ್ರಮಿ. ಇವನು ಪೂರುವಿನ ಮೊಮ್ಮಗ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಮರೀಚಿ | ಬ್ರಹ್ಮರ್ಷಿ | -- | | ಭಾಗವತ | ಚ.ಬ್ರಹ್ಮ | ಕಲಾದೇವಿ, ಊರ್ಣಾ |
| ಮರುತ್ತ | ಚಕ್ರವರ್ತಿ | -- | ತ್ರೇ. | ಭಾಗವತ | ಅವಿಕ್ಷಿತ, ವಿಶಾಲಾ | - |
| ಮಲಯಧ್ವಜ | ಅರಸು | -- | ದ್ವಾ. | ಮ.ಭಾ | - | - |
| ಮಹಾಕಾಯ | ಅಸುರ | -- | ತ್ರೇ. | ರಾ. | - | - |
| ಮರ್ಯಾದಾ | ರಾಜಕುಮಾರಿ | -- | ದ್ವಾ. | ಭಾ. | ಪೂರುವಂಶಜಳು | ಅವಾಚೀನ |
| ಮಾಂಡವೀ | ರಾಜಪುತ್ರಿ | -- | ತ್ರೇ. | ರಾ. | ಕುಶಧ್ವಜ, | ಭರತ |
| ಮಾತಲಿ | ದೇವತೆ | -- | ದ್ವಾ. | ಭಾ. | - | ಸುಧರ್ಮೆ |
| ಮನ್ಮಥ | ಕಾಮ | -- | ತ್ರೇ. | ಭಾಗವತ | ಚ. ಬ್ರಹ್ಮ | ರತಿ |
| ಮಾದ್ರಿ | ಧೃತಿ | -- | ದ್ವಾ. | ಮ.ಭಾ. | ಋತಾಯನ, | ಪಾಂಡುರಾಜ |
| ಮಾಂಧಾತ | ಅರಸು | -- | ದ್ವಾ. | ಮ.ಭಾ. | ಯುವನಾಶ್ವ | ಬಿಂದುಮತಿ |
| ಮಾಧವೀ | ರಾಜಕುಮಾರಿ | -- | ದ್ವಾ. | ಮ.ಭಾ. | ಯಯಾತಿ | ಹರ್ಯಶ್ವ, ದಿವೋದಾಸ, ಉಶೀನರ, ವಿಶ್ವಾಮಿತ್ರ |
| ಮಾಯಾವತಿ | ರತಿದೇವಿ/ರಾಣಿ | -- | - | ಭಾಗವತ | - | ಶಂಬರಾಸುರ |
| ಮಾಯಾವಿ | ಅಸುರ | -- | ತ್ರೇ. | ರಾ. | ಮಾಯಾಸುರ, ಹೇಮ | - |
| ಮಾರ್ಕಂಡೇಯ | ಮಹರ್ಷಿ | -- | - | ಭಾಗವತ | ಮೃಕಂಡು | ಧೂಮೋರ್ಣಾ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಕಶ್ಯಪ, ಆರುಪುತ್ರರು | ಚ. ಬ್ರಹ್ಮರ ಮಾನಸಪುತ್ರ, ಕರ್ದಮರ ಅಳಿಯ, ಇವನ ಆರುಪುತ್ರರು ಬ್ರಹ್ಮರ ಶಾಪದಿಂದ ಮೂರು ಜನ್ಮದಲ್ಲಿ ದುಷ್ಟಯೋನಿಯಲ್ಲಿ ಜನಿಸಿ ಸತ್ತರು. ಇವರು ಸಪ್ತಋಷಿಗಳಲ್ಲೊಬ್ಬಳು. ಒಬ್ಬ ಪ್ರಜಾಪತಿ. |
| ದಮ, ನರಿಷ್ಯಂತ ಮುಂತಾದ 18 ಮಂದಿ | ಸೂರ್ಯವಂಶಜ. ಸದಾ ಯಾಗದಲ್ಲಿ ನಿರತನಾಗಿದ್ದ. ಮಹಾಪರಾಕ್ರಮಿಯೂ ಆಗಿದ್ದ. ಒಮ್ಮೆ ಬೃಹಸ್ಪತಿಗಳ ತಮ್ಮನಾದ ಸಂವರ್ತನಿಂದ ಯಾಗವನ್ನಾಚರಿಸಿದ. ಆಗ ಇಂದ್ರಾದಿಗಳೇ ಪ್ರತ್ಯಕ್ಷವಾಗಿ ಬಂದು ಆಹುತಿ ಸ್ವೀಕರಿಸಿದರು. ಯಜ್ಞದಲ್ಲಿ ದಾನಮಾಡಿ ಉಳಿದ ಹಣವನ್ನು ಹಿಮವತ್ಪರ್ವತದಲ್ಲಿ ಹೂತಿಟ್ಟ ಇದನ್ನೇ ವ್ಯಾಸರ ಸೂಚನೆಯಂತೆ ಧರ್ಮರಾಜ ಅಶ್ವಮೇಧಯಾಗಕ್ಕೆ ತಂದು ಬಳಸಿದ. |
| ಚಿತ್ರಾಂಗದ | ಮಣಲೂರಿನ ರಾಜ. ಅರ್ಜುನನ ಮಾವ, ಬಬ್ರುವಾಹನನ ತಾತ, ಯುದ್ಧದಲ್ಲಿ ಅಶ್ವತ್ಥಾಮರಿಂದ ಮಡಿದ. |
| – | ರಾವಣನ ಸೈನ್ಯಾಧಿಪತಿ, ವಾಲಿಪುತ್ರ ಅಂಗದನಿಂದ ಯುದ್ಧದಲ್ಲಿ ಸತ್ತ. |
| ಅರಿಹ | ಚಂದ್ರವಂಶದ ರಾಜಕುಮಾರಿ. |
| ತಕ್ಷ, ಪುಷ್ಕರ | ಪತಿವ್ರತೆ, ಕೈಕೇಯಿಯ ಸೊಸೆ. |
| ಗುಣಕೇಶಿ, ಗೋಮುಖ | ಇಂದ್ರನ ಸಾರಥಿ, ಇವನ ಮಗ ಜಯಂತನ ಸಾರಥಿ. ಅರ್ಜುನನನ್ನು ಸ್ವರ್ಗಕ್ಕೆ ಕರೆದೊಯ್ದ. ಇಂದ್ರನ ರಥವನ್ನು ರಾಮನಿಗೆ ಕೊಟ್ಟು ಸಾರಥ್ಯ ಮಾಡಿದವನು. ರಾವಣ ಸತ್ತ ನಂತರ ಸ್ವರ್ಗಕ್ಕೆ ಹೋದ. |
| -- | ಬ್ರಹ್ಮನಿಂದ ಮೋಹಿಸುವ ವರ ಪಡೆದ. ಶಿವನೊಂದಿಗೆ ವಿರಸವಗಿ ಆವನ ಮೂರನೇ ಕಣ್ಣಿಂದ ಭಸ್ಮವಾಗಿ ಅನಂಗನಾದ. |
| ನಕುಲ, ಸಹದೇವ | ಶಲ್ಯನ ಒಡಹುಟ್ಟಿದವಳು, ಪಾಂಡುವಿನ ಎರಡನೆಯ ಮಡದಿ, ಪಾಂಡುವಿನ ಸೂಚನೆಯಂತೆ ಕುಂತಿಯಿಂದ ಮಂತ್ರ ಪಡೆದು ಅಶ್ವಿನೀದೇವತೆಗಳನ್ನು ಕರೆದು ಇಬ್ಬರು ಮಕ್ಕಳನ್ನು ಪಡೆದಳು. ಈಕೆಯ ಸಂಸರ್ಗದಿಂದ ಪಾಂಡು ಅಸುನೀಗಿದ. ಮಕ್ಕಳನ್ನು ಕುಂತಿಗೆ ಒಪ್ಪಿಸಿ ಗಂಡನ ಜೊತೆ ಸಹಗಮನ ಮಾಡಿ ಮಡಿದಳು. ಕುಂತಿಗಿಂತಲೂ ಹೆಚ್ಚು ಮಕ್ಕಳನ್ನು ಪಡೆಯಬೇಕೆಂಬ ದುರಾಶೆಯಿಂದ ಅಶ್ವಿನೀಕುಮಾರರನ್ನು ಕರೆದು ಮೋಸಮಾಡಿದ್ದಳು. |
| ಅಂಬರೀಷ, ಪುರು ಕುತ್ಸ ಮುಚುಕುಂದ, 50 ಪುತ್ರಿಯರು | ಸೂರ್ಯವಂಶಜ, ಇಕ್ಷ್ವಾಕುವಂಶಜ. ಯುವನಾಶ್ವನ ಹೊಟ್ಟೆಯಿಂದಲೇ ಜನಿಸಿದವ. ಸಾರ್ವಭೌಮ - ಒಂದೇ ದಿನದಲ್ಲಿ ಭೂಮಂಡಲವನ್ನು ಗೆದ್ದವನು. ಇವನ ರಾಜ್ಯದಲ್ಲಿ ಮಾಂಸ-ಭಕ್ಷಣವನ್ನು ನಿಷೇಧ ಮಾಡಿದ್ದ. ಇವನ 50 ಪುತ್ರಿಯರನ್ನು ಸೌಭರಿಗಳಿಗೆ ಕೊಟ್ಟು ಮದುವೆಮಾಡಿದ. ನೂರು ರಾಜಸೂಯ, ನೂರು ಅಶ್ವಮೇಧಯಾಗಗಳನ್ನು ಮಾಡಿದ. ಲವಣಾಸುರನಲ್ಲಿದ್ದ ಶಿವನ ತ್ರಿಶೂಲದಿಂದ ಹತನಾದ. |
| ವಸುಮನ, ಪ್ರತರ್ದನ ಶಿಬಿ, ಅಷ್ಟಕ | ಇವಳು ಗಾಲವರ ವರದಿಂದ ನಿತ್ಯ ಕನ್ಯೆಯಾಗಿದ್ದಳು. ನಾಲ್ವರಿಂದ ನಾಲ್ಕು ಪುತ್ರರನ್ನು ಪಡೆದಳು. ತಪಸ್ಸಿಗೆಂದು ಅರಣ್ಯಕ್ಕೆ ಹೋಗಿ ಮೃಗವ್ರತವನ್ನಾಚರಿಸಿದಳು. ಇವಳ ಪುಣ್ಯವನ್ನು ಧಾರೆಯೆರೆದು ಪತನಗೊಂಡ ತಂದೆಗೆ ಸ್ವರ್ಗ ಪ್ರಾಪ್ತಿಯಾಗುವಂತಾಗಿಸಿದಳು. |
| – | ಕಡೆಗೆ ಶಂಬರಾಸುರನನ್ನು ಕೊಲ್ಲಿಸಿದಳು. ನಾರದರ ಸೂಚನೆಯಂತೆ ಮೀನಿನಲ್ಲಿ ಸಿಕ್ಕ ಮಗು (ಪ್ರದ್ಯುಮ್ನ) ವನ್ನು ರಹಸ್ಯವಾಗಿ ಸಾಕಿ ಕಾಪಾಡಿ ವಿದ್ಯೆಯನ್ನು ಕಲಿಸಿದಳು. ಇವನಿಂದ ಶಂಬರಾಸುರನನ್ನು ಕೊಲ್ಲಿಸಿದಳು. |
| – | ದುಂದುಭಿಯ ಸೋದರ. ತಮ್ಮನನ್ನು ಕೊಂದ ಸೇಡಿಗೆ ವಾಲಿಯೊಂದಿಗೆ ಯುದ್ಧವಾಡಿ ಸತ್ತ. |
| – | ಶಿವನ ವರದಿಂದ ಚಿರಂಜೀವತ್ವವನ್ನು ಪಡೆದರು. ತಪಸ್ಸನ್ನಾಚರಿಸಿ ಭಗವಂತನನ್ನು ಪ್ರಳಯವನ್ನು ತೋರಲು ಪ್ರಾರ್ಥಿಸಿದ. ತಥಾಸ್ತು ಎಂದ ಭಗವಂತ ತನ್ನ ಮಾಯೆಯಿಂದ ಅದ್ಭುತವಾದ ಪ್ರಳಯವನ್ನು ತೋರಿದ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಮಾರಿಷಾ | ದೇವತೆ | -- | - | ಭಾಗವತ | ಕಂಡು, ಪ್ರಮ್ಲೋಚಾನ(ಅಪ್ಸರೆ) | ಪ್ರಾಚೇತಸರು |
| ಮಾರೀಚ | ರಾಕ್ಷಸ | -- | ತ್ರೇ. | ರಾ. | ತಾಟಕೀ | - |
| ಮಾಲಿ | ರಾಕ್ಷಸ | -- | ತ್ರೇ | ರಾ. | ಸುಕೇಶ, ದೇವವತಿ | ವಸುಧೆ |
| ಮಿತ್ರವಿಂದ | - | ಲಕ್ಷ್ಮೀ | ದ್ವಾ. | ಮ.ಭಾ. | ಜಗತ್ಸೇನ ರಾಜಾಧಿದೇವಿ | ಶ್ರೀಕೃಷ್ಣ |
| ಮುಚಕುಂದ | ಅರಸು | -- | ದ್ವಾ. | ಭಾ. | ಮಾಂಧಾತ (ಯವನಾಶ್ವ) | - |
| ಮುದ್ಗಲ | ಮಹರ್ಷಿ | -- | ದ್ವಾ. | ಮ.ಭಾ. | ಭಮ್ರ್ಯಾಶ್ವ, | - |
| ಮುರ | ರಾಕ್ಷಸ | -- | ದ್ವಾ. | ಮ.ಭಾ. | - | - |
| ಮೂಕ | ಅಸುರ | -- | ದ್ವಾ. | ಮ.ಭಾ. | - | - |
| ಮೃಕಂಡು | ಮಹರ್ಷಿ | -- | - | ಭಾ, | ಧಾತ, ಆಯತಿ | - |
| ಮೇಘವರ್ಣ | ಅಸುರ | -- | ದ್ವಾ. | ಮ.ಭಾ. | ಘಟೋತ್ಕಚ | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ದ್ವೈತವನದಲ್ಲಿ ಕಾಮ್ಯಕ ವನದಲ್ಲಿ ಪಾಂಡವರಿಗೆ ಅನೇಕ ಪುರಾಣಕಥೆಗಳನ್ನು ಹೇಳಿದರು. ಲೋಕಕ್ಕೆ ನಾರಾಯಣನ ಮಹಿಮೆಯನ್ನು ಸಾರಿದರು. ಶಿವನೇ ಬಂದು ವರಕೊಡಲು ಸಿದ್ಧವಾದಾಗ ಶ್ರೀ ಹರಿಯಲ್ಲಿ ಭಕ್ತಿಯನ್ನೂ ಮಾತ್ರ ಬೇಡಿದರು. ಇವರೂ ಚಿರಂಜೀವಿಗಳು. |
| ದಕ್ಷ | ಪಿತೃದೇವತೆಗಳ ಹೆಂಡತಿ. ಅರಣ್ಯವೃಕ್ಷಗಳ ಪುತ್ರಿ. ಚಂದ್ರ ಇವಳನ್ನು ಪ್ರಾಚೇತಸ ಋಷಿಗಳೊಂದಿಗೆ ಮದುವೆ ಮಾಡಿಸಿದ. |
| - | ಸುಬಾಹುವಿನ ಅಣ್ಣ. ಬ್ರಹ್ಮದೇವರಿಂದ ಅವಧ್ಯತ್ವ ವರ ಪಡೆದ. ಅಗಸ್ತ್ಯರ ಶಾಪದಿಂದ ಅಸುರನಾದ. ವಿಶ್ವಾಮಿತ್ರ ಸಿದ್ದಾಶ್ರಮದಲ್ಲಿ ಯಜ್ಞ ಮಾಡುತ್ತಿರುವಾಗ ಇವನು ಅಪವಿತ್ರ ಮಾಡುತ್ತಿರಲು ಶ್ರೀರಾಮ ಇವನನ್ನು ವಾಯವ್ಯಾಸ್ತ್ರದಿಂದ ಅಟ್ಟಿದ. ಹೋಗಿ ಸಮುದ್ರದಲ್ಲಿ ಬಿದ್ದ. ರಾಮ ಹೆಸರನ್ನು ಕೇಳಿ ಹೆದರುವ ಇವನು ಸೀತಾಪಹಾರಮಾಡಲು ಬಂದ ರಾವಣನಿಗೆ ಹೆದರಿ ಸಹಾಯಮಾಡಿದ. ಚಿನ್ನದ ಜಿಂಕೆ (ಮಾಯಾಮೃಗ) ವಾಗಿ ಬಂದು ಸೀತೆಯು ಬಯಸುವಂತಾಗಿಸಿ ರಾಮನ ಬಾಣಕ್ಕೆ ಸಿಕ್ಕು 'ಹಾ ಲಕ್ಷ್ಮಣಾ' ಎಂದು ಕೂಗಿ ಸತ್ತು ಅಧೋಗತಿ ಹೊಂದಿದ. |
| ಅನಲ, ಅನಿಲ, ಹರ ಸಂಪಾತಿ | ಬ್ರಹ್ಮದೇವರ ವರದಿಂದ ಲಂಕಾಪಟ್ಟಣವನ್ನು ನಿರ್ಮಿಸಿದ. ಮಾಲ್ಯವಂತ, ಸುಮಾಲಿ ಇವನ ಸೋದರರು. ಈ ಮೂವರೂ ಕೆಲಕಾಲ ಲಂಕಾದಲ್ಲಿ ನೆಲೆಸಿದರು. ಈ ಮೂವರೂ ನರ್ಮದೆಯ ಪುತ್ರಿಯರನ್ನು ಮದುವೆಯಾದರು. ಇವರು ದೇವತೆಗಳನ್ನು ಪೀಡಿಸಿ ಅವರ ಅಧಿಕಾರವನ್ನು ಆಕ್ರಮಿಸಲಾಗಿ ದೇವತೆಗಳ ಪ್ರಾರ್ಥನೆಯಂತೆ ಮಹಾವಿಷ್ಣು ಮಾಲಿಯನ್ನು ಕೊಂದ. ಇನ್ನಿಬ್ಬರು ಪಾತಾಳಕ್ಕೆ ಓಡಿಹೋದರು. |
| ವೃಕ, ಹರ್ಷಾದಿ 10 ಮಕ್ಕಳು. ಒಬ್ಬ ಮಗಳು | ಕೃಷ್ಣನ ಸೋದರತ್ತೆ ಮಗಳಿನಿಂದ ಅನುವಿಂದರ ಸೋದರಿ. ಇವಳನ್ನು ದುರ್ಯೋಧನನಿಗೆ ಕೊಡಲು ನಿಶ್ಚಯಿಸಿದ್ದರು. ಆದರೆ ಸ್ವಯಂವರದಲ್ಲಿ ಇವಳು ಕೃಷ್ಣನಿಗೆ ಹಾರಹಾಕಿದಳು. ಲಕ್ಷ್ಮೀ ಸಾನ್ನಿಧ್ಯ ಹೊಂದಿದವಳು. |
| - | ಸೂರ್ಯವಂಶಜ, ಅಂಬರೀಷ, ಪುರುಕುತ್ಸರು ಇವನ ಸೋದರರು. ಸೌಭರಿಯ 50 ಪತ್ನಿಯರು ಇವನ ಸಹೋದರಿಯರು. ದೇವರ ವರಬಲದಿಂದ ದೇವಾಸುರರ ಸಂಗ್ರಾಮದಲ್ಲಿ ಅಸುರರನ್ನು ನಿಗ್ರಹಿಸಿದ. ಬ್ರಹ್ಮನಿಂದ ದೀರ್ಘನಿದ್ರೆಯ ವರ ಪಡೆದು ಬದರಿಕಾಶ್ರಮ ಗುಹೆಯಲ್ಲಿ ಮಲಗಿದ್ದ ಇವನನ್ನು ಕಾಲಯವನ ಒದ್ದು ಎಬ್ಬಿಸಲು ಇವನು ಅವನನ್ನು ನೋಡಿದಾಗ ಸುಟ್ಟು ಬೂದಿಯಾದ. ಕೃಷ್ಣನ ದರ್ಶನ ಭಾಗ್ಯ ಪಡೆದ. ನಂತರ ಕೃಷ್ಣನಿಂದ ಮೋಕ್ಷವನ್ನು ಪಡೆದ. |
| ಅಹಲ್ಯೆ, ದಿವೋದಾಸ | ಗೌತಮರ ಮಾವ. ವ್ರೀಹಿದ್ರೋಣನೆಂಬ ನಾಮಾಂತರ, ಇವನು ಮಾಡಿದ ಪುಣ್ಯಕ್ಕೆ (ಅತಿಥಿ ಸತ್ಕಾರಾದಿಗಳು) ಸ್ವರ್ಗಲೋಕದಿಂದ ವಿಮಾನ ಬಂದರೂ ಅದನ್ನು ತಿರಸ್ಕರಿಸಿದ. ಶಾಶ್ವತ ಸುಖಬೇಕೆಂದ ಯೋಗಿ. ವಿಷ್ಣುಭಕ್ತ. ಇವನಿಂದಾಗಿ ರಾಮೇಶ್ವರದಲ್ಲಿ ಕ್ಷೀರಕುಂಡವು ನಿರ್ಮಾಣವಾಯಿತು. |
| - | ನರಕಾಸುರನ ಪರಿವಾರದಲ್ಲಿದ್ದ ಅಸುರ.ಮಂತ್ರಿ ಹಾಗೂ ಸೈನ್ಯದ ಅಧಿಪತಿ, ಕೃಷ್ಣನಿಂದ ಸತ್ತ. |
| - | ಅರ್ಜುನ ಇಂದ್ರಕೀಲ ಪರ್ವತದಲ್ಲಿ ಪಾಶುಪತಾಸ್ತ್ರಕ್ಕಾಗಿ ಶಿವನನ್ನು ಕುರಿತು ತಪಸ್ಸು ಮಾಡುತ್ತಿರಲು ಇವನು ಹಂದಿರೂಪದಿಂದ ಬಂದ. ಇವನನ್ನು ಕಿರಾತರೂಪದ ಶಿವ ಬೇಟೆಯಾಡಲು ಅರ್ಜುನ ತನ್ನ ಮೇಲೆ ಬರುವ ಇವನನ್ನು ಕೊಂದ. |
| ಮಾರ್ಕಂಡೇಯ | ಶಿವಭಕ್ತ, ಚಿರಂಜೀವಿ ಮಗನನ್ನು ಪಡೆದ. |
| - | ಭೀಮನ ಮೊಮ್ಮಗ ಅಲ್ಲದೆ ಅವನ ಮೆಚ್ಚುಗೆಗೆ ಪಾತ್ರನಾದವ. ಅಶ್ವಮೇಧಯಾಗಕ್ಕೆಂದು ಕುದುರೆಯನ್ನು ಯೌವನಾಶ್ವ ರಾಜನ ಬಳಿಯಿಂದ ತರುವಾಗ ಭೀಮನ ಜೊತೆ ಹೋಗಿ ಅಪಹರಿಸಿ ತಂದ. ಕುರುಕ್ಷೇತ್ರ ಯುದ್ಧದ ನಂತರವೂ ಉಳಿದ ವೀರ. ಇವನಿಗೆ ಮೇಘನಾದನೆಂಬ ಹೆಸರಿದೆ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಮೇನಕಾ | ಅಪ್ಸರೆ | -- | ದ್ವಾ. | ಮ.ಭಾ. | - | ವಿಶ್ವಾಮಿತ್ರ |
| ಮೈತ್ರೇಯ | ಮಹರ್ಷಿ | -- | ದ್ವಾ. | ಭಾ. | ಕುಶಾರವ, ಮಿತ್ರೆ | - |
| ಮೈನ್ದ | ಕಪಿ | ಅಶ್ವಿನಿದೇವತೆ | ತ್ರೇ. | ರಾ. | ಸುಷೇಣ | - |
| ಮೋಹಿನಿ | ಮಹಾವಿಷ್ಣು | -- | - | ಭಾಗವತ | - | ಲಕ್ಷ್ಮೀ |
| ಮೈಂದ ವಿವಿದರು | ಅಶ್ವಿನಿ ದೇವತೆಗಳು | -- | ದ್ವಾ. | ಮ.ಭಾ. | - | - |
| ಯದು | ಮಹಾರಾಜ | -- | ದ್ವಾ. | ಮ.ಭಾ. | ಯಯಾತಿ, ದೇವಯಾನಿ | - |
| ಯಮ | ದೇವತೆ | -- | - | - | ಸೂರ್ಯ, ಸಂಜ್ಞಾದೇವಿ | ಶ್ಯಾಮಲ |
| ಯಮುನ | ದೇವತೆ | -- | ದ್ವಾ. | ಮ.ಭಾ. | ಸೂರ್ಯ, ಸಂಜ್ಞಾದೇವಿ | - |
| ಯಯಾತಿ | ರಾಜರ್ಷಿ | -- | ದ್ವಾ. | ಮ.ಭಾ. | ನಹುಷ, ವಿರಜೆ | ದೇವಯಾನಿ,ಶರ್ಮಿಷ್ಠೆ ವಿಶ್ವಾಚೀ (ಅಪ್ಸರೆ) |
| ಯಜ್ಞದತ್ತ | ಅರಸು | -- | ದ್ವಾ. | ಮ.ಭಾ. | ಭಗದತ್ತ | - |
| ಯಶೋದಾ | ಧರಾ | -- | ದ್ವಾ. | ಮ.ಭಾ. | - | ನಂದಗೋಪ |
| ಯಾಜ್ಞವಲ್ಕ್ಯ | ಬ್ರಹ್ಮರ್ಷಿ | -- | - | ಭಾಗವತ | ಬ್ರಹ್ಮರಾತ | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಪ್ರಮದ್ವರೆ,ಶಕುಂತಲೆ ದ್ರುಪದ | ಸ್ವರ್ಗದ ಶ್ರೇಷ್ಠ ಅಪ್ಸರೆ. ಸ್ಥೂಲಕೇಶ, ವಿಶ್ವಾವಸು, ವಿಶ್ವಾಮಿತ್ರ, ಪೃಷತ ಇವರಿಂದ ಮಕ್ಕಳನ್ನು ಪಡೆದಳು. ಇಂದ್ರಸಭೆಗೆ ಅರ್ಜುನನನ್ನು ಸ್ವಾಗತಿಸಲು, ನರ್ತಿಸಲು ಇದ್ದಳು. ಶ್ರೇಷ್ಠಸುಂದರಿ ಹಾಗೂ ನರ್ತಕಿ. |
| – | ಪಾಂಡವರ ಪಕ್ಷಪಾತಿ. ದುರ್ಯೋಧನನ ಸೊಕ್ಕಿಗೆ ಅವನಿಗೆ 'ತೊಡೆ ಮುರಿದು ಪ್ರಾಣ ನೀಗುವಿ' ಎಂದು ಶಾಪಕೊಟ್ಟ. ವ್ಯಾಸರಿಂದ ಪುರಾಣಗಳನ್ನು ಕೇಳಿದ. ವನವಾಸದಲ್ಲಿ ಧರ್ಮಗೆ ಉಪದೇಶಿಸಿದವರು. |
| – | ಸುಗ್ರೀವನ ಬಳಿಯ ಕಪಿನಾಯಕರಲ್ಲಿ ಒಬ್ಬವ. ದ್ವಿವಿಧ ಕಪಿಯ ಸೋದರ. ತಾರೆಯ ಅಣ್ಣ. ರಾವಣ ಯುದ್ಧದಲ್ಲಿ ವಜ್ರಮೃಷ್ಟಿ ಯೂಪಾಕ್ಷಾದಿಗಳನ್ನು ಕೊಂದ. |
| – | ಅಮೃತ ಮಥನದ ನಂತರ ಬಂದ ಅಮೃತವನ್ನು ದೇವದಾನವರಿಗೆ ಹಂಚಲು ಭಗವಂತ ಎತ್ತಿದ ಲೋಕಸುಂದರಿಯ ಅದ್ಭುತ ಅವತಾರ. ದೇವತೆಗಳಿಗೆ ಅಮೃತವನ್ನು ಹಂಚಿದ. ಅಸುರರಾದ ರಾಹುವಿಗೆ ದಕ್ಕಿಸಲಿಲ್ಲ. ಈ ಸ್ತ್ರೀರೂಪವನ್ನು ನೋಡಿ ಮೋಹಿತನಾಗಿ ಮೋಸಹೋದವನು ಶಿವ. |
| – | ನರಕಾಕಸುರ ಸ್ನೇಹಿತರು, ಕೃಷ್ಣದ್ವೇಷಿಗಳು, ಆನರ್ತ ದೇಶವನ್ನು ನಾಶಮಾಡಿದರು. ಕೃಷ್ಣನ ಆದೇಶದಂತೆ ಬಲರಾಮ ಇಬ್ಬರನ್ನು ಮುಸಲದಿ ಹೊಡೆದು ಸಂಹರಿಸಿದ. |
| ಸಹಸ್ರಜಿತ್, ಪಯೋದ, ಕ್ರೋಷ್ಟ ನಲ, ರಿಪು | ಚಂದ್ರ ವಂಶಜ. ತಂದೆಗೆ ತನ್ನ ಯೌವನವನ್ನು ಕೊಡದ ಕಾರಣ ಇವನನ್ನು ರಾಜ್ಯಾಧಿಕಾರಕ್ಕೆ ಬಾರದಿರಲು ಯಯಾತಿ ಶಪಿಸಿದ. ಇವನ ವಂಶಜರು ಯಾದವರೆನಿಸಿದರು. ಕೃಷ್ಣನು ಈ ವಂಶದಲ್ಲೆ ಬಂದವನು. ಪರಾಕ್ರಮಿ, ಹಸ್ತಿನಾವತಿಯಲ್ಲಿದ್ದು ತಕ್ಕಂತೆ ರಾಜ್ಯವಾಳಿ ನಂತರ ರಾಜ್ಯ ತೊರೆದ. |
| | ಅಷ್ಟದಿಕ್ಪಾಲಕರಲ್ಲಿ ಒಬ್ಬ ದಕ್ಷಿಣಕ್ಕೆ ನರಕದ ಅಧಿಪತಿ. ಎಲ್ಲ ಜೀವರ ಶುಭಾಶುಭ ಕರ್ಮಗಳನ್ನು ಅಳೆದು ಪಾಪಗಳಿಗೆ ತಕ್ಕ ಶಿಕ್ಷೆ ಕೊಡುವವನು. ಒಮ್ಮೆ ಇಂದ್ರನಿಗೆ ಸಹಾಯವಾಗಿ ಕೃಷ್ಣಾರ್ಜುನರೊಂದಿಗೆ ಯುದ್ಧಮಾಡಿದ. ಸಾವಿತ್ರಿ, ದಮಯಂತಿ, ನಚಿಕೇತ ಮುಂತಾದವರಿಗೆ ವರಪ್ರದಾನ ಮಾಡಿದ. ಯಮುನೆಯ ಅಣ್ಣ. ಯುಧಿಷ್ಠಿರ, ವಿದುರಾದಿ ಅವತಾಗಳನ್ನು ಪಡೆದ. |
| – | ನದಿಯ ಅಭಿಮಾನಿ. ವಸುದೇವ ಬಾಲಕೃಷ್ಣನನ್ನು ಗೋಕುಲಕ್ಕೆ ಮೊದಲ ರಾತ್ರಿ ಕರೆದೊಯ್ಯುವಾಗ ಜಾಗ ಬಿಟ್ಟಳು. ಇವಳನ್ನು ಕಾಳಿಂದಿ ಎನ್ನುವರು. ಕೃಷ್ಣನ ಬಾಲಲೀಲೆಗಳು ನಡೆದದ್ದು ಇವಳ ತಟದಲ್ಲೆ. ಯಮುನೆಯ ದಡದಲ್ಲಿ ಅನೇಕರು ಯಜ್ಞಗಳನ್ನಾಚರಿಸಿದರು. ಯಮನ ಸೋದರಿ. |
| ಯದು, ತುರ್ವಸು (ದೇವಯಾನಿಯಲ್ಲಿ) ದ್ರುಹ್ಯು, ಅನು, ಪೂರು, ಮಾಧವಿ (ಶರ್ಮಿಷ್ಠೆಯಲ್ಲಿ) | ಚಂದ್ರವಂಶಜ. ದ್ವಿತೀಯ ಪುತ್ರ. ಶುಕ್ರಾಚಾರ್ಯರ ಶಾಪದಿಂದ ಮುದಿಯಾದ. ತನ್ನ ಮುದಿತನವನ್ನು ಸ್ವೀಕರಿಸಿ ಯೌವನವನ್ನು ಕೊಟ್ಟ ಪೂರುವಿಗೆ ರಾಜ್ಯಾಧಿಕಾರ ಕೊಟ್ಟ. ಒಪ್ಪದ ಮಕ್ಕಳಿಗೆ ರಾಜ್ಯಾಧಿಕಾರ ಕೊಡದೆ ಶಾಪವಿತ್ತ. ಒಂದು ಸಹಸ್ರ ವರ್ಷ ಭೋಗವನ್ನನುಭವಿಸಿ ಸಾಕಾಗಿ ಕಡೆಗೆ ವೈರಾಗ್ಯ ತಾಳಿ ತನ್ನ ಮುಪ್ಪನ್ನು ಹಿಂದಕ್ಕೆ ಪಡೆದ. ಎಲ್ಲ ಮಕ್ಕಳಿಗೂ ರಾಜ್ಯಹಂಚಿ, ಪೂರುವನ್ನು ಸಮಗ್ರ ಭೂಮಂಡಲಕ್ಕೆ ರಾಜನನ್ನಾಗಿ ಮಾಡಿದ. ಕಡೆಗೆ ತಪಸ್ಸೈದು ವಿರಕ್ತನಾಗಿ ಸದ್ಗತಿಪಡೆದ. |
| – | ನರಕಾಸುರನ ಮೊಮ್ಮಗ, ಪ್ರಾಜ್ಞ್ಯೋತಿಷಪುರದ ರಾಜ ವಜ್ರದತ್ತನಾಮಾಂತರ, ಅರ್ಜುನನಿಂದ ಯುದ್ಧದಲ್ಲಿ ಸೋತ. |
| ದುರ್ಗಾ, ಕೃಷ್ಣ (ಸಾಕುಮಗ) ಏಕಾನಂದಾ (ಮಗಳು) | ವಸು ಪತ್ನಿ. ಕೃಷ್ಣನ (ಬಾಲ್ಯದಲ್ಲಿ) ಸಾಕುತಾಯಿ. ಗಂಡನೊಂದಿಗೆ ತಪಸ್ಸು ಮಾಡಿದಳು. ಕೃಷ್ಣನ ಬಾಲಲೀಲೆಗಳನ್ನು ನೋಡಿದ ಪುಣ್ಯಾತ್ಮಳು. ಕೃಷ್ಣ ತನ್ನ ಪುಟ್ಟ ಬಾಯಲ್ಲಿ ಬ್ರಹ್ಮಾಂಡ ತೋರಿದ. ಜಗದೊಡೆಯನಿಂದ ಅಮ್ಮ ಎಂದು ಕರೆಸಿಕೊಂಡು ಅವನಲ್ಲೇ ಮೈಮರೆತಳು. ಕೀರ್ತಿ ಶೇಷಳಾದಳು. |
| – | ಸೂರ್ಯನಿಂದಲೂ ವೇದಾಧ್ಯಯನವಾಯಿತು. ವೇದದ್ರಷ್ಟಾರರು. ವೈಶಂಪಾಯನರ ಶಿಷ್ಯ. ಯುಧಿಷ್ಠಿರನ ಸಭೆಗಳಲಿ. ರಾಜಸೂಯಯಾಗದಲಿ ಭಾಗವಹಿಸಿದ್ದರು. ಗುರುಗಳ ಶಾಪಕ್ಕೆ ಗುರಿಯಾಗಿ ಕಲಿತ ವೇದಗಳನ್ನು |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಯುಗಂಧರ | ಯಾದವ | -- | ದ್ವಾ. | ಮ.ಭಾ. | ಸಾತ್ಯಕಿ | – |
| ಯುಧಿಷ್ಠಿರ | ಯಮ | ವಾಯು | ದ್ವಾ. | ಮ.ಭಾ. | ಪಾಂಡು, ಕುಂತಿ | ದ್ರೌಪದಿ, ದೇವಕಿ |

## ಪಾಂಡವರ ಜನನ ಕಾಲ ಅಂತರಾಳ

| ಹೆಸರುಗಳು | ಮೂಲರೂಪ | ಅವತಾರದ ಕಾಲ |
|---|---|---|
| ಯುಧಿಷ್ಠಿರನ ಜನನ (ಪಾಂಡ, ಕುಂತಿ) | ಯಮಧರ್ಮರಾಜ | 108 ವರ್ಷ |
| ಒಂದು ಸಂವತ್ಸರದ ನಂತರ | | |
| ಅಶ್ವತ್ಥಾಮರ ಜನನ (ದ್ರೋಣ, ಕೃಪಿ) | ರುದ್ರದೇವರು | ಚಿರಂಜೀವಿಗಳು |
| ದುರ್ಯೋಧನನ ಜನನ (ಧೃತರಾಷ್ಟ್ರ ಗಾಂಧಾರಿ) (ದಿನಕ್ಕೊಬ್ಬರಂತೆ 99+1 ಮಕ್ಕಳ ಜನನ) | ಕಲಿಪುರುಷ | 107 ವರ್ಷ |
| ನಂತರ ಕೆಲ ದಿನದಲ್ಲಿ | | |
| ಭೀಮಸೇನನ ಜನನ (ಪಾಂಡು, ಕುಂತಿ) | ವಾಯುದೇವರು | 107 ವರ್ಷ |
| ಎರಡು ತಿಂಗಳ ನಂತರ | | |
| ಬಲರಾಮನ ಜನನ (ವಸುದೇವ, ರೋಹಿಣಿ) | ಶೇಷ | 107 ವರ್ಷ |
| ಮೂರು ತಿಂಗಳ ನಂತರ | | |
| ಶ್ರೀಕೃಷ್ಣನ ಆವಿರ್ಭೂತ (ವಸುದೇವ, ದೇವಕಿ) | ಮಹಾವಿಷ್ಣು | 106 ವರ್ಷ 6 ತಿಂಗಳು |
| ನಂತರ ದಿನಗಳಲ್ಲಿ | | |
| ಅರ್ಜುನನ ಜನನ (ಪಾಂಡು, ಕುಂತಿ) | ಇಂದ್ರ | 106 ವರ್ಷ |
| ಒಂದು ವರ್ಷದ ನಂತರ | | |
| ನಕುಲ ಸಹದೇವರ ಜನನ (ಪಾಂಡು, ಮಾದ್ರಿ) | ಅಶ್ವಿನಿ ದೇವತೆಗಳು | 105 ವರ್ಷ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ವಪನ ಮಾಡಿದಾಗ ಕೆಲ ಮುನಿಗಳು ತಿತ್ತಿರಿ ಪಕ್ಷಿ ರೂಪದಿಂದ ಗ್ರಹಿಸಿದರು. ಅನೇಕ ರಾಜರೊಂದಿಗೆ ಸಂವಾದ ಮಾಡಿದ್ದರು. |
| – | ಯದುವಂಶಜ. ಯುದ್ಧದಲ್ಲಿ ದ್ರೋಣರಿಂದ ಹತನಾದ. |
| ಪ್ರತಿವಿಂಧ್ಯ, ಯೌಧೇಯ ಸುಹೋತ್ರ | ಹಿಮವತ್ಪರ್ವತದಲ್ಲಿ ಯಮನ ಮೂಲಕ ಜನನ. ಶ್ರೇಷ್ಠ ಧರ್ಮಾತ್ಮ. ಅಜಾತಶತ್ರು. ಸತ್ಯವಾದಿ ಇತ್ಯಾದಿಯಾಗಿ ಆಕಾಶವಾಣಿಯಾಯಿತು. ಶತಶೃಂಗರು ನಾಮಕರಣ ಸಂಸ್ಕಾರಮಾಡಿದರು. ಕುಂತಿ ಜ್ಯೇಷ್ಠಪುತ್ರನಾದ ಇವನಿಗೆ ಕಾಶ್ಯಪರು ಉಪನಯನ ಸಂಸ್ಕಾರ ಮಾಡಿದರು. ಶುಕಾಚಾರ್ಯರಿಂದ ಬಾಲ್ಯದಲ್ಲಿ ವಿದ್ಯಾಭ್ಯಾಸವಾಯಿತು. ಪಾಂಡುವಿನ ಮರಣಾನಂತರ ಕುಂತಿ ಎಲ್ಲ ಮಕ್ಕಳನ್ನು ಅಲ್ಲಿಯ ಮುನಿಗಳ ಆದೇಶದಂತೆ ಹಸ್ತಿನಾಪುರಕ್ಕೆ ಕರೆತಂದಳು. ಧೃತರಾಷ್ಟ್ರನಿಗೆ ಭೀಷ್ಮವ್ಯಾಸರು ಒಪ್ಪಿಸಿದರು. ಕೃಪಾಚಾರ್ಯರಲ್ಲಿ ಬಾಲ್ಯದಲ್ಲಿ ಶಸ್ತ್ರಶಾಸ್ತ್ರ ವಿದ್ಯಾಭ್ಯಾಸ, ನಂತರ ದ್ರೋಣಾಚಾರ್ಯರಲ್ಲಿ ವಿದ್ಯಾಭ್ಯಾಸ ಪ್ರಾರಂಭ. ಧೃತರಾಷ್ಟ್ರನಿಂದ ಯೌವರಾಜ್ಯಾಭಿಷೇಕವಾಯಿತು. ದುರ್ಯೋಧನಾದಿಗಳು ಭೀಮನಿಗೆ ಕೊಡುತ್ತಿದ್ದ ಕಾಟಗಳಿಗೆ ಮರುಗುತ್ತಿದ್ದ. ತನ್ನ ನಿಷ್ಠೆ ಸತ್ಯವಾದಿ, ಪ್ರಜಾಸಂರಕ್ಷಣೆ ಮೊದಲಾದ ಕಾರ್ಯಗಳಿಂದ ತಂದೆಯ ಕೀರ್ತಿಗೂ ಮಿಗಿಲಾಯಿತು. ಸಹಿಸದ ದುರ್ಯೋಧನ ಇವರನ್ನು ವಾರಣಾವತಕ್ಕೆ ಕಳುಹಿಸಿದ. ಲಾಕ್ಷಾಗೃಹದ ಒಳಸಂಚನ್ನು ಭೀಮನು ತಿಳಿದು ಅಲ್ಲಿಂದ ಪಾರಾದರು. ಹಿಡಂಬವನದಲ್ಲಿ ಕುಂತಿ ಹಾಗೂ ಇವನು ಭೀಮನಿಗೆ ಹಿಡಿಂಬೆಯೊಂದಿಗೆ ವಿವಾಹವಾಗಲು ಅನುಮತಿಕೊಟ್ಟರು. ಏಕಚಕ್ರನಗರದಲ್ಲಿ ಬ್ರಾಹ್ಮಣವೇಷದಿ ಯುಧಿಷ್ಠಿರಾದಿಗಳಿದ್ದರು. ಭೀಮನನ್ನು ಬಕನ ಬಾಯಿಗೆ ಕಳಿಸಲು ಕುಂತಿಯೊಂದಿಗೆ ಸಮಾಲೋಚನೆ ಹಾಗೂ ಪರಿತಾಪ. ಕುಂತಿಯ ಮಾತಿನಂತೆ ಪಾಂಚಾಲದೇಶಕ್ಕೆ ಹೋದರು. ಕುಂಬಾರನ ಮನೆಯಲ್ಲಿದ್ದ ಯುಧಿಷ್ಠಿರನನ್ನು ಕೃಷ್ಣಬಲರಾಮರು ಸಂಧಿಸಿದರು. ದ್ರೌಪದಿಯ ವಿವಾಹವು ಐದು ಪಾಂಡವರೊಂದಿಗೆ ಉಚಿತವೆಂದು ವೇದವ್ಯಾಸರು ದ್ರುಪದನಿಗೆ ಅರ್ಥೈಸಿದರು. ದ್ರೌಪದಿಯಲ್ಲಿದ್ದ ಇತರ ಕನ್ಯೆಯರ ಪರಿಚಯ ಮಾಡಿಸಿದರು. ದ್ರೌಪದಿ ಪಾಂಡವರ ರಾಣಿಯಾದಳು. ಎಲ್ಲರೂ ಹಸ್ತಿನಾವತಿಗೆ ಹಿಂತಿರುಗಿ ಧೃತರಾಷ್ಟ್ರನಿಂದ ಅರ್ಧರಾಜ್ಯ ಪಡೆದು ಇವನೆ ರಾಜನಾದ. ನಾರದರ ಮಾತಿನಂತೆ ಧರ್ಮರಾಜಾದಿಗಳು ದ್ರೌಪದಿಯೊಂದಿಗೆ ಒಂದೊಂದು ವರುಷವಿದ್ದರು. ಧರ್ಮಜ ಪ್ರತಿವಿಂಧ್ಯನೆಂಬ ಮಗನನ್ನು ಪಡೆದ. ಕೃಷ್ಣ ವಿಶ್ವಕರ್ಮನಿಂದ ಇಂದ್ರಪ್ರಸ್ಥ ನಗರವನ್ನು ನಿರ್ಮಿಸಿ ಇವನನ್ನು ರಾಜನನ್ನಾಗಿಸಿದ. ಮಯನಿಂದ ದಿವ್ಯ ಸಭೆ ನಿರ್ಮಾಣವಾಯಿತು. ರಾಜಸೂಯಯಾಗ ಮಾಡಲು ಭೀಮನೊಂದಿಗೆ ಸಮಾಲೋಚನೆ ಮಾಡಿದ. ಕೃಷ್ಣನ ಅನುಗ್ರಹವನ್ನು ಹೆಜ್ಜೆ ಹೆಜ್ಜೆಗೂ ಅಪೇಕ್ಷಿಸಿದುದು. ಯುಧಿಷ್ಠಿರ ಯಜ್ಞ ದೀಕ್ಷಿತನಾದ. ಭೀಷ್ಮಾದಿಗಳ ಮಾತಿನಂತೆ ಕೃಷ್ಣನಿಗೆ ಅಗ್ರಪೂಜೆ ಮಾಡಿದ. ಸಾರ್ಮಾಟನೆಂದೆನಿಸಿದ. ವೈಭವವನ್ನು ಸಹಿಸದ ದುರ್ಯೋಧನ ಇವನನ್ನು ಜೂಜಾಟಕ್ಕೆ ಧೃತರಾಷ್ಟ್ರನ ಮೂಲಕ ಆಹ್ವಾನಿಸಿದ. ಜೂಜಿಗೆ ಇಲ್ಲವೆನ್ನದೆ ಯುಧಿಷ್ಠಿರ ಒಪ್ಪಿದ. ಶಕುನಿಯೊಂದಿಗೆ ಆಡಿ ಎಲ್ಲವನ್ನು ಕಳೆದುಕೊಂಡ. ದ್ರೌಪದಿಯನ್ನು ಪಣದಲ್ಲಿ ಸೋತು ವಸ್ತ್ರಾಪಹರಣದಂತಹ ದುರಂತವೂ ಸಂಭವಿಸಿತು. ಭೀಮಾರ್ಜುನಾದಿಗಳ ಪ್ರತಿಜ್ಞೆ. ಧರ್ಮಜ ಎರಡನೆಯ ಸಲ ಅನುಜ್ಯೂತದಲ್ಲಿ ಮತ್ತೆ ಎಲ್ಲವನ್ನೂ ಸೋತು ವನವಾಸ ಅಜ್ಞಾತವಾಸಕ್ಕೆ ಸಿದ್ಧನಾದ. ಸೂರ್ಯನನ್ನು ಆರಾಧಿಸಿ ಅಕ್ಷಯಪಾತ್ರೆ ಪಡೆದ. ವನದಲ್ಲಿದ್ದರೂ ಇವನು ಋಷಿಬ್ರಾಹ್ಮಣರ ಪರಿವಾರದಿಂದಿದ್ದ. ವನದಲ್ಲಿದ್ದಾಗ ದ್ರೌಪದಿಯಿಂದ ನಂತರ ಭೀಮನಿಂದ ಉಪದೇಶ ಪಡೆದು ಮುಂದೆ ನಡೆಯುವ ಮಹಾಯುದ್ಧಕ್ಕೆ ಸಿದ್ಧನಾದ. ತೀರ್ಥಯಾತ್ರೆ ಮಾಡಿದ. ನಾರದರು, ಮಾರ್ಕಾಂಡೇಯ, ಧೌಮ್ಯ, ಲೋಮಶರು, ಬೃಹದಶ್ವ, ದಾಲ್ಭ್ಯ, ಕೃಷ್ಣ ವೇದವ್ಯಾಸ ಮುಂತಾದವರಿಂದ ಉಪದೇಶ ಪಡೆದ. ಅಜಗರ ರೂಪದ ನಹುಷನ ಪ್ರಶ್ನೆಗಳಿಗೆ ಉತ್ತರ ಕೊಟ್ಟ. ಯಕ್ಷನ ಪ್ರಶ್ನೆಗಳಿಗೆ ಉತ್ತರಿಸಿ ಅನುಜರನ್ನು ಬಿಡಿಸಿದ. ಭೀಮನಿಂದ ಬಂಧಿತನಾದ ಜಯದ್ರಥನನ್ನು ಬಿಡಿಸಿದ. ಹೀಗೆ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|

## ಕಲಿಯುಗದ ಶಕಪುರುಷರು

ಯುಧಿಷ್ಠಿರೋ ವಿಕ್ರಮ ಶಾಲಿವಾಹನೌ
ತತೋ ನೃಪಃ ಸ್ಯಾತ್ ವಿಜಯಾಭಿನಂದನಃ।
ತತಸ್ತು ನಾಗಾರ್ಜುನ ಭೂಪತಿಃ ಕಲಿಃ
ಕಲಿಯುಗೇ ಷಟ್ ಶಕಕಾಲ ವರ್ಧಕಾಃ ॥

| | | | | |
|---|---|---|---|---|
| 1. | ಯುಧಿಷ್ಟಿರ ಶಕ | : | 3044 ವರ್ಷಗಳವರೆಗೆ | |
| 2. | ವಿಕ್ರಮಶಕ (ಸಂವತ್‌ಶಕ) | : | 135 | " |
| 3. | ಶಾಲಿವಾಹನಶಕ | : | 18000 | " |
| 4. | ವಿಜಯಶಕ | : | 10,000 | " |
| 5. | ನಾಗಾರ್ಜುನ ಶಕ | : | 400,000 | " |
| 6. | ಕಲಿಶಕ | : | 821 | " |

ಕಲಿಯುಗದ ಆಯುಃ ಪ್ರಮಾಣ: [illegible]2,000

ಶಾಲಿವಾಹನಕ್ಕೆ 78 ಕೂಡಿಸಿದರೆ ಈಗಿನ ಇಸವಿ ಬರುತ್ತದೆ.

ವಿಕ್ರಮ ಶಕದಿಂದ 57 ಕಳೆದರೆ ಈಗಿನ ಇಸವಿ ಬರುತ್ತದೆ.

ವಿಕ್ರಮಶಕ ರುದಿರೋದ್ಗಾರಿ ಸಂ. ಕಾರ್ತೀಕ ಪ್ರತಿಪದಾದಂದ ಪ್ರಾರಂಭವಾಯಿತು.

ಶಾಲಿವಾನಶಕ ಬಹುಧಾನ್ಯಸಂ. ಚೈತ್ರ ಶುದ್ಧ ಪ್ರತಿಪದಾದಿಂದ ಪ್ರಾರಂಭವಾಯಿತು.

| | | | | | | |
|---|---|---|---|---|---|---|
| ಯುಧಾ ಮನ್ಯು | ವಿಶ್ವಾವಸು | ಧಾತೃ. | ದ್ವಾ. | ಮ.ಭಾ. | ದ್ರುಪದ | - |
| ಯುವನಾಶ್ವ | ಅರಸು | -- | ತ್ರೇ. | ಭಾಗವತ | ಸೇನಜಿತ್ | 100 ಪತ್ನಿಯರು |

ವನವಾಸ ಮುಗಿಸಿ ಅಜ್ಞಾತವಾಸಕ್ಕೆಂದು ವಿರಾಟನಗರಕ್ಕೆ ಹೋದರು. ಅಜ್ಞಾತವಾಸದಲ್ಲಿ ಕಂಕ ಎಂಬ ಹೆಸರಿನಿಂದ ಯತಿವೇಷ ದಲ್ಲಿ ವಿರಾಟರಾಜನಿಗೆ ಆಪ್ತನಾಗಿದ್ದ. ಜಯ ಎಂಬ ಗೂಢನಾಮವಿತ್ತು. ಕಾಮುಕ ಕೀಚಕನ ಸಂಹಾರದ ನಂತರ ದುರ್ಯೋಧನಾದಿಗಳು ಗೋಗ್ರಹಣ ನೆಪದಲ್ಲಿ ಯುದ್ಧಕ್ಕೆ ಬಂದಾಗ ಉತ್ತರ ಕುಮಾರ ಕೌರವರನ್ನು ಗೆದ್ದುದಾಗಿ ವಿರಾಟ ಹೇಳಲು ನಿರಾಕರಿಸಿ ಬೃಹನ್ನಳೆ ಕಾರಣ ಎಂದು ಪ್ರತಿಪಾದಿಸಿದ. ಕೃದ್ಧನಾದ ವಿರಾಟ ಆಡುತ್ತಿದ್ದ ದಾಳದಿಂದ ಯುಧಿಷ್ಠಿರನ ಹಣೆಗೆ ಹೊಡೆಸಿಕೊಂಡ. ಇದನ್ನು ಕಂಡ ಸೈರಂಧ್ರಿ ರಕ್ತವು ನೆಲಕ್ಕೆ ಬೀಳದಂತೆ ಸೀರೆಯ ಸೆರಗಿನಿಂದ ಒರೆಸುವಳು. ಮರುದಿನ ವಿರಾಟನ ಸಿಂಹಾಸನದ ಮೇಲೆ ಧರ್ಮಜ ದ್ರೌಪದಿ ಸಹೋದರರೊಂದಿಗೆ ರಾಜವೇಷದಲ್ಲಿ ಕೂತು ತಾವು ಯಾರೆಂದು ನಿರೂಪಿಸಿದರು. ದುರ್ಯೋದನನ ಅವಧಿ ಮುಗಿದಿಲ್ಲವೆನ್ನಲು ಯುಧಿಷ್ಠಿರ ಭೀಷ್ಮರ ಮೂಲಕ ಸಂದೇಹ ಬಗೆಹರಿಸಿದ. ಸಂಧಿ ಗಾಗಿ ಕೃಷ್ಣನನ್ನು ಬೇಡಿದ. ಸಂಧಿ ಮುರಿದ ಕಾರಣ ಯುದ್ಧಕ್ಕೆ ಸನ್ನದ್ಧನಾದ. ಇದಕ್ಕೆ ಕೃಷ್ಣ ಒತ್ತಾಯಿಸಿದ. ದೃಷ್ಟದ್ಯುಮ್ನನನ್ನು ಸೇನಾಧಿಪತಿಯಾಗಿ ನೇಮಿಸಿದ. ಕುರುಕ್ಷೇತ್ರದಲ್ಲಿ ರಥದಿಂದ ಇಳಿದು ಧರ್ಮಜ ಪಾದ ಚಾರಿಯಾಗಿ ಕೌರವರ ಸೈನ್ಯದೆಡೆಗೆ ಹೊರಟಾಗ ಎಲ್ಲರಿಗೂ ಆಶ್ಚರ್ಯವಾಯಿತು. ಭೀಷ್ಮದ್ರೋಣಾದಿಗಳಿಂದ ಜಯಶೀಲನಾಗಲು ಆಶೀರ್ವಾದ ಪಡೆದು ಬಂದ. ಕೃಷ್ಣನೊಂದಿಗೆ ಸಮಾಲೋಚಿಸಿ ಭೀಷ್ಮರ ವಧೆಯ ಬಗ್ಗೆ ತಿಳಿದದ್ದು. ದ್ರೋಣರ ಅವಸಾನದ ಸಮಯದಲ್ಲಿ ಕೃಷ್ಣನ ಹೇಳಿದರೂ ಅಶ್ವತ್ಥಾಮೋಹತಃ ಎನ್ನದೆ ಕುಂಜರಃ ಎಂದುದಕ್ಕೆ ಭೀಮನ ತಂತ್ರ. ಇಷ್ಟರಲ್ಲೊಮ್ಮೆ ಯುಧಿಷ್ಠಿರ ಅರ್ಜುನನೊಂದಿಗೆ ಮುನಿಸಿಕೊಂಡದ್ದು. ಕೃಷ್ಣ ಸಂತೈಸಿ ಇಬ್ಬರನ್ನೂ ಕಾಪಾಡಿದ. ಯುದ್ಧದಲ್ಲಿ ಅಭಿಮನ್ಯು, ಘಟೋತ್ಕಚರ ಸಾವಿನಿಂದ ಪರಿತಪಿಸಿದ. ಶಲ್ಯನ ಸೋದರರನ್ನು ಶಲ್ಯನನ್ನು ಸಂಹರಿಸಿದ. ಮಡುವಿನಲ್ಲಿ ಅಡಗಿದ್ದ ದುರ್ಯೋಧನನಿಗೆ ಬೈದದ್ದು. ನೆಲಕ್ಕೆ ಬಿದ್ದ ದುರ್ಯೋಧನನಿಗೆ ಸಾಂತನ ಹೇಳಿದ. ಅಶ್ವತ್ಥಾಮನ ತಲೆಯಿಂದ ಕಿತ್ತಿದ ಜೀವಮಣಿಯನ್ನು ದ್ರೌಪದಿ ಇವನಿಗಿತ್ತಳು.ಯುದ್ಧ ಸಮಾಪ್ತಿ ನಂತರ ಕೃಷ್ಣ ಹಾಗೂ ಸೋದರರೊಂದಿಗೆ ಧೃತರಾಷ್ಟ್ರ ಹಾಗೂ ಗಾಂಧಾರಿ ಹತ್ತಿರ ಹೋದ. ಯುದ್ಧದಲ್ಲಿ ಮಡಿದವರಿಗೆ ಸುಡಲು ಹೇಳಿದ. ಕುಂತಿಯಿಂದ ಕರ್ಣ ತನ್ನ ಅಣ್ಣನೆಂದು ತಿಳಿದು ಕುಪಿತನಾದ. ಸತ್ತವರಿಗೆಲ್ಲಾ ತರ್ಪಣಾದಿಗಳನ್ನು ಕೊಟ್ಟ, ಧರ್ಮರಾಜನಿಗೆ ವೇದವ್ಯಾಸ - ಕೃಷ್ಣರಿಂದ ಪಟ್ಟಾಭಿಷೇಕ, ಭೀಮ ಯುವರಾಜನಾದ. ಯುದ್ಧದಿಂದ ಬೇಸತ್ತಿದ್ದ ಯುಧಿಷ್ಠಿರನನ್ನು ಕೃಷ್ಣ ಭೀಷ್ಮರ ಬಳಿಗೆ ಕರೆದೊಯ್ದು ಧಾರ್ಮಿಕ, ರಾಜನೀತಿ ಹೀಗೆ ಅನೇಕ ವಿಷಯಗಳನ್ನು ತಿಳಿಸಿದ. ವ್ಯಾಸ ವಿದುರರಿಂದಲೂ ಉಪದೇಶವಾಯಿತು. ವ್ಯಾಸರ ಸೂಚನೆಯಂತೆ ಅಶ್ವಮೇಧಯಾಗಮಾಡಲು ಒಪ್ಪಿದ. ಹಿಂದೆ ಮರುತ್ತರಾಜ ಹಿಮವತ್ಪರ್ವತದಲ್ಲಿ ಹೂತಿಟ್ಟಿದ್ದ ಧನದ ನಿಧಿಯನ್ನು ವ್ಯಾಸರೇ ಧರ್ಮಜಗೆ ಹೇಳಿ ತರಿಸಿದರು. 15 ವರ್ಷಕಾಲ ಅಶ್ವಮೇಧಯಾಗ ಮಾಡಿದ. ಅದ್ಭುತ ರೀತಿಯಲ್ಲಿ ಸತ್ಯಧರ್ಮಗಳಿಗೆ ಚ್ಯುತಿ ಬಾರದಂತೆ ಪ್ರಜಾಪಾಲನೆ ಮಾಡಿದ. ದುಃಖದಿಂದ ಧೃತರಾಷ್ಟ್ರ ಗಾಂಧಾರಿ ಕುಂತಿಯರನ್ನು ಅರಣ್ಯಕ್ಕೆ ಕಳಿಸಿದ. ಅವರು ಇಹಲೋಕ ತ್ಯಜಿಸಿದ ಮೇಲೆ ಅಂತ್ಯಕ್ರಿಯೆಗಳನ್ನು ಮಾಡಿದ. ಒಟ್ಟು 36 ವರ್ಷ ರಾಜ್ಯವಾಳಿ ಪರೀಕ್ಷಿತನಿಗೆ ರಾಜ್ಯದ ಪಟ್ಟಕಟ್ಟಿ, ಯಯುತ್ಸುವಿಗೆ ರಾಜ್ಯಭಾರ ಒಪ್ಪಿಸಿ ಪಾಂಡವರು ದ್ರೌಪದಿಯೊಂದಿಗೆ ಮಹಾಪ್ರಸ್ಥಾನಕ್ಕೆ ಹೊರಟರು. ಕಡೆಗೆ ಧರ್ಮರಾಜ ನಾಯಿಯೊಂದಿಗೆ ಸ್ವರ್ಗಕ್ಕೆ ಹೋಗುವುದಾಗಿ ಅಂದ. ನರಕದರ್ಶನದ ನಂತರ ಸ್ವರ್ಗಕ್ಕೆ ಹೋಗಿ ಅಲ್ಲಿ ಎಲ್ಲ ಸಹೋದರರನ್ನು ಕಂಡ. ಯಮನ ಅವತಾರಿಯಾದ ಧರ್ಮರಾಜ ಧರ್ಮದ ಸಂಕೇತ. ಮಹಾಭಾರತದಲ್ಲಿ ವಿಶಿಷ್ಟಪಾತ್ರ ಇವನದು.

| | |
|---|---|
| – | ಗಂಧರ್ವ, ವೀರ, ಪಾಂಡವರ ಪಕ್ಷವಹಿಸಿ ಯುದ್ಧ ಮಾಡಿದ. ಕಡೆಯ ರಾತ್ರಿ ಶಿಬಿರದಲ್ಲಿ ಮಲಗಿದ್ದಾಗ ಅಶ್ವತ್ಥಾಮರಿಂದ ಮಡಿದ. |
| ಮಾಂಧಾತ. ಶ್ರಾವಸ್ತ | ಸೂರ್ಯವಂಶಜ. ಅನೇಕ ಯಜ್ಞಗಳನ್ನಾಚರಿಸಿದ. ಮಕ್ಕಳಿರಲಿಲ್ಲ. ಸಾವಿರ ಅಶ್ವಮೇಧಯಾಗ ಮಾಡಿದ. ಬಾಯಾರಿಕೆ ಯಿಂದ ಅಭಿಮಂತ್ರಿಸಿದ ನೀರನ್ನು ಕುಡಿದು ಗರ್ಭಧರಿಸಿ ಮಾಂಧಾತನನ್ನು ಹಡೆದ. ಇವನಿಗೆ ದೈವತನಿಂದ ಖಡ್ಗ ಸಿಕ್ಕಿತು. ಮಾಂಸಾಹಾರವನ್ನು ನಿಷೇಧಿಸಿದ್ದ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಯಯುತ್ಸು | ನಿರ್ಋತಿ | ನಾಸಿಕ್ಯವಾಯು | ದ್ವಾ. | ಮ.ಭಾ. | ಧೃತರಾಷ್ಟ್ರ ವೈಶ್ಯಕನ್ಯೆ | – |
| ಯುಯುಧಾನ | ಯಾದವ | ಗರುಡ | ದ್ವಾ. | ಮ.ಭಾ. | ಸತ್ಯಕ | ಸರಸ್ವತಿ |
| ಯೌವನಾಶ್ವ | ಸಾಮ್ರಾಟ (ಮಾಂಧಾತ) | -- | ತ್ರೇ. | ಭಾಗವತ | ಯುವನಾಶ್ವ | ಬಿಂದುಮತಿ |
| ರಘು | ಚಕ್ರವರ್ತಿ | -- | ತ್ರೇ. | ರಾ. | ಖಟ್ವಾಂಗ | – |
| ರಜಿ | ಚಕ್ರವರ್ತಿ | -- | ದ್ವಾ. | ಮ.ಭಾ. | ಆಯು,ಸ್ವರ್ಭಾನು | - |
| ರತಿ | ದೇವತೆ | -- | – | ಭಾಗವತ | ದಕ್ಷ | ಮನ್ಮಥ |
| ರಂಭಾ | ಅಪ್ಸರೆ | -- | ದ್ವಾ. | ಮ.ಭಾ. | ಕಶ್ಯಪ, ಪ್ರಾಧೆ | – |
| ರಂತಿದೇವ | ಅರಸು | ಕ್ಷತ್ರಿಯ | ದ್ವಾ. | ಮ.ಭಾ. | ಸಂಕೃತಿ | – |
| ರಾಜಾಧಿದೇವಿ | ರಾಣಿ | -- | – | – | ಶೂರರಾಜ, ಮಾರಿಕ್ಷಿ | ಜಯಸೇನ |
| ರಾಧಾ | ಯಾದವಳು | -- | ದ್ವಾ. | ಮ.ಭಾ. | ವೃಷಭಾನು ಕಳಾವತಿ | – |
| ರಾಮ | ಚಕ್ರವರ್ತಿ | ಮಹಾವಿಷ್ಣು | ತ್ರೇ. | ರಾ. | ದಶರಥ, ಕೌಸಲ್ಯ | ಸೀತಾದೇವಿ (ಮಹಾಲಕ್ಷ್ಮಿ) |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| - | ಧೃತರಾಷ್ಟ್ರನಿಂದ ವೇಶ್ಯೆಯಲ್ಲಿ ಹುಟ್ಟಿದ. ಇವನನ್ನು ಕರಣ ಎಂದೂ ಕರೆಯುತ್ತಿದ್ದರು. ಹರಿಭಕ್ತ, ಧರ್ಮಿಷ್ಠ ಪರಾಕ್ರಮಿ ಯುದ್ಧದಲ್ಲಿ ಪಾಂಡವರ ಪರವಾಗಿ ಹೋರಾಡಿದ. ಯುದ್ಧ ನಂತರವೂ ಉಳಿದವ. ಧೃತರಾಷ್ಟ್ರನ ಸೇವೆ ಮಾಡಿದ. ಧರ್ಮಜ ಇವನನ್ನು ಪರೀಕ್ಷಿತನೊಂದಿಗೆ ರಾಜ್ಯಭಾರ ಮಾಡಲು ನಿಯೋಜಿಸಿದ. |
| 10 ಪುತ್ರರು | ಸಾತ್ಯಕಿ ನಾಮಂತರ. ಯದುವಂಶಜ. ಪರಾಕ್ರಮಿ, ಸಂವಹನ ಮರುತ್ತಿನ ಅಂಶಜನು. ಯುದ್ಧದಲ್ಲಿ ಇವನ ಮಕ್ಕಳನ್ನು ಭೂರಿಶ್ರವ ಕೊಂದು ಹಾಕಿದ. ಅವನ ತಲೆಯನ್ನು ಇವನು ತೆಗೆದ. ದೈವಭಕ್ತ. |
| ಪುರುಕುತ್ಸ, ಅಂಬರೀಷ, ಮುಚಕುಂದ 50 ಪುತ್ರಿಯರು | ಸೂರ್ಯವಂಶಜ. ತಂದೆಯ ಉದರದಿಂದ ಹುಟ್ಟಿಬಂದವ. ಇಂದ್ರನ ಹೆಬ್ಬೆರಳನ್ನು ಚೀಪಿ ಮಾಂಧಾತ ನೆನಿಸಿದ. ಇವನನ್ನು ಕಂಡು ರಾವಣಾದಿಗಳೂ ಹೆದರಿದ್ದರು. 50 ಪುತ್ರಿಯರನ್ನು ಸೌಭರಿ ಋಷಿಗಳಿಗೆ ಕೊಟ್ಟು ಮದುವೆ ಮಾಡಿದ. |
| ಅಜ | ಸೂರ್ಯವಂಶಜ, ಮಹಾಪರಾಕ್ರಮಿ, ವಿಶ್ವಜಿತ್ ಯಾಗವನ್ನು ಮಾಡಿದವನು. ಸರ್ವಸ್ವವನ್ನೂ ದಾನ ಮಾಡಿದ. ಇವನ ಆಳ್ವಿಕೆಯಲ್ಲಿ ರಾಜ್ಯದಲ್ಲಿ ಚಿನ್ನದ ಮಳೆಯಾಯಿತು. ಇವನ ವಂಶದಲ್ಲೇ ರಾಮಚಂದ್ರ ಅವತರಿಸಿದ. |
| 500 ಮಕ್ಕಳು | ಚಂದ್ರವಂಶಜ, ನಹುಷಾದಿಗಳ ಸೋದರ. ದೇವದಾನವರ ಯುದ್ಧದಲ್ಲಿ ಇಂದ್ರನ ಪರವಾಗಿ ಹೋರಾಡಿ ಇಂದ್ರನನ್ನು ಗೆಲ್ಲಿಸಿದ. ಸ್ವರ್ಗಕ್ಕೆ ಅಧಿಪತಿಯಾದ. ಇವನ ಮಕ್ಕಳು ಇಂದ್ರನಿಂದ ಹತರಾದರು. ನಹುಷ, ವೃದ್ಧಶರ್ಮ, ಗಯ ಮತ್ತು ಅನೇನಾ ಇವರ ಸೋದರರು. |
| - | ಲೋಕಸುಂದರಿ. ಕಾಮನ ನಿಯತ ಪತ್ನಿ. ದಕ್ಷನ ಸ್ವೇದದಿಂದ ಜನನ. |
| - | ಸ್ವರ್ಗಲೋಕದ ಮುಖ್ಯ ಅಪ್ಸರೆಯರಲ್ಲಿ ಒಬ್ಬಳು. ದೇವಲೋಕಗಳಲ್ಲಿ ನರ್ತಿಸುವ ಸುಂದರಿ. ತುಂಬುರರ ಮಡದಿಯಾಗಿದ್ದಳು. ಒಮ್ಮೆ ವಿಶ್ವಾಮಿತ್ರರಿಂದ ಶಾಪಪಡೆದು ಕಲ್ಲಾಗಿದ್ದಳು. ಅರ್ಜುನ ಸ್ವರ್ಗಕ್ಕೆ ಹೋದಾಗ ಸ್ವಾಗತಿಸಿದಳು. ಕುಬೇರನ ಸಭೆಯ ನರ್ತಕಿ. ನಲಕೂಬರರೊಂದಿಗಿದ್ದಳು. |
| - | ಚಂದ್ರವಂಶಜ. ಅನೇಕ ಯಾಗಗಳನ್ನು ಮಾಡಿದ. ದಾನಶೂರ. ಇವನು ಯಾಗಕ್ಕಾಗಿ ಕೊಂದ ಪಶುಗಳ ಚರ್ಮದಿಂದ ಚರ್ಮಣ್ವತಿ ಎಂಬ ನದಿಯು ಹರಿಯಿತು. ಎಲ್ಲವನ್ನೂ ಕಳೆದುಕೊಂಡು ಹೆಂಡತಿ ಮಕ್ಕಳ ಸಮೇತ ಅರಣ್ಯ ಸೇರಿ ತಪಸ್ಸನ್ನಾಚರಿಸಿದ. ಎಲ್ಲರಿಗೂ 48 ದಿನಗಳ ಕಾಲ ಉಪವಾಸವಾಯಿತು. 49ನೇ ದಿನ ಸಿಕ್ಕ ದೇವಲೋಕದ ಭೋಜನವೂ ದಾನವಾಗಿ ಕೊಟ್ಟು ಇವನಿಗಿಲ್ಲವಾಯಿತು. ಕಡೆಗೆ ಇದ್ದ ನೀರನ್ನೂ ಭಗವಂತನ ಪ್ರೀತ್ಯರ್ಥ ಕೊಟ್ಟ. ಕಡೆಗೆ ಬ್ರಹ್ಮಾದಿದೇವತೆಗಳ ಅನುಗ್ರಹದಿಂದ ಉದ್ಧಾರನಾದ. ಇವನೊಬ್ಬ ತ್ಯಾಗಿ. ಜಗತ್ತಿನ ಎಲ್ಲರ ದುಃಖವು ನನಗಿರಲೆಂದು ಬಯಸಿದವನು. ಎಲ್ಲರ ಸುಖ ಜೀವನಕ್ಕೆಂದು ಅವನ ಜೀವನ ಮುಡುಪಾಗಿಟ್ಟವನು. |
| ಮಿತ್ರವಿಂದಾ, ವಿಂದ ಅನುವಿಂದ | ವಸುದೇವನ ಒಡಹುಟ್ಟಿದವಳು. ಕೃಷ್ಣನ ಅತ್ತೆ. ಆವಂತಿ ಅರಸನ ಮಡದಿ. |
| - | ಕೃಷ್ಣ ಗೋಕುಲದಲ್ಲಿದ್ದಾಗ ಪ್ರಿಯ ಸಖಿಯರಲ್ಲಿ ಒಬ್ಬಳಾಗಿದ್ದಳು. (ಕರ್ಣನ ಸಾಕುತಾಯಿಯ ಹೆಸರು) |
| ಲವ, ಕುಶ | ಸರ್ವೋತ್ತಮನಾದ ಶ್ರೀಹರಿ ಧರ್ಮಸಂಸ್ಥಾಪನೆಗಾಗಿ, ಬ್ರಹ್ಮಾದಿದೇವತೆಗಳ ಪ್ರಾರ್ಥನಾನುಸಾರವಾಗಿ ಭೂಲೋಕದಲ್ಲಿ ಮನುಷ್ಯರೂಪದಿಂದ ಅವತರಿಸಿ ಬಂದನು. ತನ್ನ ಹತ್ತು ಅವತಾರಗಳಲ್ಲಿ ಏಳನೆಯದು. ಸೂರ್ಯವಂಶಜನಾದ ಅಯೋಧ್ಯಾಧಿಪತಿ ದಶರಥ ಮಹಾರಾಜ ಪುತ್ರಕಾಮೇಷ್ಟಿಯಾಗ ಮಾಡಲು ಹಿರಿಯ ರಾಣಿ ಕೌಸಲ್ಯೆಯಲ್ಲಿ ಹಿರಿಯ ಮಗನಾಗಿ ಚೈತ್ರಶುದ್ಧ ನವಮಿಯಂದು ಅವತರಿಸಿದ. ಅದ್ಭುತ |

ಅವತಾರ ಯಾರು? ಅಂಶ/ಆವೇಶ ಕಾಲ ಪಾತ್ರ ತಂದೆ-ತಾಯಿ ಹೆಂ./ಗಂ.



| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|

ಬಾಲಲೀಲೆಗಳು. ವಿಶ್ವಾಮಿತ್ರರ ಯಜ್ಞ ರಕ್ಷಿಸಲು ರಾಮಲಕ್ಷ್ಮಣರು ಸಿದ್ಧಾಶ್ರಮಕ್ಕೆ ಹೋಗಿ ಪೀಡಿಸುತ್ತಿದ್ದ ತಾಟಕಿ ಸುಭಾಹುರನ್ನು ಸಂಹರಿಸಿ ಮಾರೀಚನನ್ನು ಸಮುದ್ರಕ್ಕೆ ಅಟ್ಟಿದ. ವಿಶ್ವಾಮಿತ್ರನಿಂದ ದಿವ್ಯಾಸ್ತ್ರಗಳನ್ನು ಪಡೆದು ದೇವತೆಗಳಿಗೆ ಅನುಗ್ರಹಿಸಿದ. ಸೀತಾಸ್ವಯಂವರ ವಾರ್ತೆಕೇಳಿ ಜನಕನ ಮಿಥಿಲೆಗೆ ಹೋದರು. ದಾರಿಯಲ್ಲಿ ಅಹಲ್ಯಾ ಉದ್ಧಾರವಾಯಿತು. ವಿಶ್ವಾಮಿತ್ರರಿಂದ ಅನೇಕ ಕಥೆಗಳನ್ನು ಕೇಳಿದರು. ಸ್ವಯಂವರದಲ್ಲಿ ಶಿವಧನುರ್ಭಂಗ ಮಾಡಿ ಲಕ್ಷ್ಮೀ ಅವತಾರಳಾದ ಸೀತೆಯನ್ನು ಮದುವೆಯಾದ. ಕೃದ್ಧರಂತೆ ತೋರಿದ ಪರಶುರಾಮರನ್ನು ನಿಗ್ರಹಿಸಿದ. 12 ವರ್ಷ ಕಾಲ ಸೀತೆಯೊಂದಿಗಿದ್ದ. ಕೈಕೇಯಿ ಮಂಥರೆಯ ಮಾತುಕೇಳಿ ರಾಮನ ಯೌವರಾಜ್ಯಾಭಿಷೇಕ ತಡೆದಳು. ತಂದೆಯ ಮಾತಿನಂತೆ ಹದಿನಾಲ್ಕುವರ್ಷ ವನವಾಸಕ್ಕೆ ತೆರಳಿದ. ಸೀತೆ ಲಕ್ಷ್ಮಣರೂ ಹಿಂಬಾಲಿಸಿದರು. ವನದಲ್ಲಿಯ ಋಷಿಮುನಿಗಳ ರಕ್ಷಣೆಗೆ ಉಪಟಳ ಕೊಡುತ್ತಿದ್ದ ಅಸುರರನ್ನು ಸಂಹರಿಸಲು, ರಾವಣಾದಿಗಳನ್ನು ನಿಗ್ರಹಿಸಿ ದೇವತೆಗಳಿಗೆ ಸುಜೀವಿಗಳಿಗೆ ಸುಖತಾರಲು ಈ ವನವಾಸದ ಕಾರ್ಯವಾಗಿತ್ತು. ರಾಮ ತಮಸಾನದಿಯನ್ನು ದಾಟಿ ಗಂಗಾತೀರಕ್ಕೆ ಗುಹನ ಆತಿಥ್ಯಕ್ಕೆ ಹೋದ. ಭಾರದ್ವಾಜಾಶ್ರಮದಿಂದ ಚಿತ್ರಕೂಟಕ್ಕೆ ಬಂದರು. ರಾಮಭರತರ ಸಂಯೋಗವಾಗಿ ದಶರಥನಿಗೆ ಉತ್ತರಕ್ರಿಯೆಗಳನ್ನು ಮಾಡಿ ರಾಜ್ಯಭಾರ ಮಾಡಲು ಆದೇಶಿಸಿ ತನ್ನ ಪಾದುಕೆಗಳನ್ನು ಕೊಟ್ಟ ಅತ್ರಿಮುನಿಗಳ ಆಶ್ರಮದಿಂದ ದಂಡಕಾರಣ್ಯಕ್ಕೆ ಬಂದದ್ದು, ಅಲ್ಲಿಯ ದುಷ್ಟ ರಾಕ್ಷಸರನ್ನು ಸಂಹರಿಸಿ ಅಗಸ್ತ್ಯಾಶ್ರಮಕ್ಕೆ ಬಂದು ಅಲ್ಲಿಂದ ಪಂಚವಟಿಯಲ್ಲಿ ಜಟಾಯುವನ್ನು ಸಂದಿಸಿ ಆಶ್ರಮನಿರ್ಮಿಸಿಕೊಂಡು ವಾಸಿಸಿದರು. ತನ್ನನ್ನು ಮೋಹಿಸಿ ಬಂದ ಶೂರ್ಪಣಖೆಯನ್ನು ಲಕ್ಷ್ಮಣ ವಿರೂಪಗೊಳಿಸಿದ. ಖರದೂಷಣ ತ್ರಿಶಿರರೊಂದಿಗೆ 14 ಸಾವಿರ ಅಸುರರ ವಧೆಯಾಯಿತು. ಸೀತೆಯ ಅಪೇಕ್ಷೆಯಂತೆ ರಾಮ ಮಾಯಾಮೃಗದ ರೂಪದ ಮಾರೀಚನನ್ನು ಕೊಂದ. ರಾವಣ ಮಾಯಾ ಸೀತೆಯನ್ನು ಅಪಹರಿಸಿದ. ನಿತ್ಯ ಅವಿಯೋಗಿನಿ ಯಾದ ಸೀತೆಗಾಗಿ ಪ್ರಲಾಪಿಸಿದ ರಾಮ. ರಾವಣನೊಂದಿಗೆ ಸಮರ ಗೈದ ಜಟಾಯುವಿನಿಂದ ವಿಷಯ ತಿಳಿದು ಅವನ ಸಂಸ್ಕಾರ ಮಾಡಿ ಹೊರಟ. ಹೀಗೆ ಕಬಂಧನಿಗೆ ಸದ್ಗತಿಕಾಣಿಸಿ ಶಬರಿಯನ್ನು ಉದ್ಧರಿಸಿದ. ಋಷ್ಯಮೂಕಪರ್ವತದಲ್ಲಿ ತನಗಾಗಿ ಕಾಯುತ್ತಿದ್ದ ಹನುಮಂತನನ್ನು ಕಂಡ. ಹನುಮಂತ ರಾಮಸುಗ್ರೀವರ ಮೈತ್ರಿ ಮಾಡಿಸಿದ. ಏಳುತಾಳವೃಕ್ಷಗಳನ್ನು ಭೇಧಿಸಿದ ರಾಮನ ಸಖ್ಯ ಸುಗ್ರೀವನಿಗೆ ಅಭಯ ತಂದು ವಾಲಿಯ ವಧೆಯಾಯಿತು. ಸುಗ್ರೀವನಿಗೆ ಪಟ್ಟ ಕಟ್ಟಿದ ರಾಮ ಸೀತಾನ್ವೇಷಣೆಗೆ ಸಿದ್ಧಪಡಿಸಿದ. ಹನುಮನಿಗೆ ಉಂಗುರವನ್ನಿತ್ತು ಹಾಗೆ ಲಂಕೆಯಲ್ಲಿದ್ದ ಸೀತೆಯಿಂದ ಚೂಡಾಮಣಿಯನ್ನು ಪಡೆದು ತಂದ ಹನುಮಂತನಿಗೆ ಸಹಭೋಗವನ್ನೆ ಕೊಟ್ಟ ರಾಮ ಹನುಮ ಸುಗ್ರೀವರು ವಾನರ ಪರಿವಾರ ದಕ್ಷಿಣ ಸಮುದ್ರ ತೀರಕ್ಕೆ ಹೋದರು. ಸಮುದ್ರದೇವನನ್ನು ಶಿಕ್ಷಿಸಿದ. ಸೇತುವೆ ಸಿದ್ಧವಾಯಿತು. ಲಂಕೆಯಿಂದ ಬಂದ ವಿಭೀಷಣ ನನ್ನು ಹನುಮನ ಮಾತಿನಂತೆ ಸ್ವಾಗತಿಸಿ ಲಂಕಾಧೀಶನನ್ನಾಗಿಸಿ ಅನುಗ್ರಹಿಸಿದ. ಎಲ್ಲರ ಲಂಕಾಪ್ರವೇಶ ವಾಯಿತು. ಸುವೇಲ ಪರ್ವತ ಮೇಲಿಂದ ಲಂಕಾ ಪಟ್ಟಣವನ್ನು ವೀಕ್ಷಿಸಿದ. ಕಪಿರೂಪದ ಅನುಚರರನ್ನುದ್ಧರಿ ಸಲು ಬೇಕಿಲ್ಲವಾದರೂ ಅವರ ಸಹಾಯ ಪಡೆದ. ಅಂಗದನನ್ನು ರಾವಣನ ಬಳಿಗೆ ದೂತನಾಗಿ ಕಳುಹಿಸಿದ. ಯುದ್ಧ ಪ್ರಾರಂಭವಾಯಿತು. ಧರ್ಮ-ಅಧರ್ಮ, ಸಾತ್ವಿಕ-ತಾಮಸರ ನಡುವೆಯಾದ ಮಹಾ ಯುದ್ಧವಾಗಿತ್ತು. ಅನೇಕ ಅಸುರರ ಸಂಹಾರವಾಯಿತು. ಇಂದ್ರಜಿತ್‌ವಿನ ಮಾಯಾಯುದ್ಧದಿಂದ ಅನೇಕ ಕಪಿಗಳು ಸತ್ತವು. ಲಕ್ಷ್ಮಣನೂ ಮೂರ್ಛಿತನಾದ. ಹನುಮಂತ ತಂದ ಸಂಜೀವಿನಿಯಿಂದ ಲಕ್ಷ್ಮಣನ ಜೊತೆಗೆ ಎಲ್ಲ ಸತ್ತವರು ಎದ್ದು ಬಂದರು. ಲಕ್ಷ್ಮಣನಿಂದ ಇಂದ್ರಜಿತ್ ಸತ್ತ. ರಾಮನಿಂದ ಕುಂಭಕರ್ಣ ಸತ್ತ. ರಾಮರಾವಣರ ಯುದ್ಧವನ್ನು ಬ್ರಹ್ಮಾದಿ ದೇವತಾವೃಂದ, ಅಸುರವೃಂದ ಆಕಾಶದಿಂದ ವೀಕ್ಷಿಸಿದರು. ಇಂದ್ರ ಕಳಿಸಿದ ರಥದಲ್ಲಿ ಕೂತ ರಾಮ ಕೋಟಿ ಕೋಟಿ ಬ್ರಹ್ಮರುದ್ರರಿಂದ ವರ ಪಡೆದ ರಾಕ್ಷಸರನ್ನು ಅನಾಯಾಸವಾಗಿ ಸಂಹರಿಸಿದ.

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ರಾವಣ | ಹಿರಣ್ಯಕಶಿಪು (ರಾಕ್ಷಸ) | ಜಯ | ತ್ರೇ. | ರಾ. | ವಿಶ್ರವಸ, ಪುಷ್ಪೋತ್ಕಟಿ (ಕೈಕಸಿ) | ಮಂಡೋದರಿ ಇನ್ನೂ ಅನೇಕರು |

ಶ್ರೀರಾಮಚಂದ್ರ ರಾಜ್ಯವನ್ನಾಳಿದ ಕಾಲ : ಹದಿಮೂರು ಸಾವಿರ ವರುಷ

ಶ್ರೀರಾಮಚಂದ್ರನ ಪ್ರತಿಜ್ಞೆ:

ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ॥ ವಾ.ರಾ (ಯು – 18.33)

ರಾಮಾಯಣದ ಕಾಲಾವಧಿ:

ಯಾವತ್ ಸ್ಥಾಸ್ಯಸ್ತಿ ಗಿರಯಃ ಸರಿತಶ್ಚ ಮಹೀತಲೇ ।
ತಾವದ್ರಾಮಾಯಣಕಥಾ ಲೋಕೇಷು ಪ್ರಚರಿಷ್ಯತಿ ॥

| | | | | | | |
|---|---|---|---|---|---|---|
| ರಾಹು | ರಾಕ್ಷಸ | -- | – | ಭಾಗವತ | ಕಶ್ಯಪ, ಸಿಂಹಿಕೆ | – |
| ರುಕ್ಮಿ | ಇಲ್ವಲ | ಕ್ರೋಧವಶ | ದ್ವಾ. | ಮ.ಭಾ. | ಭೀಷ್ಮಕ | – |
| ರುಕ್ಮಕೇಶ, ರುಕ್ಮಬಾಹು, ರುಕ್ಮಿಮಾಲ, ರುಕ್ಮರಥ | ಅಸುರರು | -- | ದ್ವಾ. | ಮ.ಭಾ. | ಭೀಷ್ಮಕ | – |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಕಡೆಗೆ ಹತ್ತು ತಲೆಯ ರಾವಣ ಕೆಳಕ್ಕುರುಳಿದ. ಲಕ್ಷ್ಮಣನ ಮೂಲಕ ವಿಭೀಷಣನಿಗೆ ಪಟ್ಟಾಭಿಷೇಕ. ಪರಿಪೂರ್ಣ ಶುದ್ಧಳಾದ ಸೀತೆಗೆ ಅಗ್ನಿಪರೀಕ್ಷೆ. ಕೈಲಾಸಕ್ಕೆ ತೆರಳಿದ್ದ ಸೀತೆ ಬಂದು ಇಂದ್ರಾವಿಷ್ಟ ಮಾಯಾಸೀತೆ ಮಾಯವಾದಳು. ಪುಷ್ಪಕ ವಿಮಾನದಲ್ಲಿ ಸೀತೆಯೊಂದಿಗೆ ಸಕಲ ವಾನರರಿಂದ ಕೂಡಿ ರಾಮ ಅಯೋಧ್ಯೆಗೆ ಹೊರಟ. ರಾಮನಿಗಾಗಿ ಕಾದ ಭರತ ಆನಂದಭರಿತನಾದ. ಶ್ರೀರಾಮಪಟ್ಟಾಭಿಷೇಕವಾಯಿತು. ಹನುಮ ಸುಗ್ರೀವಾದಿ ಎಲ್ಲರಿಗೂ ಸತ್ಕಾರವಾಯಿತು. ಹನುಮನಿಗೆ ಸಹಭೋಗವನ್ನೇ ಕೊಟ್ಟ. ಎಲ್ಲ ದುಷ್ಟರನ್ನು ನಿಗ್ರಹಿಸಿದ ಭಗವಂತನ ಅವತಾರಿಯಾದ ಶ್ರೀರಾಮ ಧರ್ಮಸ್ಥಾಪಿಸಿ ಹಿಂದೆ ಮುಂದೆ ಎಂದೂ ಕಾಣದ ರಾಜ್ಯಭಾರ ನಡೆಸಿದ. (ಮುಂದಿನದು ಉತ್ತರ ರಾಮಾಯಣ). ಪರಂಧಾಮಕ್ಕೆ ತೆರಳುವ ಮುನ್ನ ಸಜ್ಜೀವಿಗಳನ್ನು ಮೋಕ್ಷಕ್ಕೆ ಆಹ್ವಾನಿಸಿದ. ಯೋಗ್ಯರನ್ನು ತನ್ನೊಂದಿಗೆ ಕರೆದೊಯ್ದ. |
| ಮೇಘನಾದ (ಇಂದ್ರಜಿತ್) ಅಕ್ಷಕುಮಾರ ದೇವಾಂತಕ, ನರಾಂತಕ, ತ್ರಿಶಿರಸ್, ಅತಿಕಾಯ, ಯುದ್ಧೋನ್ಮತ್ತ ಮತ್ತು ಇನ್ನೂ ಇತರರು | ಮಹಾರಾಕ್ಷಸ. ಲೋಕಕಂಟಕ, ಬ್ರಹ್ಮರುದ್ರಾದಿಗಳಿಂದ ಅವಧ್ಯತ್ವ ಮತ್ತು ಅಜೇಯತ್ವ ವರ ಪಡೆದು ಇಂದ್ರಾದಿಗಳನ್ನು ಪರಾಭವಗೊಳಿಸಿ ಮೆರೆದವ. ಕುಂಭಕರ್ಣ, ವಿಭೀಷಣ, ಶೂರ್ಪಣಖೆಯ ಅಣ್ಣ. ಹತ್ತು ತಲೆಸಹಿತನಾಗಿ ಜನಿಸಿದ. ಕುಬೇರನನ್ನು ಓಡಿಸಿ ಲಂಕಾಧಿಪತಿಯಾದ. ಎಲ್ಲ ದಿಕ್ಪಾಲಕರನ್ನು ವಶದಲ್ಲಿಟ್ಟುಕೊಂಡ. ಕಾರ್ತವೀರ್ಯ, ವಾಲಿಯರಿಂದ ಪರಾಭವಕಂಡ. ದಂಡಕಾರಣ್ಯದಲ್ಲಿ ಖರಶೂರ್ಪಣಖೆಯರೊಂದಿಗೆ 14ಸಾವಿರ ಸೇನೆ ಇರಿಸಿದ್ದ. ಕಾಮುಕನಾದ ಇವನು ಶಾಪಾದಿಗಳಿದ್ದರೂ ಸೀತೆಯನ್ನು ಅಪಹರಿಸಿದ. ವಿಮಾನದಲ್ಲಿ ಸೀತೆಯೊಂದಿಗೆ ಹೋಗುವಾಗ ಎದುರಾದ ಜಟಾಯುವಿನ ರೆಕ್ಕೆ ಕತ್ತರಿಸಿದ. ಸೀತೆಯನ್ನು ಅಶೋಕವನದಲ್ಲಿರಿಸಿ ಪ್ರಲೋಭೆಗೊಳಿಸಲು ಪ್ರಯತ್ನಿಸಿದ. ಲಂಕೆಗೆ ಬಂದ ಹನುಮಂತ ಎದುರಿಸಿದ ಇವನ ಮಗನನ್ನು ಕೊಂದ. ಇಂದ್ರಜಿತ್‌ವಿಗೆ ಸಿಕ್ಕಂತೆ ನಟಿಸಿ ರಾವಣನನ್ನು ಕಂಡು ತನ್ನ ವಿನಾಶದ ಸೂಚನೆ ಕೊಟ್ಟ ಹನುಮನ ಬಾಲಸುಡಲು ಆದೇಶವಿತ್ತ ರಾವಣ ಸುಟ್ಟು ಭಸ್ಮವಾದ ಲಂಕಾ ಪಟ್ಟಣವನ್ನು ಕಂಡ. ವಿವೇಕ ಹೇಳಿದ ವಿಭೀಷಣನನ್ನು ಧಿಕ್ಕರಿಸಿದ. ಶರಣಾಗಲು ಒಪ್ಪದೆ ಯುದ್ಧ ಸಾರಿದ. ಶ್ರೀರಾಮನ ಸಂಗಡ ಯುದ್ಧದಲ್ಲಿ ಮಕ್ಕಳು ಬಂಧು ಬಾಂಧವರು ಅಮೋಘ ಪರಿವಾರ ಎಲ್ಲರ ವಿನಾಶವನ್ನು ಕಂಡ. ಹನುಮನ ಒಂದು ಗುದ್ದಿಗೆ ತನ್ನ ಹತ್ತೂ ಮುಖಗಳಿಂದ ರಕ್ತ ಕಾರಿದ. ಕಡೆಗೆ ರಾಮನೊಂದಿಗೆ ದ್ವಂದ್ವಯುದ್ಧದಲ್ಲಿ ಸಾವನ್ನಪ್ಪಿದ. ರಾಮ ಸಂಸ್ಕಾರವನ್ನು ಮಾಡಿಸಿದ. ಇವನಲ್ಲಿದ್ದ ಜಯನ ಒಂದು ಜನ್ಮ ಮುಗಿಯಿತು. |
| - | ನವಗ್ರಹಗಳಲ್ಲಿ ಒಂದು ಗ್ರಹ. ಮೋಹಿನಿ ಅಮೃತ ಹಂಚುವ ಸಮಯದಲ್ಲಿ ಕಪಟದಿಂದ ಅಮೃತ ಪಡೆಯಲು ಇವನ ತಲೆ ವಿಷ್ಣು ಚಕ್ರದಿಂದ ಹಾರಿತು. ಕಾರಣರಾದ ಚಂದ್ರ ಸೂರ್ಯರ ಮೇಲೆ ವೈರತ್ವ, ಇವನ ಮುಂಡವೇ ಕೇತುಗ್ರಹ ಎನಿಸಿದೆ. |
| - | ರುಕ್ಮಿಣಿಯ ಅಣ್ಣ. ಜರಾಸಂಧನ ಶಿಷ್ಯ. ಕೃಷ್ಣದ್ವೇಷಿ. ಭೋಜ ಕಟದ ಅರಸು. ಇವನು ಇಂದ್ರನನ್ನು ಒಲಿಸಿ ವಿಜಯ ಎಂಬ ಧನಸ್ಸನ್ನು ಪಡೆದಿದ್ದ. ಇವನ ಸೋದರಿ ರುಕ್ಮಿಣಿಯನ್ನು ಕೃಷ್ಣ ಅಪಹರಿಸಿಕೊಂಡು ಹೋದಾಗ ಯುದ್ಧವಾಡಿ ಸೋತ. ಕೃಷ್ಣ ಕೊಲ್ಲದೆ ಪಂಚಚೂಡನನ್ನಾಗಿ ಮಾಡಿದ. ಕೃಷ್ಣನನ್ನು ಸಂಹರಿಸದೆ ನಗರ ಪ್ರವೇಶಿಸನೆಂದು ಕುಂಡಿನಾಪುರದಲ್ಲಿದ್ದ. ಭಾರತ ಯುದ್ಧದಲ್ಲಿ ಪಾಂಡವರ ಮತ್ತು ದುರ್ಯೋಧನನಿಗೆ ಸಹಾಯ ಮಾಡಲು ಹೋಗಿ ಅವರು ಸ್ವಾಗತಿಸದ ಕಾರಣ ಹಿಂತಿರುಗಿದ. ಬಲರಾಮನೊಂದಿಗೆ ಪಗಡೆಯಾಡಿ ಸೋತು ಅವನಿಂದಲೆ ಹೊಡೆಸಿಕೊಂಡು ಸತ್ತ. ಈ ಅಸುರ ಅಧೋಗತಿ ಹೊಂದಿದ. |
| - | ರಾಜಪುತ್ರರು. ರುಕ್ಮಿಣಿಯ ಸೋದರರು. ಮಹಾದುಷ್ಟರು. ಯುದ್ಧದಲ್ಲಿ ದುರ್ಯೋಧನನ ಪಕ್ಷವಹಿಸಿ ಸತ್ತರು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ರುಕ್ಮಿಣೀ | ಮಹಾಲಕ್ಷ್ಮೀ | -- | ದ್ವಾ. | ಮ.ಭಾ. | ಭೀಷ್ಮಕ | ಶ್ರೀಕೃಷ್ಣ |
| ರುದ್ರ | ಶಿವ | -- | - | ಭಾಗವತ | ಚ.ಬ್ರಹ್ಮ | ಪಾರ್ವತಿ |
| ರುಮಾ | ಸಂಜ್ಞಾದೇವಿ, | -- | ತ್ರೇ. | ರಾ. | ತಾರ(ವಾನರ) | ಸುಗ್ರೀವ |
| ರುಕ್ಮಾಂಗದ | ಅರಸು | -- | - | ಭಾಗವತ | - | ಸಂಧ್ಯಾವಳಿ |
| ರೇಣುಕಾ | ಋಷಿಪತ್ನಿ | -- | ದ್ವಾ. | ಮ.ಭಾ. | ಪ್ರಸೇನಜಿತ, (ಸಾಕುತಂದೆ) | ಜಮದಗ್ನಿ |
| ರೇವತಿ | ವಾರುಣಿ | -- | ದ್ವಾ. | ಮ.ಭಾ. | ರೈವತರಾಜ ಕುಕುದ್ಮಿ | ಬಲರಾಮ |
| ರೇಣುಮತಿ | ಉಷಾ | -- | ದ್ವಾ. | ಮ.ಭಾ. | ಶಿಶುಪಾಲ | ನಕುಲ |
| ರೋಮ ಹರ್ಷಣ | ಶೂದ್ರ(ಸೂತ ಪುರಾಣಿಕ) | -- | ದ್ವಾ. | ಮ.ಭಾ. | ವೇದವ್ಯಾಸ | - |
| ರೋಹಿತಾಶ್ವ | ಅರಸು | -- | - | ಭಾಗವತ | ಹರಿಶ್ಚಂದ್ರ | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಪ್ರದ್ಯುಮ್ನ, ಚಾರುದೇಷ್ಣ 10 ಗಂಡು, ಚಾರುಮತಿ | ಶ್ರೀಕೃಷ್ಣನ ಅಷ್ಟಮಹಿಷಿಯರಲ್ಲಿ ಪ್ರಥಮಳು. ತ್ರಿಲೋಕ ಸುಂದರಿ. ಕೃಷ್ಣನಿಗಾಗಿ ಅವತರಿಸಿ ಬಂದ ಲಕ್ಷ್ಮಿಯ ರೂಪ. ಅಣ್ಣ ರುಕ್ಮಿ ಶಿಶುಪಾಲನಿಗೆ ಕೊಡುವುದಾಗಿ ಹಠ ಹಿಡಿದ. ರುಕ್ಮಿಣಿ ಬ್ರಾಹ್ಮಣನ ಮೂಲಕ ಪತ್ರ ಬರೆದು ಕಳುಹಿಸಿದಳು. ಅದರಂತೆ ಕೃಷ್ಣ ಗೌರಿಪೂಜೆಗೆಂದು ಹೊರಗೆ ಬಂದಾಗ ರಥದಲ್ಲಿ ಬಂದು ಅಪಹರಿಸಿ ಕೊಂಡು ಹೋಗಿ ಮದುವೆಯಾದ. ದೂರ್ವಾಸರ ಪರೀಕ್ಷೆಗೆ ಒಳಗಾಗಿ ಅವರಿಂದಲೇ ವರ ಪಡೆದಳು. ಒಮ್ಮೆ ಸತ್ಯಭಾಮೆ ಕೃಷ್ಣನ ತುಲಾಭಾರ ಮಾಡಲು ತೂಗಲಾಗದಾಗ ರುಕ್ಮಿಣಿ ಭಕ್ತಿಪೂರ್ವಕ ಒಂದು ದಳ ತುಳಸಿಯಿಂದ ತೂಗಿದಳು. ರುಕ್ಮಿಣಿ ಸತ್ಯಭಾಮೆಯರೀರ್ವರೂ ಲಕ್ಷ್ಮೀಸ್ವರೂಪರೆ. ಭಿನ್ನವೆಂಬುದಿಲ್ಲ. ದ್ವಾರಕಾದಲ್ಲಿ ಮಹಾರಾಣಿಯಾಗಿದ್ದಳು. ಕೃಷ್ಣನ ಪರಂಧಾಮಕ್ಕೆ ಹೋದ ನಂತರ ರುಕ್ಮಿಣಿ ಅಗ್ನಿ ಪ್ರವೇಶ ಮಾಡಿ ಅಂತರ್ಧಾನಳಾದಳು. |
| ವಿನಾಯಕ, ಷಣ್ಮುಖ | ಬ್ರಹ್ಮದೇವರ ಭ್ರೂಮಧ್ಯದಿಂದ ಜನಿಸಿದವರು. ತ್ರಿಮೂರ್ತಿಗಳಲ್ಲಿ ಒಬ್ಬರು. ಹುಟ್ಟಿದಾಗ ಅಳುತ್ತಾ ಇದ್ದುದರಿಂದಾಗಿ ಈ ಹೆಸರು ಬಂದಿದೆ. ಏಕಾದಶರುದ್ರರಲ್ಲಿ ಪ್ರಥಮರು. ಲಯಕಾರಕರು. ಮನೋಭಿಮಾನಿ ಅಹಂಕಾರ ತತ್ವಾಭಿಮಾನಿ ದೇವತೆ. ಗರುಡ ಶೇಷರಿಗೆ ಸಮಾನರು. ಈಶಾನ್ಯಾಧಿಪತಿ. ದೂರ್ವಾಸ, ಅಶ್ವತ್ಥಾಮಾದಿ ಅವತಾರ ಉಳ್ಳವರು. ಸಮುದ್ರಮಥನ ಕಾಲದಲ್ಲಿ ವಾಯುದೇವರಿಂದ ಕೊಡಲ್ಪಟ್ಟ ಉಚ್ಚಿಷ್ಟ ವಿಷಪ್ರಾಶನ ಮಾಡಿ ನೀಲಕಂಠರೆಂದೆನಿಸಿದರು. ವಿಷ್ಣುವಿನ ಮೋಹಿನಿರೂಪ ಕಂಡು ಮೋಹಿತರಾದರು. ಗಜಚರ್ಮಾಂಭರ, ಶ್ಮಶಾನವಾಸಿ, ವೃಷವಾಹನ, ಕ್ಷಿಪ್ರಪ್ರಸಾದ, ಗೌರೀಶ, ಗಂಗಾಧರ, ಚಂದ್ರಮೌಳಿ, ಅರ್ಧನಾರೀಶ್ವರ ಮೊದಲಾದ ಗುಣವಿಶಿಷ್ಟರು. ಅರ್ಜುನನಿಗೆ ಪಾಶುಪತಾಸ್ತ್ರ ಪ್ರದಾತರು. ಶುಕಾಚಾರ್ಯರಾಗಿ ಪರೀಕ್ಷಿತನಿಗೆ ಭಾಗವತ ಉಪದೇಶಿಸಿ ಮೂಲ ಪ್ರವರ್ತಕರಾದರು. ಹಿಂದೆ ದಕ್ಷಯಜ್ಞಧ್ವಂಸ ಮಾಡಿದರು. ಪಾರ್ವತಿಗೆ ಉಪದೇಶ. ಇವರು ಲಿಂಗ ಪೂಜಾರ್ಹರು. (ನೋಡಿ – ಶಿವ) |
| – | ಅಂಗದನ ಸಾಕು ತಾಯಿ. ಕಿಷ್ಕಿಂದಾ ಪರ್ವತದಲ್ಲಿ ಸುಗ್ರೀವನೊಂದಿಗೆ ಇದ್ದವಳು. |
| ಧರ್ಮಾಂಗದ | ಏಕಾದಶಿ ವ್ರತದಲ್ಲಿ ನಿಷ್ಣಾಂತ. ತನ್ನ ರಾಜ್ಯದಲ್ಲಿ ಈ ವ್ರತವನ್ನು ಕಡ್ಡಾಯವನ್ನಾಗಿಸಿದ್ದ. ಒಮ್ಮೆ ತೀರ್ಥಯಾತ್ರೆ ಯಲ್ಲಿದ್ದಾಗ ವನದಲ್ಲಿ ಒಬ್ಬ ಮೋಹಿನಿಯನ್ನು ಕಂಡು ಮೋಹಿತನಾಗಿ ಗಂಧರ್ವ ವಿವಾಹವಾದ. ವ್ರತಭಂಗ ಮಾಡಲು ಇವನನ್ನು ಅವಳು ಪರೀಕ್ಷಿಸಲು ಜಗ್ಗದೆ ಭಗವಂತನ ಪ್ರೀತಿಪಾತ್ರನಾಗಿ ಉದ್ಧಾರ ಕಂಡ. |
| ಪರಶುರಾಮ, ರುಮಣ್ವಂತ, ಸುಷೇಣ ವಸು ವಿಶ್ವಾವಸು | ಅಯೋನಿಜೆ, ಒಮ್ಮೆ ಪತಿಯ ಕೋಪಕ್ಕೆ ಗುರಿಯಾಗಿ ಪರಶುರಾಮನಿಂದ ತನ್ನ ತಲೆಯನ್ನೇ ಕಡಿಸಿಕೊಂಡಳು. ನಂತರ ಪರಶುರಾಮರು ವರಪಡೆದು ಬದುಕಿಸಿಕೊಂಡರು. |
| ಶಠ, ಉಲ್ಮುಕ ಸಾರಣ, ದುರ್ಮದ | ಇವಳಿಗೆ ಸರಿಯಾದ ಗಂಡ ಸಿಗದ ಕಾರಣ ರೈವತ ಬ್ರಹ್ಮದೇವರ ಬಳಿ ಹೋಗಿ ಇವಳ ಪತಿಯಾರೆಂದು ಕೇಳಿದ. ಬಲರಾಮನೆಂದು ತಿಳಿದು ಭೂಲೋಕಕ್ಕೆ ಬಂದಾಗ ಅನೇಕ ಯುಗಗಳು ಉರುಳಿದ್ದವು. ತುಂಬ ಎತ್ತರಳಾಗಿದ್ದ ಇವಳನ್ನು ಬಲರಾಮ ತನ್ನ ನೇಗಿಲಿನಿಂದ ತನ್ನ ಮಟ್ಟಕ್ಕೆ ಇಳಿಸಿ ಮದುವೆಯಾದ. |
| ನಿರಮಿತ್ರ | ಕುಂತಿಯ ತಂಗಿ ಶ್ರುತಶ್ರವೆಯ ಮೊಮ್ಮಗಳಾದ ಇವಳನ್ನು ನಕುಲ ಮದುವೆಯಾದ. |
| ಉಗ್ರಶ್ರವ | ವ್ಯಾಸರ ರೋಮಾಂಚನದಿಂದ ಹುಟ್ಟಿದ. ಇವರಿಗೆ ಶಾಸ್ತ್ರಗಳನ್ನು ವ್ಯಾಸರೇ ಉಪದೇಶಿಸದರು. ಇತಿಹಾಸ ಪುರಾಣಗಳ ಪ್ರವರ್ತಕರಾದರು. ಇವರೇ ಸೂತ ಪುರಾಣಿಕರು. ನೈಮಿಷಾರಣ್ಯದಲ್ಲಿ ಅನೇಕ ಸಂವತ್ಸರ ಅನೇಕರಿಗೆ ಪುರಾಣ ಹೇಳಿದ ಪುಣ್ಯಾತ್ಮರು. |
| – | ಅಯೋಧ್ಯೆಯ ಅರಸ. ವಿಶ್ವಾಮಿತ್ರರು ಇವನ ತಂದೆಯನ್ನು ಪರೀಕ್ಷಿಸಲು ಇವನಿಗೂ ಬಹು ಕಷ್ಟಕೊಟ್ಟರೂ ಎಲ್ಲದರಿಂದ ಪಾರಾದ. ಭಗವಂತನ ಅನುಗ್ರಹಕ್ಕೆ ಪಾತ್ರನಾದ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ರೋಚಮಾನ | ಕ್ಷತ್ರಿಯ | -- | ದ್ವಾ. | ಮ.ಭಾ. | - | - |
| ರೋಹಿಣಿ | ಸುರಭಿ | -- | ದ್ವಾ. | ಮ.ಭಾ. | | ವಸುದೇವ |
| ಲವ | ಅಗ್ನಿ | -- | ತ್ರೇ. | ರಾ. | ಶ್ರೀರಾಮ,ಸೀತಾ | - |
| ಲಕ್ಷಣಾ | ರತಿ | -- | ದ್ವಾ | ಮ.ಭಾ. | ದುರ್ಯೋಧನ ಭಾನುಮತಿ | ಸಾಂಭ |
| ಲಕ್ಷಣಾ | ದೇವತೆ | ಲಕ್ಷ್ಮಿ | ದ್ವಾ. | ಮ.ಭಾ. | ಮದ್ರರಾಜ | ಶ್ರೀಕೃಷ್ಣ |
| ಲಕ್ಷಣ | ದೈತ್ಯ | ಸುರಾಂತಕ | ದ್ವಾ. | ಮ.ಭಾ. | ದುರ್ಯೋಧನ, ಭಾನುಮತಿ | |
| ಲಕ್ಷ್ಮಣ | ಶೇಷ | ಸಂಕರ್ಷಣ | ತ್ರೇ | ರಾ. | ದಶರಥ,ಸುಮಿತ್ರಾ | ಊರ್ಮಿಳ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| - | ಮಹಾರಥಿ. ಪಾಂಡವರ ಪಕ್ಷದಲ್ಲಿದ್ದು ಹೋರಾಡಿದ. ಕಡೆಗೆ ಕರ್ಣನಿಂದ ಹತನಾದ. |
| ಬಲರಾಮ | ವಸುದೇವನ ಮೊದಲ ಹೆಂಡತಿ. ಅನೇಕ ಸವತಿಯರಿದ್ದರು. ದ್ವಾರಕೆಯಲ್ಲೇ ನೆಲೆಸಿದ್ದರು. ದೇವಕಿಯ ಏಳನೇ ಗರ್ಭವನ್ನು ದುರ್ಗಾ ಇವಳಿಗೆ ಸ್ಥಳಾಂತರಿಸಿದಳು. ಕಡೆಗೆ ವಸುದೇವನೊಂದಿಗೆ ಮಡಿದಳು. ಗಂಡನೊಂದಿಗೆ ಮೂಲರೂಪ ಸೇರಿದಳು. |
| - | ವಾಲ್ಮೀಕಿ ಋಷಿಗಳಲ್ಲಿ ಬೆಳೆದು ಎಲ್ಲ ವಿದ್ಯೆಗಳನ್ನು ಕಲಿತ. ರಾಮಾಯಣವನ್ನು ಹಾಡಿದ. ಕುಶನ ಅಣ್ಣ. ಇಂದಿನ ಲಾಹೋರು (ಲವಕೋಟೆ) ಇವನಿಂದ ನಿರ್ಮಿತವಾದದ್ದು. ಶ್ರೀರಾಮನ ಯಾಗದ ಸಮಯದಲ್ಲಿ ವಾಲ್ಮೀಕಿಯೊಂದಿಗೆ ಬಂದು ರಾಮಾಯಣ ಹಾಡಿದ. |
| - | ಸಾಂಬ ಇವಳನ್ನು ಅಪಹರಿಸಿದ. ಕೌರವರಿಗೆ ಸಿಕ್ಕಿಬಿದ್ದ ಇವನನ್ನು ಬಲರಾಮನ ಪರಾಕ್ರಮ ತಿಳಿದು ಬಿಟ್ಟರು ದ್ವಾರಕೆಯಲ್ಲಿ ವಿಜೃಂಭಣೆಯಿಂದ ಮದುವೆಯಾದ. |
| 10 ಗಂಡು, ಒಬ್ಬ ಮಗಳು | ಮದ್ರದೇಶದ ರಾಜಕುಮಾರಿ. ಅಷ್ಟಮಹಿಷಿಯರಲ್ಲಿ ಒಬ್ಬಳು. ದ್ರೌಪದಿ ಸ್ವಯಂವರದಂತೆ ಮತ್ಸ್ಯಯಂತ್ರ ಭೇಧಿಸಿ ಕೃಷ್ಣ ಮದುವೆಯಾದ. |
| - | ಹಿಂದೆ ರಾವಣನ ಭೃತ್ಯ. ಸುರಾಂತಕನೆ ಇವನು, ಲಕ್ಷಣಾನ ಅಣ್ಣ. ಮಹಾಯುದ್ಧದಲ್ಲಿ ಅಭಿಮನ್ಯುವಿನಿಂದ ಹತನಾದ. |
| ಅಂಗದ, ಚಿತ್ರಕೇತು | ಪುತ್ರಕಾಮೇಷ್ಟಿಯಾಗದಲ್ಲಿ ಬಂದ ಪಾಯಸದಿಂದ ಶತೃಘ್ನನ ಜೊತೆ ಹುಟ್ಟಿದ ಹಿರಿಯವ, ಶೇಷಾವತಾರಿ. ಸೂರ್ಯವಂಶಜ. ರಾಮ ಹುಟ್ಟಿದ ಮೂರು ದಿನಗಳ ನಂತರ ಆಶ್ಲೇಷಾ ನಕ್ಷತ್ರದಲ್ಲಿ ಜನಿಸಿದ. ವಿಶ್ವಾಮಿತ್ರರ ಸಿದ್ಧಾಶ್ರಮಕ್ಕೆ ರಾಮನ ಜೊತೆ ಹೋದ. ಪ್ರಾರಂಭದಿಂದ ಕಡೆಯವರೆಗೂ ರಾಮನ ಹಿಂಬಾಲಿಸಿ ಅನುಚರನಾಗಿದ್ದುದು ಇವನ ವಿಶೇಷ. ಶ್ರೀರಾಮನ ಜೊತೆಗೇ ಸೀರಧ್ವಜನ ಪುತ್ರಿ ಊರ್ಮಿಳೆಯೊಂದಿಗೆ ಮದುವೆಯಾದ. ರಾಮನನ್ನು ಒಪ್ಪಿಸಿ ಅವನ ಹಿಂದೆ ವನವಾಸಕ್ಕೂ ಹೊರಟ. ಭರತನನ್ನು ಶಂಕಿಸಿ ನಂತರ ಯಥಾರ್ಥವನ್ನರಿತ. ರಾಮನ ಆದೇಶದಂತೆ ಶೂರ್ಪಣಖೆಯನ್ನು ವಿರೂಪಗೊಳಿಸಿದ. ಮಾಯಾಮೃಗದ ಹಿಂದೆ ರಾಮ ಹೋದಾಗ ಲಕ್ಷ್ಮಣ ಸೀತೆಯಿಂದ ಬಿರುಸು ನುಡಿಗಳನ್ನು ಕೇಳಿದ. ಸೀತೆಯನ್ನು ಒಂಟಿಯಾಗಿ ಬಿಟ್ಟು ಬಂದುದಕ್ಕೂ ರಾಮನಿಂದ ನಿಂದಿತನಾದ. ಕರ್ತವ್ಯ ಪಾಲಿಸದ ಕಾರಣಕ್ಕೆ ಸುಗ್ರೀವನನ್ನು ಶಿಕ್ಷಿಸಿ ರಾಮನ ಬಳಿಗೆ ಕರೆದೊಯ್ದು. ಲಂಕಾಯುದ್ಧದಲ್ಲಿ ಇಂದ್ರಜಿತ್ತುವಿನ ನಾಗಾಸ್ತ್ರಕ್ಕೆ ಮೂರ್ಛಿತನಾಗಿ ಗರುಡನಿಂದ ಬಿಡುಗಡೆ ಪಡೆದ. ಲಕ್ಷ್ಮಣನ ಪರಾಕ್ರಮ ವರ್ಣನೆ. ಇಂದ್ರಜಿತ್ತುವಿನೊಂದಿಗೆ ದ್ವಂದ್ವಯುದ್ಧ ಮಾಡಿ ಅವನನ್ನು ವಧಿಸಿದ. ರಾವಣನ ಬಾಣಗಳಿಗೆ ಮೂರ್ಛಿತನಾಗಿ ಹನುಮಂತನ ಸಾಹಸದಿಂದ ಎದ್ದ. ರಾಮನ ರಾಜ್ಯಭಾರದಲ್ಲಿ ಲಕ್ಷ್ಮಣನ ಪಾತ್ರವೂ ಮಿಗಿಲಾಗಿದ್ದಿತು. ರಾಮನ ಅಪ್ಪಣೆಯಂತೆ ಸೀತೆಯನ್ನು ಗಂಗಾತೀರದ ವನಕ್ಕೆ (ವಾಲ್ಮೀಕಿ ಆಶ್ರಮ) ಕರೆದೊಯ್ದು ಬಿಟ್ಟು ಬಂದ. ರಾಮ ಮಾಡಿದ ಅಶ್ವಮೇಧಯಾಗದಲ್ಲಿ ಅಶ್ವರಕ್ಷಣೆಗಾಗಿ ಹೊರಟ. ತನ್ನ ಇಬ್ಬರು ಮಕ್ಕಳನ್ನು ತಾರಾಪಥ ಹಾಗೂ ಚಂದ್ರಕಾಂತಪುರಗಳಲ್ಲಿ ರಾಜ್ಯಭಾರವನ್ನೊಪ್ಪಿಸಿದ. ದುರ್ವಾಸಮುನಿಗಳಿಂದಾಗಿ ಶಿಕ್ಷೆಯನ್ನನುಭವಿಸಿದ. ಕಡೆಗೆ ಸರಯೂ ನದಿಯಲ್ಲಿ ಮೂಲರೂಪವಾದ ಶೇಷನಲ್ಲಿ ಐಕ್ಯ ಹೊಂದಿದ. |
| ಬ್ರಹ್ಮಾಂಡ | ಪರಶುಕ್ಲತ್ರಯದಲ್ಲಿ ಒಬ್ಬಳು. ವಿಷ್ಣುಪತ್ನಿ. ಭಗವಂತನ ನಂತರ ಸಕಲವೇದಗಳಿಂದ ಪ್ರತಿಪಾದ್ಯಳು. ವೇದಾಭಿಮಾನಿಯು. ವೇದಗಳಿಗೂ ಮಿಗಿಲಾದ ಜ್ಞಾನ ಉಳ್ಳವಳು. ಪ್ರಳಯಕಾಲದಲ್ಲೂ ಶ್ರೀಹರಿಯ ಜೊತೆಯಲ್ಲಿ ಮೂರು ರೂಪಗಳಿಂದ ಇರುವವಳು. ಅಕ್ಷರಪುರುಷಳೆನಿಸಿದ ಇವಳು ಭಗವಂತನ ನಿತ್ಯಾವಿಯೋಗಿನಿ. ಬ್ರಹ್ಮರುದ್ರಾದಿಗಳನ್ನು ಸಮಸ್ತ ಜಗತ್ತನ್ನು ಸೃಷ್ಟಿಸಬಲ್ಲ ಸಮರ್ಥಳು. ಭಗವಂತನ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ವಜ್ರ | ಅರಸು | -- | ದ್ವಾ. | ಮ.ಭಾ. | ಅನಿರುದ್ಧ,ಉಷಾ | - |
| ವತ್ಸ | ಅಸುರ | -- | ದ್ವಾ. | ಮ.ಭಾ. | - | - |
| ವಜ್ರದಂಷ್ಟ್ರ | ರಾಕ್ಷಸ | -- | ತ್ರೇ. | ರಾ. | - | - |
| ವತ್ಸಲಾ | ದೇವತೆ | -- | ದ್ವಾ. | ಮ.ಭಾ. | ಬಲರಾಮ,ರೇವತಿ | ಅಭಿಮನ್ಯು |
| ವರಾಹ | ಮಹಾವಿಷ್ಣು | -- | ಕೃ. | ಭಾಗವತ | - | ಮಹಾಲಕ್ಷ್ಮೀ( |
| ವರಾಂಗಿ | ದೇವಕನ್ಯೆ | -- | ದ್ವಾ. | ಮ.ಭಾ. | ವಿಶ್ವಕರ್ಮ | ದ್ಯು (ವಸು) |
| ವರುಣ | ದೇವತೆ | -- | - | ಭಾಗವತ | ಕಶ್ಯಪ, ಅದಿತಿ | ಗಂಗಾ, ಜ್ಯೇಷ್ಠ ಋದ್ಧಿ ವಾರುಣಿ |
| ವಶಿಷ್ಠ | ಬ್ರಹ್ಮಋಷಿ | -- | | ರಾ./ಮಭಾ. | ಚ. ಬ್ರಹ್ಮ | ಅರುಂಧತಿ, ಊ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಅಂಗಸಂಗ ಯೋಗ್ಯಳಾಗಿ ಇವಳ ಸಾನ್ನಿಧ್ಯವಿಲ್ಲದೆ ಯಾರನ್ನೂ ಸ್ವೀಕರಿಸ. ನೇರವಾಗಿ ಮಹಾವಿಷ್ಣುವನ್ನು ಸೇವಿಸುವ ಏಕೈಕ ವ್ಯಕ್ತಿ. ಭಗವಂತ ಯಾವ ಅವತಾರವೆತ್ತಿದರೂ ಅದಕ್ಕೆ ತಕ್ಕಂತೆ ಪ್ರತಿರೂಪ ಧರಿಸಿ ಅವನ ಇಚ್ಛೆಯಂತೆ ನಡೆಯುವವಳು. ಭಗವಂತನಂತೆ ದೇಶಕಾಲಗಳಲ್ಲಿ ವ್ಯಾಪ್ತಳು ಗುಣಗಳಿಂದ ನ್ಯೂನಳಾಗಿ ಸಮಾಸಮಳೆನ್ನಿಸಿರುವಳು. ನಿತ್ಯಮುಕ್ತಳಾಗಿ ನಿತ್ಯಾನಿತ್ಯ ಜಗತ್ತಿಗೆ ಹಾಗೂ ಮುಕ್ತಾಮುಕ್ತ ಜೀವರಿಗೆ ನಿಯಾಮಕಳಾಗಿರುವ ನಾರಾಯಣನ ವಕ್ಷಸ್ಥಳದಲ್ಲಿ ಸದಾವಾಸಿಸಿದವಳಾಗಿ ಸುಖಪೂರ್ಣಳೆನಿಸಿದಳು. ದೋಷದೂರಳಾದ ಇವಳು ಭಗವಂತನಲ್ಲಿ ಸದಾ ವಿನೂತನವನ್ನು ಕಾಣುತ್ತ ಆನಂದವನ್ನನುಭವಿಸುವಳು. |
| ಪ್ರತಿಬಾಹು | ಕೃಷ್ಣ ರುಕ್ಮಿಣಿಯರ ಮರಿಮೊಮ್ಮಗ, ಪರಾಕ್ರಮಿ. ಯಾದವರ ವಿನಾಶದ ನಂತರ ಅರ್ಜುನ ಇವನನ್ನು ಹಸ್ತಿನಾವತಿಗೆ ರಾಜನನ್ನಾಗಿ ಮಾಡಿದ. ಕೃಷ್ಣನ ವಂಶದಲ್ಲಿ ಉಳಿದವನು ಇವನೊಬ್ಬನೆ. |
| - | ಕಂಸನ ಭೃತ್ಯ. ಕರುವಿನ ರೂಪದಲ್ಲಿ ಗೋಕುಲಕ್ಕೆ ಬಂದು ಕೃಷ್ಣನಿಂದ ಎಸೆದು ಬಿದ್ದು ಸತ್ತ. |
| - | ರಾವಣನ ಸೇನಾಪತಿ. ಯುದ್ಧದಲ್ಲಿ ಅಂಗದನಿಂದ ಹತನಾದ. |
| - | ಬಲರಾಮ ಇವಳನ್ನು ದುರ್ಯೋಧನನ ಮಗ ಲಕ್ಷ್ಮಣನಿಗೆ ಕೊಡಲು ನಿಶ್ಚಯಿಸಿದ. ಆದರೆ ಘಟೋತ್ಕಚನ ಸಹಾಯದಿಂದ ಅಪಹರಿಸಿಕೊಂಡು ಬಂದು ಅಭಿಮನ್ಯು ಮದುವೆಯಾದ. |
| ನರಕಾಸುರ | ಈ ಅವತಾರ ವೈವಸ್ವತ ಮನ್ವಂತರದ ಶ್ವೇತವರಾಹಕಲ್ಪದಲ್ಲಿ ನಡೆಯಿತು. ದಶಾವತಾರದಲ್ಲಿ ಮೂರನೆಯದ್ದು. ಭೂಮಿಯನ್ನು ಅರ್ಣವದಲ್ಲಿ ಮುಳುಗಿಸಿದ್ದನ್ನು ದಂಷ್ಟ್ರಗಳಿಂದ ಮೇಲೆತ್ತಿ ಹಿರಣ್ಯಾಕ್ಷನನ್ನು ಸಂಹರಿಸಿದ. ಈ ಅವತಾರವನ್ನು ಭಗವಂತ ಎರಡು ಸಲ ಸ್ವೀಕರಿಸಿದ. ತಿರುಮಲದಲ್ಲಿ ನೆಲೆಸಿ ಶ್ರೀನಿವಾಸನಿಗೆ ವಾಸವಾಗಿರಲು ಸ್ಥಳವನ್ನು ಹಾಗೂ ಕ್ಷೇಮಕ್ಕೆ ಬಕುಳಾದೇವಿಯನ್ನು ಕೊಟ್ಟ ರೂಪ. |
| - | ಬೃಹಸ್ಪತಿಯ ಸೋದರಿ. ಇವಳು ಗಂಡನಿಗೆ ನಂದಿನಿ ಹಸುವನ್ನು (ವಶಿಷ್ಠರಲ್ಲಿಯದು) ಕಟ್ಟಿ ತರಲು ಪ್ರೇರೇಪಿಸಿದಳು. ಇವಳೂ ಗಂಡನೊಂದಿಗೆ ಶಾಪ ಪಡೆದಳು. ಅಂಬೆ ಎಂದು ಮನುಷ್ಯಳಾಗಿ ಹುಟ್ಟಿ ಭೀಷ್ಮನನ್ನೇ ದ್ವೇಷಿಸಿದಳು. ನಂತರ ಶಿಖಂಡಿಯಾಗಿ ಜನಿಸಿ ಭೀಷ್ಮರ ಸಾವಿಗೆ ಕಾರಣಳಾದಳು. |
| ಅಧರ್ಮ, ಬಲ, ಸುರೆ ಬಂದಿ, ಪುಷ್ಕರ, ಅಗಸ್ತ್ಯ | ಜಲಾಧಿಪತಿ, ಪಶ್ಚಿಮ ದಿಗಭಿಮಾನಿ, ಶುಕ್ರಾಚಾರ್ಯರ ಮಗಳು ಜ್ಯೇಷ್ಠಾದೇವಿಯೂ ಹೆಂಡತಿ. ಇಂದ್ರಕೀಲ ಪರ್ವತದಲ್ಲಿ ಅರ್ಜುನನಿಗೆ ದಿವ್ಯಾಸ್ತ್ರಗಳನ್ನು ಪ್ರದಾನಮಾಡಿದ. ಋಚೀಕಮುನಿಗೆ ಒಂದು ಸಾವಿರ ಒಂದು ಕಿವಿ ಕಪ್ಪಾದ ಕುದುರೆಗಳನ್ನು ಕೊಟ್ಟ. ಸ್ಕಂದನಿಗೆ ಯಮ ಮತ್ತು ಅತಿಯಮರೆಂಬ ಪಾರ್ಷದರನ್ನು ಕೊಟ್ಟ. ಶ್ರೀರಾಮನ ಆಗ್ರಹಕ್ಕೆ ಒಳಗಾಗಿ ನಂತರ ಶರಣಾದ. ಇವನು ರತ್ನಾಕರ. ಒಮ್ಮೆ ಸರಸ್ವತೀ ತೀರದಲ್ಲಿ ರಾಜಸೂಯಯಾಗ ಮಾಡಿದ. ಉತಥ್ಯನ ಮಡದಿ ಭದ್ರೆಯನ್ನು ಅಪಹರಿಸಿದಾಗ ಆ ಮುನಿಯು ಸಮುದ್ರದ ನೀರನ್ನೆಲ್ಲಾ ಕುಡಿದಾಗ ಹಿಂತಿರುಗಿಸಿದ. ಶ್ರೀರಾಮನಿಗೂ ಸೇತುವೆ ಕಟ್ಟಲು ಅನುಮೋದಿಸಿದ್ದ. |
| ಶಕ್ತಿ ಋಷಿಗಳು ಚಿತ್ರ ಕೇತು ಮೊದಲಾದ ಏಳು ಪುತ್ರರು, 100 ಪುತ್ರರು | ಚತುರ್ಮುಖ ಬ್ರಹ್ಮರ ಮಾನಸ (ಪ್ರಾಣ) ಪುತ್ರರು. ಗೋತ್ರ ಪ್ರವರ್ತಕರು. ವೈವಸ್ವತ ಮನ್ವಂತರದಲ್ಲಿ ಮಿತ್ರಾವರುಣ ಊರ್ವಶಿಯವರ ದಶೆಯಿಂದ ಜನಿಸಿದರು. ಇಕ್ಷ್ವಾಕುವಂಶದ ರಾಜಪುರೋಹಿತರು. ಶ್ರೀರಾಮಾದಿಗಳ ವಿವಾಹವನ್ನು ಇವರೇ ಮಾಡಿಸಿದರು. ಸಪ್ತ ಋಷಿಗಳಲ್ಲಿ ಒಬ್ಬರು. ಪೂರುವಂಶದ ಸಂವರಣನನ್ನು ಸಾಮ್ರಾಟನನ್ನಾಗಿ ಮಾಡಿದರು. ಸುರಭಿಯ ಮಗಳಾದ ನಂದಿನಿ ಗೋವನ್ನು ಯಾಗಕ್ಕೋಸ್ಕರ ಇಟ್ಟುಕೊಂಡಿದ್ದರು. ಕಾರ್ತವೀರ್ಯಾರ್ಜುನ ಇವರ ಆಶ್ರಮವನ್ನು ಸುಟ್ಟು ಹಾಕಿದ. ಇವರು ಶಾಪಕೊಟ್ಟರು. ಒಮ್ಮೆ ದ್ಯೌ ಎಂಬ ವಸು ಹೆಂಡತಿಗೋಸ್ಕರ ಇದನ್ನು ಅಪಹರಿಸಿ ಶಾಪಕ್ಕೆ ಗುರಿಯಾದ (ಭೀಷ್ಮ). ಮಹಾಜಿತೇಂದ್ರಿಯರಾದ ಇವರು ವಿಶ್ವಾಮಿತ್ರರ ಕೋಪಕ್ಕೆ ನೊಂದರು. ಇವರ ನೂರು ಮಕ್ಕಳು ಸಂಹರಿಸಲ್ಪಟ್ಟರು. ರಾಜಾವಿಶ್ವಾಮಿತ್ರ ಕಡೆಗೆ ನಂದಿನಿಯನ್ನು ಕೇಳಲು ಕೊಡದಾಗ ಅಪಹರಿಸಲು ಪ್ರಯತ್ನಿಸಿ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ವಸುದಾನ | ಅರಸು | -- | ದ್ವಾ. | ಮ.ಭಾ. | – | – |
| ವಸುಗಳು | ಗಣ ದೇವತೆಗಳು | -- | ದ್ವಾ. | ಮ.ಭಾ. | ವಸು(ದಕ್ಷನಪುತ್ರಿ) ಧರ್ಮದೇವ | – |
| ವಸುದೇವ | ಕಶ್ಯಪರು | -- | ದ್ವಾ. | ಮ.ಭಾ. | ಶೂರಸೇನ (ಕ್ಷತ್ರಿಯ ಸ್ತ್ರೀ) ಭೋಜಾದೇವಿ | ದೇವಕಿ, ರೋಹಿಣಿ ಹೀಗೆ 14 ಪತ್ನಿಯರು |
| ವಾತಾಪಿ | ರಾಕ್ಷಸ | -- | ದ್ವಾ. | ಮ.ಭಾ. | – | – |
| ವಾಮನ | ಮಹಾವಿಷ್ಣು | -- | ಕೃ. | ಭಾಗವತ | ಕಶ್ಯಪ, ಅದಿತಿ | ಸುಖಾ (ಲಕ್ಷ್ಮಿ) |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಆದರಿಂದಲೇ ಪರಾಜಿತನಾದ. ವಿಶ್ವಾಮಿತ್ರನು ಬಿಟ್ಟ ಎಲ್ಲ ಅಸ್ತ್ರಗಳನ್ನು ಇವರ ದಂಡದಿಂದ ತಡೆಯಲ್ಪಟ್ಟಿತು. ಎಷ್ಟು ಸಂಕಷ್ಟವನ್ನು ವಿಶ್ವಾಮಿತ್ರ ಒಡ್ಡಿದರೂ ಶಾಂತರಾಗಿದ್ದು ಅವರನ್ನೇ ಕ್ಷಮಿಸಿದರು. ಇವರು ಶರೀರತ್ಯಾಗ ಮಾಡಲು ಯತ್ನಿಸಿದಾಗ ಭಗವಂತ ಸಂರಕ್ಷಿಸಿದ. ಶ್ರೀರಾಮನಿಗೆ ಪಟ್ಟಾಭಿಷೇಕ ಇವರೆ ಮಾಡಿದರು. ಹರಿಶ್ಚಂದ್ರನ ವಿಷಯವಾಗಿ ವಿಶ್ವಾಮಿತ್ರರನ್ನು ವಿರೋಧಿಸಿದರು. ಬ್ರಹ್ಮ, ಪರಶುರಾಮ, ಕೃಷ್ಣ ಇಂದ್ರ ಭೀಷ್ಮ ದ್ರೋಣ ಮುಂತಾದವರ ಜೊತೆ ಸಂವಾದ ನಡೆಸಿದರು. ಪ್ರಜಾಪತಿಗಳಲ್ಲಿ ಇವರೂ ಒಬ್ಬರಾಗಿದ್ದರು. ಒಮ್ಮೆ ವೃತ್ರಾಸುರನಿಂದ ಹಿಡಿಯಲ್ಪಟ್ಟಾಗ ಅವನಿಗೆ ಮೋಚನ ಮಾಡಿದರು. ಇವರ ವಂಶದಲ್ಲೇ ವೇದವ್ಯಾಸರ ಅವತಾರವಾಯಿತು. ಒಮ್ಮೆ ಮಿತ್ರಾವರುಣ ಹಾಗೂ ಊರ್ವಶಿಯರು ಮೋಹಗೊಂಡಾಗ ಅವರ ವೀರ್ಯವು ಒಂದು ಕುಂಭದಲ್ಲಿರಿಸಲಾಗಿ ಅದರಿಂದ ಅಗಸ್ತ್ಯ ಹಾಗೂ ವಶಿಷ್ಠರ ಜನನವಾಯಿತು. ಇವರು ಮೈತ್ರಾವರುಣಿಯಾದರು. ಶ್ರೇಷ್ಠ ವಿಷ್ಣು ಭಕ್ತರಾದ ಇವರು ಶ್ರೇಷ್ಠ ಮಹರ್ಷಿಗಳು. |
| – | ಪಾಂಶುರಾಷ್ಟ್ರದ ಅಧಿಪತಿ. ಅತಿರಥ, ಪಾಂಡವರ ಪರವಾಗಿ ಯುದ್ಧವಾಡಿ ದ್ರೋಣರಿಂದ ಸತ್ತ. |
| – | ಇವರು 8 ಜನ. ಇವರು ವಶಿಷ್ಠರ ಆಶ್ರಮದಲ್ಲಿದ್ದ ನಂದಿನಿಯನ್ನು ಅಪಹರಿಸಲು ಪ್ರಯತ್ನಿಸಿದರು. ವಶಿಷ್ಠರಿಂದ ಮನುಷ್ಯರಾಗಲು ಶಾಪ. ಶಂತನುನಿಂದ ಗಂಗೆಯಲ್ಲಿ 7 ಜನ ಹುಟ್ಟಿ ಸತ್ತರು. ಕಡೆಯ ವಸು ಭೀಷ್ಮನಾಗಿ ಜನಿಸಿ, ಯುದ್ಧದಲ್ಲಿ ಶಿಖಂಡಿ ನಿಮಿತ್ತ ಅರ್ಜುನನಿಂದ ಸತ್ತ. ಅಷ್ಟವಸುಗಳು – ಧರ, ಧ್ರುವ, ಸೋಮ, ಅಹ, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ. (ಈ ಹೆಸರುಗಳಲ್ಲಿ ವ್ಯತ್ಯಾಸವಿದೆ). |
| ಬಲರಾಮ, ಕೃಷ್ಣ ಸುಭದ್ರಾ ಮೊದಲಾದವರು | ಯದುವಂಶಜ, ಕುಂತಿಯ ಒಡಹುಟ್ಟಿದವನು. ಸ್ವುರದ್ರೂಪಿಯಾಗಿದ್ದ ಇವನಿಗೆ ಐದು ಸೋದರಿಯರಿದ್ದರು. ರೋಹಿಣಿ ಮೊದಲ ಹೆಂಡತಿ. ಬಾಹ್ಲಿಕ, ಕಾಶೀರಾಜ, ಕರವೀರರಾಜರೂ ಇವನ ಮಾವಂದಿರು ದೇವಕಿಯೊಂದಿಗೆ ಕಂಸ ಇವನನ್ನು ಸೆರೆಮನೆಯಲ್ಲಿಟ್ಟ, ದೇವಕಿಯ ಆರುಮಕ್ಕಳನ್ನು ಕಂಸ ಕೊಂದ. ಏಳನೆಯವನು ಬಲರಾಮ, ಎಂಟನೆಯ ಮಗನೆ ಶ್ರೀಕೃಷ್ಣ. ಭಗವಂತನ ಆಜ್ಞೆಯಂತೆ ಕೃಷ್ಣನನ್ನು ಗೋಕುಲಕ್ಕೆ ಒಯ್ದು ಯಶೋದೆ ಹತ್ತಿರವಿರಿಸಿ ಅಲ್ಲಿದ್ದ ದುರ್ಗೆಯನ್ನು ತಂದೊಪ್ಪಿಸಿದ. ಕಂಸವಧೆ ನಂತರ ಕೃಷ್ಣ ಇವರನ್ನು ಸೆರೆಯಿಂದ ಮುಕ್ತಗೊಳಿಸಿದ. ನಾರದರಿಂದ ಉಪದೇಶ ಪಡೆದ. ಈತನಿಗೆ ಒಂಬತ್ತು ಸೋದರರು ಐವರು ಸೋದರಿಯರಿದ್ದರು. ಉದ್ಧವ ಇವನ ಸೋದರ ದೇವಭಾಗನ ಮಗ. ಇವನು ಕಡೆಯವರೆಗೂ ದ್ವಾರಕೆಯಲ್ಲಿ ನೆಲೆಸಿದ. ಅರ್ಜುನನಿಗೆ ಯದುವಂಶದ ವಿನಾಶದ ವಿಷಯ ತಿಳಿಸಿದ. ಕೃಷ್ಣ ಪರಂಧಾಮಕ್ಕೆ ಹೋದ ವಿಷಯ ತಿಳಿದು ತನ್ನ ಪತ್ನಿಯರೊಂದಿಗೆ ದೇಹತ್ಯಾಗ ಮಾಡಿದ. ಪೌಂಡ್ರಕ, ಶೃಗಾಲರು ಪುತ್ರಿಕಾಪುತ್ರ ಧರ್ಮದಿಂದ ಇವನಿಗೆ ಮಕ್ಕಳಾಗಲಿಲ್ಲ. ಇವನು ಕ್ಷತ್ರಿಯನಾದರೂ ಬ್ರಹ್ಮಶಾಪದಿಂದ ರಾಜನಾಗಲಿಲ್ಲ. (ಹಿಂದೊಮ್ಮೆ ವಸುದೇವ ದೇವಕಿಯರು ಪ್ರಶ್ನಿ ಸುತಪಸ್ ಎಂಬ ದಂಪತಿಗಳಾದಾಗ ಶ್ರೀ ಹರಿ ಮಗನಾಗಬೇಕೆಂದು ತಪಸ್ಸು ಮಾಡಿದ್ದರು. ಪ್ರತ್ಯಕ್ಷನಾದ ವಿಷ್ಣುವು ಅವರಲ್ಲಿ ಮೂರು ಬಾರಿ ಅಂದರೆ ಪ್ರಶ್ನಿ ಗರ್ಭ, ವಾಮನ, ಕೃಷ್ಣನಾಗಿ ಅವತರಿಸಿ ಅನುಗ್ರಹಿಸಿದ.) |
| – | ಇಲ್ವಲನೆಂಬ ದೈತ್ಯನ ತಮ್ಮ. ಇಲ್ವಲ ಇವನನ್ನು ಆಡು ಅಥವಾ ಕುರಿಯನ್ನಾಗಿ ಮಾಡಿಕೊಂಡು ಆ ಮಾಂಸವನ್ನು ಬ್ರಾಹ್ಮಣರಿಗೆ ತಿನ್ನಿಸುತ್ತಿದ್ದ. ನಂತರ ಇವನನ್ನು ಕೂಗಲು ಅತಿಥಿ ಬ್ರಾಹ್ಮಣರ ಹೊಟ್ಟೆ ಸಿಗಿದು ಹೊರಬರುತ್ತಿದ್ದ. ಒಮ್ಮೆ ಅಗಸ್ತ್ಯರಿಗೆ ಹೀಗೆ ಮಾಡಲು ಹೋಗಿ ಅವರ ಮಾತಿನಂತೆ ಹೊಟ್ಟೆಯಲ್ಲೆ ಜೀರ್ಣವಾಗಿ ಈ ನೀಚ ಸತ್ತ. |
| – | ಸುಂದರ ಬಾಲರೂಪ. ದೇವತೆಗಳ ಪ್ರಾರ್ಥನೆಯಂತೆ ಈ ವೈವಸ್ವತ ಮನ್ವಂತರದ ಏಳನೆಯ ತ್ರೇತಾಯುಗದಲ್ಲಿ ಅವತರಿಸಿ ಬಂದ. ಬ್ರಹ್ಮಚಾರಿ. ಬಲಿಯ ಯಜ್ಞಮಂಟಪಕ್ಕೆ ಹೋಗಿ ಬಲಿಯನ್ನು ಮೂರು ಹೆಜ್ಜೆ ಭೂಮಿಯನ್ನು ಯಾಚಿಸಿದ. ತ್ರಿವಿಕ್ರಮ ರೂಪತಾಳಿ ಎರಡು ಹೆಜ್ಜೆಗಳಿಂದ ಭೂ ಅಂತರಿಕ್ಷಗಳನ್ನು ಅಳೆದ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ವಾಯು | ದೇವತೆ | ವಾಯು | – | ಭಾಗವತ | ಕಶ್ಯಪ, ಅದಿತಿ | ಮೋಹಿನೀ |
| ವಾಯು | ಋಜುಗಳು | -- | – | ಭಾಗವತ | ಸಂಕರ್ಷಣ ಜಯ | ಭಾರತಿ |
| ವಾಲಖಿಲ್ಯರು | ಮಹರ್ಷಿಗಳು | -- | – | ಭಾಗವತ | ಕ್ರತು, ಕ್ರಿಯಾದೇವಿ | - |
| ವಾಲಿ | ಇಂದ್ರ | ಶ್ರೀಹರಿ | ತ್ರೇ. | ರಾ. | ಋಕ್ಷರಾಜ | ತಾರಾ |
| ವಾಲ್ಮೀಕಿ | ಮಹರ್ಷಿ | ಬ್ರಾಹ್ಮಣ | ತ್ರೇ. | ರಾ. | ಪ್ರಾಚೇತಸ (ಭಾರದ್ವಾಜರ ಮೊಮ್ಮಗ) | – |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಬ್ರಹ್ಮಾಂಡದ ಕಟಾಕ್ಷಕ್ಕೆ ಇವನ ಹೆಬ್ಬೆರಳಿನ ಉಗುರು ತಾಕಿ ಅಲ್ಲಿಂದ ಗಂಗೆ ಹರಿದಳು. ಮೂರನೆಯ ಹೆಜ್ಜೆ ಎಂದು ಬಲಿಯನ್ನು ಸುತಳಲೋಕಕ್ಕೆ ತಳ್ಳಿ ಅಲ್ಲಿ ಇನ್ನೊಂದು ರೂಪದಿ ನೆಲೆಸಿ ಅನುಗ್ರಹಿಸಿದ. ಇವನಿಂದ ದೇವೇಂದ್ರನಿಗೂ ಅನುಗ್ರಹವಾಯಿತು. ದಶಾವತಾರದಲ್ಲಿ ಐದನೇ ವಿಷ್ಣುವಿನ ಅವತಾರ. |
| - | ವಾಯುವ್ಯ ದಿಗಧಿಪತಿ, ಪಂಚಭೂತಗಳಲ್ಲಿ ಒಂದರ ಅಭಿಮಾನಿ. ಕಪಿಲವರ್ಣದವನಾಗಿ ಅಂಕುಶ ಆಯುಧ ಧರಿಸಿದವನು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬ ರೂಪಗಳುಳ್ಳವನು. ಇದಲ್ಲದೆ ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯಗಳೆಂಬ ಉಪವಾಯುರೂಪಗಳುಳ್ಳವನು. ಇವನನ್ನು ಪ್ರವಹ ವಾಯು ಎನ್ನುವರು. ಜಡವಾಯುವಿನ ಅಭಿಮಾನಿ. |
| - | ಋಜುಶತಸ್ಥರಲ್ಲಿ 99ನೇಯವರು. ಮುಂದಿನ ಕಲ್ಪದಲ್ಲಿ ಬ್ರಹ್ಮಪಟ್ಟಕ್ಕೆ ಬರುವವರು. ಜೀವೋತ್ತಮರು. ಪರ ಶುಕ್ಲತ್ರಯರಲ್ಲಿ ಒಬ್ಬರು. ಭಗವಂತನ ಪ್ರಥಮ ಪ್ರತಿಬಿಂಬರು. ಅಂಜನಾದೇವಿಯಲ್ಲಿ ಹನುಮನಾಗಿ, ಕುಂತಿಯಲ್ಲಿ ಭೀಮನಾಗಿ, ಮಧ್ಯಗೇಹ ದಂಪತಿಗಳಲ್ಲಿ ಮಧ್ವರಾಗಿ ಅವತಾರ ತಾಳಿದವರು. ಸಕಲ ಜೀವರಲ್ಲಿ ನೆಲೆಸಿ ಪ್ರಾಣ-ತ್ರಾಣರಾಗಿ ಇರುವವರು. ಸರ್ವಜ್ಞರಾಗಿ ಸಕಲ ವೇದವನ್ನು ತಿಳಿದವರು. ಸಕಲ ಜೀವರ ಹೃದಯಸ್ಥರಾದವರು. ಭಗವಂತನ ಕಾರ್ಯದಲ್ಲಿ ಪ್ರಧಾನಾಂಗರು ಇವರು. |
| - | 60 ಸಾವಿರ ಮಂದಿ. ಅಂಗುಷ್ಠದಷ್ಟು ಚಿಕ್ಕರೂಪಧರಿಸಿದವರು. ನಿತ್ಯ ಬ್ರಹ್ಮಚಾರಿಗಳಾಗಿ ವ್ರತಪರಾಯಣರು. ಸದಾ ಸೂರ್ಯನ ಮುಂದೆ ಸಂಚರಿಸುವರು. ಸೂರ್ಯನ ಕಿರಣಗಳನ್ನು ಪಾನ ಮಾಡುವ ಋಷಿಗಳು. ಇವರ ತಪಸ್ಸಿನ ಪ್ರಭಾವದಿಂದ ಗರುಡ ಜನಿಸಿದ. ಗರುಡ ಇವರನ್ನೂ ಕಾಪಾಡಿದ. ಇವರು ಬ್ರಹ್ಮಸಭೆಗೂ ಹೋಗುವರು. ದೇವತೆಗಳ ಕಾರ್ಯಸಿದ್ಧಿಗಾಗಿ ತಪಸ್ಸನ್ನಾಚರಿಸುವರು. ಈ ಮಹಾತ್ಮರ ತಪಸ್ಸಿನ ಪ್ರಭಾವದಿಂದ ಎಲ್ಲರಿಗೂ ಕ್ಷೇಮವಾಗಿದೆ. |
| ಅಂಗದ | ಕಿಷ್ಕಿಂದೆಯಲ್ಲಿ ವಾನರರ ರಾಜ. ಸುಗ್ರೀವನ ಸೋದರ. ತಮ್ಮನ ಪತ್ನಿಯನ್ನು ಅಪಹರಿಸಿದ. ಒಮ್ಮೆ ರಾವಣನನ್ನು ಸೋಲಿಸಿ ಈ ಹತ್ತು ತಲೆಯವನನ್ನು ಕೊಂಕಳಲ್ಲಿ ಸಿಕ್ಕಿಸಿಕೊಂಡು ಸಮುದ್ರತೀರಕ್ಕೆ ಹಾರಿದ್ದ. ಪರಾಕ್ರಮಿ. ಕಾರ್ತವೀರ್ಯನನ್ನೂ ಸೋಲಿಸಿದ್ದ. ಸಮುದ್ರಮಥನಕಾರ್ಯದಲ್ಲಿ ಭಾಗವಹಿಸಿದ್ದ. ದುಂದುಭಿ ಮತಂಗರಿಂದಾಗಿ ಸುಗ್ರೀವನ ಜೊತೆ ದ್ವೇಷ ಮಾಡಿದ. ವಾಲಿ ಸುಗ್ರೀವರ ಯುದ್ಧ. ಸುಗ್ರೀವಗೆ ಶ್ರೀರಾಮ ಸಹಕರಿಸಿ ವಾಲಿಯನ್ನು ಬಾಣದಿಂದ ಕೊಂದ. ತನ್ನ ತಪ್ಪಿನ ಅರಿವಾಗಿ ಪಶ್ಚಾತ್ತಾಪ ಪಟ್ಟ ಇವನು ತನ್ನ ಮಗನನ್ನು ರಾಮಸುಗ್ರೀವರಿಗೆ ಅರ್ಪಿಸಿದ. |
| - | ಬಾಲ್ಯದಿಂದಲೆ ಕಾಡಿನಲ್ಲಿದ್ದು ಕಾಡಿನ ಬೇಡರ ಜೊತೆ ಸೇರಿ ದಾರಿಕಳ್ಳನಾಗಿದ್ದ. ಬ್ರಾಹ್ಮಣ (ದಂತಕಥೆಗಳಿವೆ). ಕಾಡಿನಲ್ಲೊಮ್ಮೆ ಸಪ್ತ ಋಷಿಗಳನ್ನು ಕಂಡು ಅವರಿಂದ ರಾಮಮಂತ್ರ ಉಪದೇಶ ಪಡೆದ. ಮಂತ್ರ ಜಪಿಸುತ್ತಾ ಮೈಮರೆತಾಗ ಮೈಮೇಲೆ ಹುತ್ತ ಬೆಳೆದದ್ದನ್ನು ನೋಡಿದ ಸಪ್ತ ಋಷಿಗಳು ಇವನನ್ನು ವಾಲ್ಮೀಕಿ ಎಂದು ಕರೆದರು. ಒಮ್ಮೆ ಆನಂದವಾಗಿದ್ದ ಕ್ರೌಂಚ ಪಕ್ಷಿಗಳಲ್ಲಿಯ ಗಂಡನ್ನು ಒಬ್ಬ ಬೇಡ ಕೊಂದುದನ್ನು ಕಂಡ ವಾಲ್ಮೀಕಿ ಶೋಕತಪ್ತನಾಗಿ ಶಪಿಸಿದ. ಶೋಕ ಶ್ಲೋಕವಾಗಿ ಬಂತು. ಚಿಂತಾಲೋಕದಲ್ಲಿ ಮುಳುಗಿದ ಇವನನ್ನು ಸಂತೈಸಿದ ಬ್ರಹ್ಮದೇವರು ರಾಮಾಯಣವನ್ನು ಬರೆಯಲು ಆದೇಶವಿತ್ತರು. ನಾರದರು ಸಾರರೂಪದಲ್ಲಿ ಹೇಳಿದುದನ್ನು ವಿಶದಪಡಿಸಿ ಏಳುಕಾಂಡಗಳ ರಾಮಾಯಣವನ್ನು ಕಾವ್ಯಮಯವಾಗಿ ರಚಿಸಿ ಆದಿಕವಿ ಎನ್ನಿಸಿದರು. ಸೀತಾದೇವಿಯನ್ನು ರಾಮನ ಅಪ್ಪಣೆಯಂತೆ ಲಕ್ಷ್ಮಣ ಕಾಡಿನಲ್ಲಿ ಬಿಟ್ಟ. ಅದು ವಾಲ್ಮೀಕಿ ಆಶ್ರಮವಾಗಿತ್ತು. ಸೀತೆಯಲ್ಲಿ ಹುಟ್ಟಿದ ಲವಕುಶರಿಗೆ ತಾನು ರಚಿಸಿದ ರಾಮಾಯಣವನ್ನು ಬಾಯಿಪಾಠ ಮಾಡಿಸಿದರು. ಜೊತೆಗೆ ಶಸ್ತ್ರಾಭ್ಯಾಸವನ್ನೂ ಮಾಡಿಸಿದರು. ಈ ಮಕ್ಕಳಿಂದ ಶ್ರೀರಾಮನ ಎದುರಲ್ಲಿ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ವಾಸುಕಿ | ಸರ್ಪರಾಜ | -- | - | ಭಾಗವತ | ಕಶ್ಯಪ, ಕದ್ರು | ಶತಶೀರ್ಷೆ |
| ವಿಕರ್ಣ | ಅಸುರ | ಅತಿಕಾಯ | ದ್ವಾ | ಮ.ಭಾ. | ಧೃತರಾಷ್ಟ್ರ ಗಂಧಾರಿ | - |
| ವಿಚಿತ್ರ ವೀರ್ಯ | ಅರಸು | -- | ದ್ವಾ. | ಮ.ಭಾ. | ಶಂತನು, ಸತ್ಯವತಿ | ಅಂಬಿಕೆ ಅಂಬಾಲಿಕೆ |
| ವಿಂದ ಅನುವಿಂದ | ಅರಸು | -- | ದ್ವಾ. | ಮ.ಭಾ. | ಅವಂತಿರಾಜ ರಾಜಾಧಿದೇವಿ | - |
| ವಿದುರ | ಯಮ | -- | ದ್ವಾ. | ಮ.ಭಾ. | ಅಂಬಿಕೆಯದಾಸಿ (ವೇದವ್ಯಾಸರು) | ಪಾರಸವಿ (ಆರುಣಿ) |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ರಾಮಾಯಣ ಗಾನ ಮಾಡಿಸಿದರು. ಸೀತೆಯೊಂದಿಗೆ ಮಕ್ಕಳನ್ನು ಶ್ರೀರಾಮನಿಗೆ ಒಪ್ಪಿಸಿದರು. (ಇವರು ಭೃಗು ಋಷಿಗಳ ಮೊಮ್ಮಗನೂ ಆಗಿದ್ದರು.) |
| - | ಆಸ್ತಿಕನ ಮಾವ, ಜರತ್ಕಾರುವಿನ ಸೋದರ. ದೇವದಾನವರು ಸಮುದ್ರಮಥನದ ಕಾಲದಲ್ಲಿ ಇವನನ್ನು ಹಗ್ಗವನ್ನಾಗಿಸಿ ಮಂದರಪರ್ವತಕ್ಕೆ ಸುತ್ತಿದ್ದರು. ಎಲ್ಲ ನಾಗಗಳು ಸೇರಿ ಈತನನ್ನು ನಾಗರಾಜನನ್ನಾಗಿಸಿ ಅಭಿಷೇಕ ಮಾಡಿದವು. ಈ ಸರ್ಪ ವರುಣ ಲೋಕದಲ್ಲಿದ್ದು ಅವನನ್ನು ಸೇವಿಸುವ. ಪಾಂಡವರ ಪಕ್ಷಪಾತಿ ಆಗಿದ್ದ |
| - | ದುರ್ಯೋಧನನ ಎರಡನೇ ತಮ್ಮ. ದ್ರೌಪದಿಯ ವಸ್ತ್ರಾಪಹರಣ ಕಾಲದಲ್ಲಿ ತಪ್ಪೆಂದು ಹೇಳುತ್ತಾ ನಾಟಕ ಮಾಡಿದ. ಗೋಗ್ರಹಣ ಕಾಲದಲ್ಲಿ ಅರ್ಜುನನೊಂದಿಗೆ ಯುದ್ಧಮಾಡಿ ಓಡಿಹೋದ. ಭಾರತಯುದ್ಧದಲ್ಲಿ ಭೀಮನಿಂದ ಸತ್ತ. ಇವನೊಬ್ಬ ಡಾಂಭಿಕ. |
| ಧೃತರಾಷ್ಟ್ರ, ಪಾಂಡು (ಕ್ಷೇತ್ರಜರು) | ಚಂದ್ರವಂಶಜ. ಚಿತ್ರಾಂಗದನ ತಮ್ಮ. ಭೀಷ್ಮರ ಆಜ್ಞೆಯಂತೆ ಅರಸನಾದ. ಕಾಶೀರಾಜನ ಹೆಣ್ಣುಮಕ್ಕಳನ್ನು ಭೀಷ್ಮ ತಂದು ಮದುವೆ ಮಾಡಿದ. ಅತಿಕಾಮದಿಂದಾಗಿ ಕ್ಷಯರೋಗದಿಂದ ಇವನು ಮಕ್ಕಳಿಲ್ಲದೆ ಮರಣ ಹೊಂದಿದ. (ಏಳು ವರುಷ ಒಂದೇ ವಿಷಯಾಸಕ್ತನಾಗಿ ಸತ್ತ.) ನಂತರ ವ್ಯಾಸರ ಅನುಗ್ರಹದಿಂದ ಇವನ ಮಡದಿಯರಲ್ಲಿ ಧೃತರಾಷ್ಟ್ರ ಹಾಗೂ ಪಾಂಡು ಜನಿಸಿದರು. |
| - | ಅತಿರಥ, ವಿಂದ ಅನುವಿಂದರು ಸೋದರರು. ದುರ್ಯೋಧನನ ಪರವಾಗಿ ಯುದ್ಧಮಾಡಿ. 14ನೇ ದಿನ ಅರ್ಜುನ ನಿಂದ ಹತನಾದರು. ಇವರು ದುರ್ಯೋಧನನ ಭಕ್ತರಾಗಿದ್ದರು. ಇವರ ತಂಗಿ ಮಿತ್ರವಿಂದಾ ಶ್ರೀಕೃಷ್ಣನ ಒಬ್ಬ ಮಹಿಷಿ |
| | ವ್ಯಾಸರ ಅನುಗ್ರಹದಿಂದ ಅನುಲೋಮ ಸಂತತಿಯಲ್ಲಿ ಜನಿಸಿದ. ಅಣಿಮಾಂಡವ್ಯರ ಶಾಪದಿಂದಾಗಿ ಶೂದ್ರ ಯೋನಿಯಲ್ಲಿ ಜನಿಸಿದರೂ ಪೂರ್ಣಜ್ಞಾನಿಯಾಗಿದ್ದ. ಭೀಷ್ಮರೇ ಇವನನ್ನು ಪೋಷಿಸಿದರು. ಧರ್ಮಿಷ್ಠ ಪಾಂಡು ಧೃತರಾಷ್ಟ್ರರಿಗೆ ಮಂತ್ರಿಯಾಗಿದ್ದ. ದುರ್ಯೋಧನನು ಹುಟ್ಟಿದಾಗ ಉಂಟಾದ ಅಪಶಕುನಗಳಿಂದ ಅವನನ್ನು ಹೊರಹಾಕಲು ಅಣ್ಣನಿಗೆ ಆದೇಶ ನೀಡಿದ್ದ. ಸತ್ಯಧರ್ಮಗಳಿಗಾಗಿ ಪಾಂಡವರ ಪಕ್ಷಪಾತಿಯಾಗಿದ್ದ. ಅರಗಿನಮನೆಯ ಗುಟ್ಟನ್ನು ಪಾಂಡವರಿಗೆ ತಿಳಿಸಿದ. ಅಲ್ಲದೇ ಅಲ್ಲಿಂದಾ ಪಾರಾಗಲು ಒಂದು ಸುರಂಗಮಾರ್ಗವನ್ನು ಮಾಡಿಸಿದ. ಅಣ್ಣನಿಗೆ ಆಗಾಗ ಧರ್ಮೋಪದೇಶ ನೀಡುತ್ತಿದ್ದ. ಧರ್ಮಜನ ರಾಜಸೂಯಯಾಗದಲ್ಲಿ ಧನವ್ಯಯದ ಕಾರ್ಯ ಮಾಡಿದ. ದ್ಯೂತಕ್ರೀಡೆಗೆ ವಿರೋಧಿಸಿದ. ದ್ರೌಪದಿಯ ವಸ್ತ್ರಾಪಹರಣ ಸಂದರ್ಭದಲ್ಲಿ ಎದ್ದು ನಿಂತು ಅನ್ಯಾಯವೆಂದು ಪ್ರತಿಭಟಿಸಿದ. ಪಾಂಡವರು ಕಾಮ್ಯಕವನದಲ್ಲಿದ್ದಾಗ ಪಾಂಡವರನ್ನು ಸೇರಿ ಸಲಹೆಗಳನ್ನಿತ್ತ. ಅಣ್ಣನಿಗೆ ನೀತಿಯುಕ್ತ ಉಪದೇಶ (ವಿದುರ ನೀತಿ). ನಂತರ ಸನತ್ಸುಜಾತರನ್ನು ಪ್ರಾರ್ಥಿಸಿ ಕರೆಸಿ ಉಪದೇಶ ಮಾಡಿಸಿದ. ಪಾಂಡವರೊಂದಿಗೆ ಸಂಧಿ ಮಾಡಿಕೊಳ್ಳಲು ಉಪದೇಶ ನೀಡಿದ. ಶ್ರೀಕೃಷ್ಣ ಸಂಧಿಗಾಗಿ ಆಗಮಿಸಿದಾಗ ಇವರ ಮನೆಗೆ ಬಂದ. ಇವರಿಂದ ಅತಿಥಿ ಸತ್ಕಾರ. ಸಭೆಯಲ್ಲಿಯ ದುರ್ಯೋಧನನ ದುರ್ನಡತೆಗೆ ಎಚ್ಚರಿಸಿದ. ಯುದ್ಧದ ನಿಶ್ಚಯದಿಂದ ನೊಂದವನಾದ. ಯುದ್ಧ ಸಂದರ್ಭದಲ್ಲಿ ಭಾರತದ ತೀರ್ಥಯಾತ್ರೆ ಗೆಂದುಹೋದ. ದುರ್ಯೋಧನಾದಿಗಳ ಪತನದ ನಂತರ ಧೃತರಾಷ್ಟ್ರ ಕುಂತಿಯರ ಸೇವೆಯಲ್ಲಿ ನಿರತನಾದ. ಅವರೊಂದಿಗೆ ಕಾಡಿಗೆ ಹೋದ. ಏಕಾಂತದಲ್ಲಿ ಬಹು ಕೃಶನಾದ ವಿದುರ ಪ್ರಭಾಸದಲ್ಲಿ ದೇಹತ್ಯಾಗಮಾಡಿ ಆ ದೇಹದಿಂದ ಬಂದ ಜ್ಯೋತಿಯು ಧರ್ಮನಲ್ಲಿ ಲೀನವಾಯಿತು (ಇಬ್ಬರೂ ಯಮನ ಅವತಾರರಾದ್ದರಿಂದ). ಆಕಾಶವಾಣಿಯಂತೆ ವಿದುರನಿಗೆ ಸಾಂತಾನಿಕಲೋಕ ಪ್ರಾಪ್ತವಾಯಿತು. ಧರ್ಮದ ಪ್ರತಿನಿಧಿಯಾಗಿ, ಪಾಂಡವ ಪಕ್ಷಪಾತಿಯಾಗಿದ್ದ. ನೀತಿಶಾಸ್ತ್ರ ಪ್ರತಿನಿಧಿಯಂತಿದ್ದ. ಹೀಗೆ ಇವನು ಅಧ್ಯಾತ್ಮದಲ್ಲಿ ನೀತಿಯ ಸಂಕೇತ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ವಿಕುಕ್ಷಿ | ಅರಸು | -- | ಕೃ. | ಭಾಗವತ | ಇಕ್ಷ್ವಾಕು | - |
| ವಿದರ್ಭ | ಅರಸು | -- | ದ್ವಾ. | ಮ.ಭಾ. | ಜಾಮಘ,ಶೈಬ್ಯೆ | ರಾಜಪುತ್ರಿ |
| ವಿದೂರಥ | ಅರಸು (ಅಸುರ) | -- | ದ್ವಾ. | ಮ.ಭಾ. | ಕುರು | - |
| ವಿದ್ಯುಜ್ಜಿಹ್ವ | ಅಸುರ | -- | ತ್ರೇ. | ರಾ. | - | ಶೂರ್ಪಣಖಿ |
| ವಿದ್ಯುನ್ಮಾಲಿ | ಅಸುರ | -- | ದ್ವಾ. | ಮ.ಭಾ. | ತಾರಕಾಸುರ | - |
| ವಿನತಾ | ದೇವತೆ | -- | - | ಭಾಗವತ | ದಕ್ಷ, ವೀರಣೀ | ಕಶ್ಯಪರು |
| ವಿಪ್ರಚಿತ್ತಿ | ರಾಕ್ಷಸ | -- | - | ಭಾಗವತ | ಕಶ್ಯಪ,ದನು | ಸಿಂಹಿಕೆ |
| ವಿಭಾಂಡಕ | ಮಹರ್ಷಿ | -- | ದ್ವಾ. | ಮ.ಭಾ. | ಕಶ್ಯಪ, ಕುಲಜ | (ಊರ್ವಶಿ) |
| ವಿಭೀಷಣ | ಕಣ್ವರು | -- | ತ್ರೇ. | ರಾ. | ವಿಶ್ರವಸ ಮಾಲಿನಿ | ಸುರಮೆ |
| ವಿರಾಟ | ಅರಸು | ಮರುತ್ ಹಹಾ(ವಿವಹ) | ದ್ವಾ. | ಮ.ಭಾ. | - | ಸುರಥೆ, ಸುಧೇಷ್ಣಾ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಪುರಂಜಯ | ಶ್ರಾದ್ಧಕ್ಕೆಂದು ತಂದೆ ಮಾಂಸ ತರಲು ಹೇಳಲು ಒಂದು ಮೊಲವನ್ನು ಕೊಂದು ಹಸಿವೆಯಿಂದ ಸ್ವಲ್ಪ ತಿಂದು ತಂದ. ಅದಕ್ಕೆ ಕುಪಿತ ತಂದೆ ಹೊರ ಹಾಕಿದ. ನಂತರ ಉದ್ಧಾರನಾದ. ಸೂರ್ಯವಂಶದಲ್ಲಿ ಬಂದ ರಾಜ. |
| ಕ್ರಥ, ಕೈಶಿಕ, ರೋಮಪಾದ, | ಯದುವಂಶಜ. ಜಾಮಘ ಯುದ್ಧದಲ್ಲಿ ಜಯಶಾಲಿಯಾಗಿ ಕನ್ಯಾರತ್ನವನ್ನು ತನ್ನ ರಥದಲ್ಲಿ ತನಗಾಗಿ ತಂದ. ಹೆಂಡತಿ ಕೇಳಲು ಹೆದರಿ 'ನಿನ್ನ ಸೊಸೆ' ಎಂದ. ತನ್ನ ಮಗನಿಗೇ ಕೊಟ್ಟ ಹೆಂಡತಿಗೆ ಹೆದರುವವನಾಗಿದ್ದ. ಇವನು ವಂಶವನ್ನು ಬೆಳೆಸಿದ. |
| ಅನಶ್ವಾನ್ | ಚಂದ್ರವಂಶಜ. ರಾಜ್ಯವರ್ಧನನ ಮಾವ. ಪರಶುರಾಮರು ಬಂದಾಗೆಲ್ಲ ಹೆದರಿ ಕಾಡಿನಲ್ಲಿ ಅಡಗಿಕೊಳ್ಳುತ್ತಿದ್ದ. ಯುದ್ಧದಲ್ಲಿ ಕೃಷ್ಣನಿಂದ ಸತ್ತ. |
| | ರಾವಣನ ಭಾವಮೈದುನ. ರಾವಣನು ಒಂದು ಯುದ್ಧದಲ್ಲಿ ಇವನೆಂದು ತಿಳಿಯದೆ ಕೊಂದ. ಈ ದುಷ್ಟ ಅವನ ತೀಕ್ಷ್ಣ ಜಿಹ್ವೆಯಿಂದ ತಿವಿದು ಸಾಯಿಸುತ್ತಿದ್ದ. |
| – | ತಾರಕಾಸುರನ ಪಟ್ಟಣದ ಕಬ್ಬಿಣದ ಅಧಿಪತಿ. ತಾರಕ್ಷ, ಕಮಲಾಕ್ಷ ಇವನ ಸೋದರರು. ಬ್ರಹ್ಮನ ವರವಿದ್ದರೂ ಶಿವನ ಅಸ್ತ್ರದಿಂದ ಪಟ್ಟಣದ ಸಮೇತ ಸುಟ್ಟು ಬೂದಿಯಾದ. |
| ಗರುಡ, ಅರುಣ ತಾರ್ಕ್ಷ್ಯ, ವಾರುಣಿ ಅರಿಷ್ಟನೇಮಿ | ಕದ್ರು ಈಕೆಯ ಸವತಿ. ಕದ್ರುವಿನಿಂದ ವಂಚಿತಳಾಗಿ ಐನೂರು ವರ್ಷ ದಾಸಿಯಾಗಿದ್ದಳು. ಗರುಡ ಅಮೃತವನ್ನು ತಂದು ದಾಸ್ಯದಿಂದ ಮುಕ್ತಗೊಳಿಸಿದ. |
| ತ್ರ್ಯಂಬ ಮುಂತಾ. | ಇವನು ಭೂಮಿಯಲ್ಲಿ ಜರಾಸಂಧನಾಗಿ ಹುಟ್ಟಿ ಬಂದ. ಲೋಕಕಂಟಕನಾಗಿದ್ದ. ಇವನಿಗೆ ಶಲ್ಯ, ವಾತಾಪಿ, ನಮುಚಿ, ಇಲ್ವಲ, ಅಂಧಕ, ನರಕ, ಕಾಲನಾಭ, ಸ್ವರ್ಭಾನು (ರಾಹು), ವಕ್ತ್ರಯೋಧಿ ಮುಂತಾದ ದೈತ್ಯ ಮಕ್ಕಳಿದ್ದರು. ಬ್ರಹ್ಮ ವರವಿತ್ತು, ಹಿಂದೆ ಮುಖ್ಯ ಪ್ರಾಣನಿಂದ ಹತನಾಗಿದ್ದ. ಬ್ರಹ್ಮದ್ವೇಷಿ. ತಮಸ್ಸನ್ನು ಸೇರಿದ. |
| ಋಷ್ಯಶೃಂಗ | ಮಹಾತಪಸ್ವಿ ಸದಾಚಾರಿ. ಒಮ್ಮೆ ಸರೋವರದಲ್ಲಿ ಸ್ನಾನ ಮಾಡುವಾಗ ಊರ್ವಶಿಗೆ ಮೋಹಪಟ್ಟು ವೀರ್ಯಸ್ಖಲನವಾಗಿ ನೀರಿನಲ್ಲಿ ಬಿತ್ತು. ಅದನ್ನು ಒಂದು ಜಿಂಕೆ ನೀರಿನೊಂದಿಗೆ ನುಂಗಿ ಗರ್ಭಿಣಿಯಾಗಿ ಋಷ್ಯಶೃಂಗನನ್ನು ಪಡೆಯಿತು. |
| – | ರಾವಣ, ಕುಂಭಕರ್ಣ, ಶೂರ್ಪಣಖಿಯರ ತಮ್ಮ. ಧರ್ಮಿಷ್ಠ ದೈವಭಕ್ತ, ತಾಯಿಯ ವಿಶೇಷ ಪ್ರಾರ್ಥನೆಯಿಂದ ಜನಿಸಿದ. ಗೋಕರ್ಣದಲ್ಲಿ ತಪಸ್ಸನ್ನಾಚರಿಸಿ ಬ್ರಹ್ಮನನ್ನು ಒಲಿಸಿಕೊಂಡು ಧರ್ಮಬುದ್ಧಿಯನ್ನು ವರವಾಗಿ ಬೇಡಿದ. ಬ್ರಹ್ಮದೇವರೇ ಚಿರಂಜೀವತ್ವವನ್ನು ಅನುಗ್ರಹಿಸಿದರು. ರಾವಣನ ಬಳಿಯಲ್ಲೇ ಇದ್ದರೂ ಧರ್ಮಪಾಲನೆ ಬಿಡಲಿಲ್ಲ. ಹನುಮಂತ ಲಂಕೆಗೆ ಹೋಗಿ ಧ್ವಂಸ ಮಾಡಿ ರಾವಣನ ಮುಂದೆ ನಿಂತಾಗ ದೂತವಧೆ ತಪ್ಪೆಂದು ನೀತಿ ಹೇಳಿದ. ಸೀತಾಪಹರಣ ತಪ್ಪೆಂದು ವಾದಿಸಲು ರಾವಣನಿಂದ ತಿರಸ್ಕೃತನಾಗಿ ಶ್ರೀರಾಮನ ಬಳಿ ಬಂದು ಆಶ್ರಯ ಬೇಡಲು ರಾಮ ಅಭಯವಿತ್ತು ಸ್ವಾಗತಿಸಿದ. ಇಂದ್ರಜಿತ್, ರಾವಣ, ಕುಂಭಕರ್ಣರ ರಹಸ್ಯಗಳನ್ನು ತಿಳಿಸಿದ. ರಾವಣನ ಉತ್ತರ ಕ್ರಿಯೆಗಳನ್ನು ಮಾಡಿದ. ಯುದ್ಧದ ನಂತರ ಲಂಕೆಗೆ ಅಧಿಪತಿಯಾದ. ತನ್ನ ಪುಷ್ಪಕವಿಮಾನವನ್ನು ಶ್ರೀರಾಮನಿಗೆ ಅರ್ಪಿಸಿ ಅಯೋಧ್ಯೆಗೆ ಕಳುಹಿಸಿದ. ಧರ್ಮರಾಯನ ರಾಜಸೂಯಯಾಗದ ಸಂದರ್ಭದಲ್ಲಿ ಘಟೋತ್ಕಚ ಲಂಕೆಗೆ ಹೋಗಿ ಇವನಿಂದ ಕಪ್ಪಕಾಣಿಕೆ ತಂದ. ಇವನು ಕಲ್ಪಾಂತ ಚಿರಂಜೀವಿ. |
| ಶ್ವೇತ, ಶಂಖ, ಭೂಮಿಂ ಜಯ (ಉತ್ತರಕುಮಾರ) | ಮತ್ಸ್ಯದೇಶದ ಅರಸು. ಇವನ ಮಡದಿ ಸುಧೇಷ್ಣಾನ ಸಹೋದರ ಕೀಚಕನನ್ನು ಸೈನ್ಯಾಧಿಪತಿಯನ್ನಾಗಿಸಿಕೊಂಡಿದ್ದ. ಇವನಿಗೆ ಹತ್ತುಜನ ಸಮರಥ ಸೋದರರು. ರಾಜಸೂಯ ಯಾಗ ಸಂದರ್ಭದಲ್ಲಿ ಸುವರ್ಣಾದಿ ಕಪ್ಪ ಕೊಟ್ಟು ಯಾಗಕ್ಕೆ ಬಂದಿದ್ದ. ಪಾಂಡವರು ಅಜ್ಞಾತವಾಸಕ್ಕೆಂದು ವಿರಾಟನಗರಕ್ಕೆ ಹೋದಾಗ ಎಲ್ಲರಿಗೂ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ವಿರಾಧ | ರಾಕ್ಷಸ | ತುಂಬುರು | ತ್ರೇ. | ರಾ. | – | – |
| ವಿರೋಚನ | ಅರಸು | -- | – | ಭಾಗವತ | ಪ್ರಹ್ಲಾದ | – |
| ವಿಶೋಕ | ಸಾರಥಿ | ಸೂತ | ದ್ವಾ. | ಮ.ಭಾ. | ಶ್ರೀಕೃಷ್ಣ ಕುಬ್ಜಾ (ಸೈರಂಧ್ರಿ) | – |
| ವಿಶ್ರವಸ್ | ಮಹರ್ಷಿ | -- | ತ್ರೇ. | ರಾ. | ಪುಲಸ್ತ್ಯ ಗೋ | ದೇವವರ್ಣಿ ಕೇಕಸಿ |
| ವಿಶ್ವಕರ್ಮ | ವಸು | -- | ತ್ರೇ./ದ್ವಾ. | ಭಾಗವತ | ಪ್ರಭಾಸ, (ಭುವನ) ಬ್ರಹ್ಮವಾದಿನಿ | ವಿರೋಚನೆ(ರಚನಾ) |
| ವಿಶ್ವರೂಪ | ವಸು | -- | – | ಭಾ. | ವಿಶ್ವಕರ್ಮ, (ತ್ವಷ್ಟ್ರು)ರಚನಾ | ಅಸುರಸ್ತ್ರೀ |
| ವಿಶ್ವಾಮಿತ್ರ | ಬ್ರಹ್ಮರ್ಷಿ | -- | ತ್ರಿಯುಗಿ | ರಾ./ಭಾ. | ಗಾಧಿ, ಪುರಕುತ್ಸೆ | ಹೈಮಾವತೀ, ಶಾಲಾ ದೃಷದ್ವತಿ, ರೇಣು |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಬಭ್ರೂ ಉತ್ತರಾ | ಆಶ್ರಯ ಕೊಟ್ಟಿದ್ದ. ಒಂದುವರುಷಕಾಲ ಮಾರುವೇಷದಲ್ಲಿ ಪಾಂಡವರಿದ್ದಾಗ ಸುಶರ್ಮನೊಂದಿಗೆ ಯುದ್ಧ ಮಾಡಿ ವಿರಾಟ ಸೆರೆಸಿಕ್ಕಿದ್ದ. ಆಗ ಧರ್ಮನ ಮಾತಿನಂತೆ ಭೀಮ ಬಿಡಿಸಿದ. ಕೀಚಕನ ವಧಾ ನಂತರ ದುರ್ಯೋಧನಾದಿಗಳು ಗೋಗ್ರಹಣ ನಿಮಿತ್ತ ಯುದ್ಧಕ್ಕೆ ಬಂದಾಗ ಉತ್ತರಕುಮಾರನಿಂದ ಜಯ ಸಿಕ್ಕಿತೆಂಬ ಭ್ರಮೆಯಿಂದ ಕಂಕನಿಗೆ ದಾಳಗಳಿಂದ ಹೊಡೆದ. ನಿಜಸ್ಥಿತಿ ತಿಳಿದು ಎಲ್ಲರನ್ನೂ ಗೌರವಿಸಿದ. ಉತ್ತರೆಯನ್ನು ಅಭಿಮನ್ಯುವಿಗೆ ಕೊಡಲು ಒಪ್ಪಿದ. ಭಾರತಯುದ್ಧದಲ್ಲಿ ಪಾಂಡವರ ಪರವಾಗಿ ಯುದ್ಧಮಾಡಿ ಹದಿನಾಲ್ಕನೇ ದಿನ ದ್ರೋಣರಿಂದ ಮಡಿದ. ಈತ ಒಬ್ಬ ಮಹಾರಥ. ಸ್ವರ್ಗದಲ್ಲಿ ಮರುದ್ಗಣದಲ್ಲಿ ಸೇರಿಕೊಂಡ. |
| - | ಒಮ್ಮೆ ಊರ್ವಶಿಯನ್ನು ಅವಮಾನಿಸಿದಾಗ ಕುಬೇರನಿಂದ ಶಾಪಪಡೆದು ರಾಕ್ಷಸನಾಗಿ ಲೋಕಕಂಟಕನಾದ. ದಂಡಕಾರಣ್ಯದಲ್ಲಿ ರಾಮಲಕ್ಷ್ಮಣರನ್ನು ತಿನ್ನಲು ಕೈಚಾಚಿದ, ಕೈಗಳನ್ನು ಕತ್ತರಿಸಿ ನಂತರ ಅವರಿಂದ ಶಾಪವಿಮೋಚನೆ ಪಡೆದು ಉದ್ಧಾರನಾದ. |
| ಬಲಿ | ದಾನವರಿಗೆ ರಾಜನಾಗಿದ್ದ. ಕುಂಭ ನಿಕುಂಭರು ಇವನ ತಮ್ಮಂದಿರು. ಇವನು ಸುಧನ್ವನೊಂದಿಗೆ ಒಂದು ಹೆಣ್ಣು ಕೇಶಿನಿಗಾಗಿ ವಿವಾದ ಎಬ್ಬಿಸಲು ಪ್ರಹ್ಲಾದ ಬಗೆಹರಿಸಿದ. |
| - | ಭೀಮಸೇನನ ರಥದ ಸಾರಥಿ. ಕೃಷ್ಣ ಮಥುರೆಗೆ ಕಂಸನ ಧನುರ್ಯಾಗಕ್ಕೆ ಬಂದಾಗ ತ್ರಿವಕ್ರೆಯಿಂದ ಜನಿಸಿದವ. ಮಹಾಭಾರತದ ಯುದ್ಧದ ನಂತರ ಬದುಕಿ ಉಳಿದವನು. ಇವನು ನಾರದರ ಶಿಷ್ಯ. ಪಂಚರಾತ್ರಾದಿ ಶಾಸ್ತ್ರವೇತ್ತ. ಹರಿಭಕ್ತ. |
| ಕುಬೇರ, ರಾವಣ ಮುಂ. | ದೇವವರ್ಣಿನಿಯು ಭಾರದ್ವಜರ ಮಗಳು. ಇವಳಿಗೆ ಇಲಬಿಲೆ ಎಂಬ ನಾಮಾಂತರ. ಕೇಕಸಿ ಸುಮಾಲಿ ಎಂಬ ಅಸುರನ ಮಗಳು. ಮಾಲಿನಿಯು ಉತ್ತಮನಾದ ಭಗವದ್ಭಕ್ತ ಬುದ್ಧಿವಂತ ಮಗಬೇಕೆಂದು ಪ್ರಾರ್ಥಿಸಿಕೊಂಡು ವಿಭೀಷಣನನ್ನು ಪಡೆದಳು. |
| ವಿಶ್ವರೂಪಾಚಾರ್ಯ ಸಂಜ್ಞಾದೇವಿ, ವಿಶ್ವ ಕರ್ಮ, ನಲ, ಮುಂ. | ಈತ ದೇವತೆಗಳ ಬಡಿಗ. ಸೂರ್ಯನಿಗೆ ಮಗಳಾದ ಸಂಜ್ಞಾದೇವಿಯನ್ನು ಕೊಟ್ಟ. ಪಾಂಡವರಿಗೆ ಇಂದ್ರಪ್ರಸ್ಥ ವನ್ನು ನಿರ್ಮಿಸಿ ಕೊಟ್ಟ ಇಂದ್ರನ ಆಜ್ಞೆಯಂತೆ. ಬ್ರಹ್ಮರ ಆದೇಶದಂತೆ ತಿಲೋತ್ತಮೆ ಎಂಬ ಅಪ್ಸರೆಯನ್ನು ನಿರ್ಮಾಣ ಮಾಡಿದ. ವರುಣ ಸಭೆ, ಯಮ ಸಭೆಗಳನ್ನು ನಿರ್ಮಿಸಿದವ. ಪುಷ್ಪಕವಿಮಾನವನ್ನು ನಿರ್ಮಿಸಿದ. ಕೃಷ್ಣನ ಆಜ್ಞೆಯಂತೆ ಸಮುದ್ರಮಧ್ಯದಲ್ಲಿ ದ್ವಾರಕಾನಗರವನ್ನು ನಿರ್ಮಿಸಿದ. ಇವನ ಮಗ ವಿಶ್ವರೂಪನಿಗೆ ಮೂರು ತಲೆಗಳು. ಇಂದ್ರನ ಧನಸ್ಸಾದ ವಿಜಯವನ್ನು ಇವನೆ ಸಿದ್ಧಪಡಿಸಿಕೊಟ್ಟದ್ದು ತ್ವಷ್ಟ್ರ ಎಂಬುದು ನಾಮಾಂತರ. ಮಡದಿ ರಚನಾ ಪ್ರಹ್ಲಾದನ ಮಗಳು. ತ್ರಿಪುರರ ವಧೆಗಾಗಿ ಶಿವನಿಗೆ ರಥವನ್ನು ನಿರ್ಮಿಸಿ ಕೊಟ್ಟ. ಲಂಕೆಗೆ ಸೇತುವೆ ಕಟ್ಟುವ ಕಾರ್ಯದಲ್ಲಿ ಮುಖ್ಯಸ್ಥನಾದ ಇವನ ಮಗ. ತ್ವಷ್ಟ್ರ, ಭೌವನ ನಾಮಾಂತರಗಳು. ವಿಷ್ಣುವಿನ ಚಕ್ರಾಯುಧವನ್ನು ನಿರ್ಮಿಸಿಕೊಟ್ಟವನು ಇವನೆ. |
| - | ಈತನಿಗೆ ತ್ರಿಶಿರಾ ಎಂಬ ನಾಮಾಂತರ. ದೇವತೆಗಳ ಪುರೋಹಿತ. ಈತನಿಗೆ ಮೂರು ತಲೆಗಳಿದ್ದವು. ಒಂದು ತಲೆಯಿಂದ ಸೋಮಪಾನ, ಇನ್ನೊಂದು ತಲೆಯಿಂದ ಸುರಾಪಾನ, ಮತ್ತೊಂದು ತಲೆಯಿಂದ ಭೋಜನ ಮಾಡುತ್ತಿದ್ದ. ಇವನ ಹೆಂಡತಿ ಅಸುರರ ಸಹೋದರಿಯಾಗಿದ್ದಳು. ಇದರಿಂದಾಗಿ ಯಜ್ಞದಲ್ಲಿ ದೈತ್ಯರಿಗೂ ಆಹುತಿಯನ್ನು ರಹಸ್ಯವಾಗಿ ಕೊಡುತ್ತಿದ್ದ. ದೇವತೆಗಳ ತೇಜಸ್ಸನ್ನು ರಹಸ್ಯವಾಗಿ ಹೀನಿಸುತ್ತಿದ್ದ. ಇದನ್ನರಿತ ಇಂದ್ರನು ವಜ್ರಾಯುಧದಿಂದ ಇವನ ಮೂರು ತಲೆಗಳನ್ನು ಕತ್ತರಿಸಿದ. (ತಕ್ಷನಿಂದ ಕತ್ತರಿಸಿದ). ಆಗ ಇವನ ಮೂರು ತಲೆಗಳು ಕಪಿಂಜಲ, ತಿತ್ತಿರಿ ಹಾಗೂ ಕಲವಿಂಕ ಪಕ್ಷಿಗಳಾಗಿ ಹಾರಿಹೋದವು. |
| ಹಿರಣ್ಯಾಕ್ಷ, ದೇವಶ್ರವ ಕತಿ, ರೇಣುಮಾನ್ | ಮೊದಲ ಹೆಸರು ವಿಶ್ವರಥ. ತಂದೆ ಚಂದ್ರವಂಶಜ. ಸತ್ಯವತಿ ಈತನ ಒಡಹುಟ್ಟಿದವಳು. ಕ್ಷತ್ರಿಯನಾಗಿ ಜನಿಸಿ ರಾಜ್ಯಭಾರವನ್ನು ಮಾಡಿ ನಂತರ ಅತಿಪ್ರಯತ್ನದಿಂದ, ತಪಸ್ಸಿನ ಪ್ರಭಾವದಿಂದ ಬ್ರಾಹ್ಮಣನಾದ. ಇವನಿಗೆ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
| --- | --- | --- | --- | --- | --- | --- |
| | | | | | | ಮಾಧವಿ ಮುಂತಾದವ |
| ವಿಶ್ವಾವಸು | ದೇವಗಂಧರ್ವ | -- | ತ್ರೇ./ದ್ವಾ. | ರಾ.ಮ.ಭಾ. | ಕಶ್ಯಪ,ಪ್ರಾಧೆ | - |
| ವಿಶ್ವೇದೇವತೆಗಳು | ಸುರರು | -- | - | ರಾ./ಭಾ. | ಧರ್ಮ, ವಿಶ್ವಾ | - |
| ವಿಷ್ಣು | ನಾರಾಯಣ | -- | ಅನಾದಿ ಅನಂತ | ಭಾಗವತ ವೇದಾದಿ ಸಕಲ ಶಾಸ್ತ್ರ | - | ಮಹಾಲಕ್ಷ್ಮೀ |
| ವೀತಹವ್ಯ | ಅರಸು (ಕ್ಷತ್ರಿಯ) | -- | ತ್ರೇ. | ರಾ. | ಶರ್ಯಾತಿ ದಶಾ | ಹತ್ತುಪತ್ನಿಯರು |
| ವೀರಭದ್ರ | ರುದ್ರ | -- | - | ಭಾಗವತ | ರುದ್ರದೇವರು | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಸಂಕೃತಿ, ಗಾಲವ,ಕಪಿಲ ಮುದ್ಗಲ, ಮಧುಚಂದ್ರ ಜಯ, ದೇವಲ,ಅಷ್ಟಕ ಕಚ್ಛಪ, ಹಾರೀತ,ಚಕ್ರಕ ಜಾಜಾಲಿ, ಶಕುಂತಲಾ, ಬಲ, ಬಾದುಲಿ,ಅಘ-ಮರ್ಷಣ, ಕಾರೀಷ ಲೋಹಿತ, ಶಿಶಿರ, ಕಾಲ ಪಥ, ಕೂಚಾರಿ ಮುಖ ಭೃತಶೀಲ, ದೇವರತ ಧನಂಜಯ ಮುಂ.(101 ಮಕ್ಕಳು) | ಅನೇಕ ಮಡದಿಯರು ಮಕ್ಕಳು ಇದ್ದರು. ಅದರಲ್ಲೂ ದೇವರಾತ (ಶುನಶ್ಶೇಪ) ಪ್ರೀತಿಯ ಪುತ್ರನಾಗಿದ್ದ ಇವರು ಅರಸನಾಗಿದ್ದಾಗ ಪರಾಕ್ರಮಿಯಾಗಿ ಅನೇಕ ರಾಜರನ್ನು ಜಯಿಸಿದ. ಬರುವಾಗ ವಶಿಷ್ಠರ ಆಶ್ರಮಕ್ಕೆ ಹೋಗಿ ಅಲ್ಲಿದ್ದ ನಂದಿನಿಗೋವನ್ನು ತನ್ನದನ್ನಾಗಿಸಿಕೊಳ್ಳಲು ಪ್ರಯತ್ನಿಸಿದಾಗ ವಶಿಷ್ಠರಿಂದ ಪರಾಜಿತನಾದ. ವಶಿಷ್ಠರ ಬ್ರಾಹ್ಮಣ್ಯದ ಶಕ್ತಿಯನ್ನರಿತು ತಾನೂ ಬ್ರಾಹ್ಮಣನಾಗಲು ಅನೇಕ ಸಲ ತಪಸ್ಸನ್ನಾಚರಿಸಿದ. ಅನೇಕ ವಿಘ್ನಗಳನ್ನು ಎದುರಿಸಬೇಕಾಯಿತು. ತ್ರಿಶಂಕುವಿಗಾಗಿ ಪ್ರತಿಸ್ವರ್ಗವನ್ನು ನಿರ್ಮಿಸಿದ. ಮೇನಕೆಯಿಂದ ಶಕುಂತಳೆ ಜನ್ಮತಾಳಿದಳು. ವಶಿಷ್ಠರೊಂದಿಗಿನ ವೈರತ್ವದಿಂದ ಅವರ ಎಲ್ಲ ಮಕ್ಕಳನ್ನು ಸಂಹರಿಸಿದ. ತನ್ನ 50 ಮಕ್ಕಳಿಗೆ(ಮಧುಚ್ಛಂದರು) ಮಾತು ಕೇಳಿದ್ದರಿಂದ ಮ್ಲೇಂಛರಾಗಲು ಶಪಿಸಿದರು. ಗಾಲವನಿಂದ ನೂರು ಎರಡು ವಿಶಿಷ್ಟ ಕುದುರೆಗಳನ್ನು ಪಡೆದು ಅದರ ಮೂಲಕ ಮಾಧವಿಯನ್ನು ವಿವಾಹವಾಗಿ ಅಷ್ಟಕನನ್ನು ಪಡೆದ. ಅಚಲ ತಪಸ್ಸಿನಿಂದ ವಶಿಷ್ಠರ ಕಾರುಣ್ಯದಿಂದಲೂ ಬ್ರಹ್ಮರ್ಷಿಯಾದರು. ರಾಮಲಕ್ಷ್ಮಣರನ್ನು ಯಜ್ಞ ರಕ್ಷಿಸಲು, ಹಾಗೆ ಸ್ವಯಂವರಕ್ಕೆ ಕರೆದೊಯ್ದರು. ಹರಿಶ್ಚಂದ್ರನನ್ನು ಪೀಡಿಸಿದರು. ಸಪ್ತಋಷಿಗಳಲ್ಲೊಬ್ಬರು. ಮಂತ್ರದೃಷ್ಟಾರರು. ಗಾಯತ್ರೀ ಮಂತ್ರದ ಋಷಿಗಳು, ಗೋತ್ರಪ್ರವರ್ತಕರು. ಸಪ್ತ ಋಷಿಗಳಲ್ಲೊಬ್ಬರು. ವಿಶ್ವಕ್ಕೆ ಮಿತ್ರರಾಗಿ ವಿಶ್ವಾಮಿತ್ರ ರೆಂದೆನಿಸಿದರು. ರಾಮಾಯಣ, ಮಹಾಭಾರತದ ಕಾಲಗಳಲ್ಲಿ ಮುಖ್ಯ ಪಾತ್ರವಹಿಸಿದ ಬ್ರಹ್ಮರ್ಷಿ ಇವರು. |
| - | ಒಮ್ಮೆ ಸ್ಥೂಲಶಿರವೆಂಬ ಮುನಿಯನ್ನು ಹಾಸ್ಯಮಾಡಲು ಶಾಪಹೊಂದಿ ಕಬಂಧನೆಂಬ ರಾಕ್ಷಸನಾದ. ಅರಣ್ಯದಲ್ಲಿ ರಾಮಲಕ್ಷ್ಮಣರಿಂದ ಶಾಪವಿಮೋಚನೆಯಾಯಿತು. ಶ್ರೀರಾಮ ಇವನ ಶವಸಂಸ್ಕಾರ ಮಾಡಿದ. ಚಾಕ್ಷುಷೀ ವಿದ್ಯೆ ಕಲೆತಿದ್ದ. ಪಾಂಡವರ ಸಂಪರ್ಕದಲ್ಲಿದ್ದವನು. |
| - | ಇವರು ಹತ್ತು ದೇವತೆಗಳ ಗಣ. ಇವರು ಹವ್ಯಕವ್ಯಾದಿಗಳಲ್ಲಿ ಪೂಜನೀಯರು. ಕ್ರತು, ದಕ್ಷ, ವಸು, ಸತ್ಯ, ಮುನಿ, ಕಾಲರಾಮ, ಕುರಜ, ಮನುಜ, ವೀಜ ಮತ್ತು ರೋಚಮಾನ ಇವರುಗಳು. ಬ್ರಹ್ಮದೇವರಿಂದ ನಿಯೋಜಿತರು. |
| ಬ್ರಹ್ಮಾಂಡ | ಸರ್ವೋತ್ತಮ. ಅನಂತಗುಣಪೂರ್ಣನಾಗಿ ದೋಷದೂರನಾದವ. ಮುಕ್ತಿಪ್ರದನಾಗಿ ಅವರಿಗೂ ನಿಯಾಮಕ. ಲಕ್ಷ್ಮೀಬ್ರಹ್ಮಾದಿ ಸಕಲ ಜೀವರೂ ಇವನ ಅನುಚರರು ದಾಸರು. ಆದಿ ಅಂತ್ಯರಹಿತನಾಗಿ ಸೃಷ್ಟ್ಯಾದಿ ಅಷ್ಟಕರ್ತ. ದುಷ್ಟಶಿಕ್ಷಣ ಶಿಷ್ಟರಕ್ಷಣೆಗಾಗಿ ಧರ್ಮಸ್ಥಾಪನೆಗಾಗಿ, ಅನೇಕ ಅವತಾರಗಳನ್ನು ತಾಳಿದ. ಪುರುಷೋತ್ತಮನೆನಿಸಿ ಸಕಲ ಜಗತ್ತಿನ ಅಣುರೇಣುಗಳಲ್ಲಿ ವ್ಯಾಪಿಸಿ ಸ್ಥಿತಿಗತಿಗಳಿಗೆ ಕಾರಣನಾದವನು. ಸಕಲ ವೇದರಾಶಿಯು ಇವನನ್ನೇ ಪ್ರಧಾನವಾಗಿ ಸ್ತುತಿಸುವುದು. ವರ್ಣಾತ್ಮಕ-ಧ್ವನ್ಯಾತ್ಮಕ ಸಕಲ ಶಬ್ದಗಳೂ ಇವನನ್ನೇ ನಿರ್ದೇಶಿಸುತ್ತದೆ. ಸರ್ವತಂತ್ರಸ್ವತಂತ್ರನಾದ ಇವನೇ ಚರಾಚರ ಪ್ರಪಂಚಕ್ಕೆ ಗತಿಕನಾಗಿರುವ. ಇವನು ಭಕ್ತಿಗೆ ಮಾತ್ರ ಒಲಿದು, ತಾನೇ ಸ್ವೀಕರಿಸಿ ಮುಕ್ತಿಯನ್ನೀಡುವನು. ಬ್ರಹ್ಮಶಬ್ದ ವಾಚ್ಯನಾದ ಇವನು ಜೀವ-ಜಡದಿಂದ ಭಿನ್ನನಾಗಿ, ಸ್ವಗತಭೇದ ವಿವರ್ಜಿತನಾಗಿರುವ. |
| 100 ಮಕ್ಕಳು ಹಾಗೂ ಗೃತ್ಸಮದ | ಸೂರ್ಯವಂಶಜ. ಮಹಾಪರಾಕ್ರಮಿ. ವಿಶ್ವಾಮಿತ್ರನಂತೆ ಘೋರ ತಪಸ್ಸನ್ನಾಚರಿಸಿ ಬ್ರಾಹ್ಮಣನಾದ. ಬ್ರಾಹ್ಮಣನಾದ ನಂತರ ಮಗನನ್ನು ಪಡೆದ. ತಾಲಜಂಘ ಈತನ ಸೋದರ. ಈತನ 100 ಮಕ್ಕಳನ್ನು ಪ್ರತರ್ದನ ಕೊಂದ. ಚ್ಯವನರು ಈತನ ತಂಗಿಯ ಗಂಡ. |
| - | ದಕ್ಷಯಜ್ಞ ಪ್ರಸಂಗದಲ್ಲಿ ದಾಕ್ಷಾಯಣಿಯಾದ ಸತೀದೇವಿ ದೇಹವನ್ನು ತ್ಯಜಿಸಿದ ವಾರ್ತೆಯನ್ನು ಕೇಳಿದ ಶಿವನು ತನ್ನ ಜಟೆಯಿಂದ ಹಿಡಿ ಕೂದಲನ್ನ ತೆಗೆದು ನೆಲಕ್ಕೆ ಅಪ್ಪಳಿಸಿದಾಗ ಜನಿಸಿದವನೆ ಈ ವೀರಭದ್ರ. ದಕ್ಷನ ಯಜ್ಞವನ್ನು ಧ್ವಂಸಮಾಡಿ ದಕ್ಷನ ಶಿರವನ್ನು ಕತ್ತರಿಸಿ ಅಗ್ನಿಕುಂಡದಲ್ಲಿ ಹಾಕಿದ. ಯಜ್ಞಮಂಟಪವನ್ನು ಅಲ್ಲಕಲ್ಲೋಲ ಮಾಡಿ ಧ್ವಂಸ ಮಾಡಿದ. ರುದ್ರನ ಭಯಂಕರ ರೂಪ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ವೀರಣೀ | ದೇವತೆ | -- | - | ಭಾಗವತ | ಚ.ಬ್ರಹ್ಮ(ವೀರಣ) | ದಕ್ಷ |
| ವೃಕೋದರ | ವಾಯು | -- | ದ್ವಾ. | ಮ.ಭಾ. | ಪಾಂಡುರಾಜ, ಕುಂತಿ | ದ್ರೌಪದಿ ಇತರರು |
| ವೃತ್ರಾಸುರ | ಅಸುರ | ಚಿತ್ರಕೇತು | -- | ಮ.ಭಾ | ಅಗ್ನಿಕುಂಡ (ತ್ವಷ್ಟೃ) | - |
| ವೃದ್ಧಶರ್ಮ | ಅರಸು | -- | ದ್ವಾ. | ಮ.ಭಾ. | ಶ್ರುತದೇವಿ | - |
| ವೃದ್ಧಕ್ಷತ್ರ | ಅರಸು | -- | ದ್ವಾ. | ಮ.ಭಾ. | - | - |
| ವೃಷಕೇತು | ಕ್ಷತ್ರಿಯ | -- | ದ್ವಾ. | ಮ.ಭಾ. | ಕರ್ಣ | - |
| ವೃಷ್ಣಿ | ಅರಸು | -- | ದ್ವಾ. | ಮ.ಭಾ. | ಮಧುರಾಜ | - |
| ವೃಂದಾ | ಅಸುರೆ | -- | ದ್ವಾ. | ಮ.ಭಾ. | ಕ್ರೌಂಚ | ಜಲಂಧರ |
| ವೃಷಪರ್ವ | ದಾನವ | -- | ದ್ವಾ. | ಮ.ಭಾ. | ಕಶ್ಯಪ, ದನು | - |
| ವೃಷದರ್ಭ | ಅರಸು | -- | ದ್ವಾ. | ಮ.ಭಾ. | ಶಿಬಿ | - |
| ವೃಷಸೇನ | ಕ್ಷತ್ರಿಯ | -- | ದ್ವಾ. | ಮ.ಭಾ. | ಕರ್ಣ | - |
| ವೈಶಂ-ಪಾಯನ | ಋಷಿ | -- | ದ್ವಾ. | ಮ.ಭಾ. | - | - |
| ವೈವಸ್ವತ | ಮನು (ಶ್ರಾದ್ಧದೇವ) | ಬ್ರಹ್ಮ | ತ್ರೇ. | ಭಾಗವತ | ಸೂರ್ಯ,ಸಂಜ್ಞಾ (ವಿವಸ್ವಾನ್) | - |
| ವೇನ | ಕ್ಷತ್ರಿಯ(ಅಸುರ) | - | ದ್ವಾ. | ಮ.ಭಾ. | ಅಂಗ,ಸುನೀಥಾ | - |
| ವೇದವ್ಯಾಸ | ಮಹಾವಿಷ್ಣು | - | ದ್ವಾ. | ಮ.ಭಾ. | ಪರಾಶರ, ಸತ್ಯವತಿ | ಘೃತಾಚೀ (ಅಂ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| 60 ಪುತ್ರಿಯರು | ಅಸಿಕ್ನಿ ಎಂಬ ನಾಮಾಂತರ. ಸತೀದೇವಿಯು ಈಕೆಯ ಮಗಳು. ಶಿವನಿಗೆ ಕೊಟ್ಟು ವಿವಾಹಮಾಡಿದಳು. |
| ಘಟೋತ್ಕಚ ಇತರರು | ಭೀಮಸೇನನ ಮತ್ತೊಂದು ಹೆಸರು. ಇವನ ಜಠರದಲ್ಲಿ ಪ್ರಳಯಾಗ್ನಿ ರೂಪದ ಹೆಬ್ಬೆರಳಿನ ಗಾತ್ರದ ಅಗ್ನಿಯಿತ್ತು. (ನೋಡಿ - ಭೀಮಸೇನ). |
| - | ಇಂದ್ರನನ್ನು ಸಂಹರಿಸುವ ಮಗನನ್ನಾಗಿ ತ್ವಷ್ಟೃಪ್ರಜಾಪತಿ ಅಗ್ನಿಕುಂಡದಿಂದ ಪಡೆದ. ಇಂದ್ರನೊಂದಿಗೆ ಯುದ್ಧವಾಡಿ ವಜ್ರಾಯುಧದಿಂದ ಸತ್ತ. ದಿನಕ್ಕೆ ಒಂದು ಬಾಣದಷ್ಟು ಬೆಳೆಯುತ್ತಿದ್ದ ಭಯಂಕರ ರಾಕ್ಷಸ ದೇಹ. ವಿಷ್ಣು ಲೋಕ ಸೇರಿದ. |
| ದಂತವಕ್ರ | ಕರೂಷದೇಶದ ರಾಜ. |
| ಜಯದ್ರಥ | ಸಿಂಧುದೇಶದ ಅರಸು. ದುರ್ಯೋಧನನ ತಂಗಿ ದುಶ್ಶಲೆ ಇವನ ಸೊಸೆ. ಇವನು ತನ್ನ ಮಗನ ತಲೆ ನೆಲಕ್ಕೆ ಬೀಳಿಸಿದವನ ತಲೆ ಹೋಳಾಗಲೆಂದು ಮಗನಿಗೆ ವರವಿತ್ತ. ಅರ್ಜುನ ಜಯದ್ರಥನ ರುಂಡವನ್ನು ಹಾರಿಸಿ ಕೃಷ್ಣನ ಸಂದೇಶದಂತೆ ಸಂಧ್ಯಾರ್ಘ್ಯ ಕೊಡುತ್ತಿದ್ದ ಇವನ ಕೈಯಲ್ಲೇ ಬೀಳಿಸಿದ. ತಲೆಹೋಳಾಗಿ ಸತ್ತ. |
| - | ಕರ್ಣ ಮಡಿದ ನಂತರ ಭೀಮನಿಗೆ ಸಹಕರಿಸಿ ಯೌವನಾಶ್ವನೊಂದಿಗೆ ಯುದ್ಧವಾಡಿ ಭೀಮನ ಮೆಚ್ಚುಗೆಗೆ ಪಾತ್ರನಾದ. ಯುದ್ಧದ ನಂತರ ಪಾಂಡವರ ಜೊತೆಯಿದ್ದ. |
| ಸುಮಿತ್ರ, ಯುಧಾಜಿತ | ಚಂದ್ರವಂಶಜ. ಕಾರ್ತವೀರ್ಯಾರ್ಜುನನ ಮೊಮ್ಮಗ. ಯದುವಂಶದ ಮೂಲಪುರುಷ. ಕೃಷ್ಣ ಇದೆ ವಂಶದಲ್ಲಿ ಅವತರಿಸಿ ಬಂದ. ಇವನಿಂದ ವೃಷ್ಣಿವಂಶವೆಂದು ಹೆಸರು ಬಂತು. ಶ್ರೀಕೃಷ್ಣನಿಗೆ ವಾರ್ಷ್ಣೇಯ ಎಂದು ಹೆಸರಿದೆ. |
| - | ಮಹಾಪತಿವ್ರತೆ. ಗಂಡ ವಿಷ್ಣು ಶಿವರ ದ್ವೇಷಿ. ಶಿವನಿಂದ ಪತಿ ಸತ್ತ ಮೇಲೆ ಚಿತೆಯಲ್ಲಿ ದೇಹತ್ಯಾಗ ಮಾಡಿದಳು. |
| ಶರ್ಮಿಷ್ಠಾ, ಚಂದ್ರಾ | ಶುಕ್ರಾಚಾರ್ಯರ ಶಿಷ್ಯ. ಯಯಾತಿ ಇವನ ಅಳಿಯ. |
| - | ಅನಿಲ ಕಾಶೀರಾಜ. ದಯಾಳು ರಾಜ. ಒಮ್ಮೆ ಇಂದ್ರ ಅಗ್ನಿ ಪಾರಿವಾಳ ಗಿಡಗರೂಪದಲ್ಲಿ ಪರೀಕ್ಷಿಸಲು ಬಂದಾಗ ತನ್ನ ಮಾಂಸವನ್ನೆ ಕೊಟ್ಟಾಗ ಮೆಚ್ಚಿ ವರಕೊಟ್ಟು ತೆರಳಿದರು. ಚಂದ್ರವಂಶಜ. |
| - | ಮಹಾರಥಿ, ಯುದ್ಧದಲ್ಲಿ ಭೀಮ, ಅಭಿಮನ್ಯುವಿನಿಂದ ಸೋತ. ಹದಿನೇಳನೇದಿನ ಅರ್ಜುನನಿಂದ ಸತ್ತ. |
| - | ವೇದವ್ಯಾಸರ ಶಿಷ್ಯ. ಪರೀಕ್ಷಿತನ ಮಗ ಜನಮೇಜಯನಿಗೆ ಮಹಾಭಾರತವನ್ನು ಹೇಳಿದ. ಇವರಿಗೆ ಬಂದಿದ್ದ ಬ್ರಹ್ಮಹತ್ಯಾದೋಷ ನಿವಾರಿಸಿಕೊಂಡು ಸ್ವರ್ಗಕ್ಕೆ ಹೋದರು. ಯಜುರ್ವೇದ ವೇತ್ತರು. ಮಹಾಭಾರತ ಪ್ರವರ್ತಕರು. |
| 10 ಪುತ್ರರು | ಚ. ಬ್ರಹ್ಮ ಸ್ತ್ರೀಪುರುಷರನ್ನು ಸೃಷ್ಟಿಸಿದ ಅವರೇ ಸ್ವಾಯಂಭುವ ಹಾಗೂ ಶತರೂಪಾದೇವಿ. ಇವನೇ ಮನು. ಸ್ಮೃತಿ (ಮನು ಸ್ಮೃತಿ) ರಚಿಸಿದ. ಮನುಗಳಲ್ಲಿ ಏಳನೇಯವನು. |
| ಪೃಥು | ದುಷ್ಟರಾಜ. ನಾಸ್ತಿನಾಗಿದ್ದ. ಇವನ ರಾಜ್ಯ ಅರಾಜಕೀಯವಾಗಿತ್ತು. ಜನರನ್ನು ಪೀಡಿಸುತ್ತಿದ್ದ. ಮುನಿಬ್ರಾಹ್ಮಣರ ಶಾಪದಿಂದ ಸತ್ತ. ಇವನ ದೇಹವನ್ನು ಮಥನಮಾಡಿದಾಗ ಪೃಥು ಜನಿಸಿದ. |
| ಶುಕಮುನಿ | 28ನೇ ದ್ವಾಪರದ ವ್ಯಾಸರು ವಿಷ್ಣುವಿನ ಅವತಾರ. ವೇದರಾಶಿಯನ್ನು ನಾಲ್ಕು ಭಾಗ ಮಾಡಿದರು. ಬ್ರಹ್ಮಸೂತ್ರಗಳನ್ನು ರಚಿಸಿದರು. 18 ಪುರಾಣಗಳನ್ನು ಉಪಪುರಾಣಗಳನ್ನು ಭಾಗವತವನ್ನು ರಚಿಸಿದರು. ಮಹಾಭಾರತ ರಚಿಸಿದರು. ಕೌರವ ಪಾಂಡವರಿಗೆ ಮೂಲಪುರುಷರು. ಮಹಾಭಾರತವನ್ನು ನಡೆಯುವ ಮುಂಚೆಯೇ ವಿನಾಯಕನನ್ನು ಲಿಪಿಕಾರನನ್ನಾಗಿಸಿಕೊಂಡು ರಚಿಸಿದರು. ಜನಮೇಜಯನ ಸರ್ಪಯಾಗದ ನಂತರ ವೈಶಂಪಾಯನರಿಂದ ಮಹಾಭಾರತವನ್ನು ಪ್ರಚುರ ಪಡಿಸಿದರು. ಹಿಮಾಲಯದ ಗುಹೆಯಲ್ಲಿ ವಾಸ. ಇವರನ್ನು ಕೃಷ್ಣದ್ವೈಪಾಯನರೆಂದು ಕರೆಯುವರು. ಇವರು ಧರ್ಮದ ದೇವತೆಯಾಗಿ ವ್ಯಾಸಸ್ಮೃತಿ ಎಂಬ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ |
|---|---|---|---|---|---|---|

## ಪುರಾಣ ಪ್ರಪಂಚ

**ಅಷ್ಟಾದಶ ಪುರಾಣಗಳು :**

**ಸಾತ್ವಿಕ ಪುರಾಣಗಳು-6 :** ವೈಷ್ಣವಂ ನಾರದೀಯಂ ಚ ತಥಾ ಭಾಗವತಂ ಶುಭಮ್ ।
ಗಾರುಡಂ ಚ ತಥಾ ಪಾದ್ಮಂ ವರಾಹಂ ಶುಭದರ್ಶನೇ ।
ಷಡೇತಾನಿ ಪುರಾಣಾನಿ ಸಾತ್ವಿಕಾನಿ ಮತಾನಿವೈ ॥

ವಿಷ್ಣುಪುರಾಣ – 23,000 ನಾರದೀಯ ಪುರಾಣ – 25,000
ಶ್ರೀಮದ್ಭಾಗವತ ಪುರಾಣ – 18,000 ಗರುಡ ಪುರಾಣ – 19,000
ಪದ್ಮ ಪುರಾಣ – 55,000 ವರಾಹ ಪುರಾಣ – 24,000

**ರಾಜಸ ಪುರಾಣಗಳು - 6 :** ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಾಂಡೇಯಂ ತಥೈವ ಚ ।
ಭವಿಷ್ಯದ್ವಾಮನಂ ಬ್ರಾಹ್ಮಂ ರಾಜಸಾನಿ ನಿಬೋಧಮೇ ॥

ಬ್ರಹ್ಮಾಂಡ ಪುರಾಣ – 12,000 ಬ್ರಹ್ಮವೈವರ್ತ ಪುರಾಣ – 18,000
ಮಾರ್ಕಂಡೇಯ ಪುರಾಣ – 9,000 ಭವಿಷ್ಯ ಪುರಾಣ – 14,500
ವಾಮನ ಪುರಾಣ – 10,000 ಬ್ರಹ್ಮ ಪುರಾಣ – 10,000

**ತಾಮಸ ಪುರಾಣಗಳು-6:** ಮಾತ್ಸ್ಯಂ ಕೌರ್ಮಂ ತಥಾ ಲಿಂಗಂ ಶೈವಂ ಸ್ಕಾಂದಂ ತಥೈವ ಚ ।
ಆಗ್ನೇಯಂ ಚ ಷಡೇತಾನಿ ತಾಮಸಾನಿ ನಿಬೋಧ ಮೇ ॥

ಮತ್ಸ್ಯಪುರಾಣ – 14,000 ಕೂರ್ಮಪುರಾಣ – 17,000
ಲಿಂಗಪುರಾಣ – 11,000 ಶಿವಪುರಾಣ – 24,000
ಸ್ಕಂದ ಪುರಾಣ 81,100 ಅಗ್ನಿ ಪುರಾಣ – 15,400

(ಮೇಲಿನ ಸಂಖ್ಯೆಗಳು ಗ್ರಂಥಗಳು, ಒಂದು ಗ್ರಂಥವೆಂದರೆ 32 ಅಕ್ಷರಗಳ ಶ್ಲೋಕ)

**ಅಷ್ಟಾದಶ ಉಪಪುರಾಣಗಳು**

| ಸಾತ್ವಿಕ ಪುರಾಣ | ರಾಜಸ ಪುರಾಣ | ತಾಮಸ ಪುರಾಣ |
|---|---|---|
| ವಾಯುವ್ಯ | ನಾರದೀಯ | ಮಾನವ |
| ಭಾರ್ಗವ | ನಾರಸಿಂಹ | ಸ್ಕಾಂದ |
| ಸೌಮ | ಕಪಿಲ | ದುರ್ವಾಸ |
| ಬ್ರಹ್ಮಾಂಡ | ವಾಶಿಷ್ಠ | ಆದಿತ್ಯ |
| ಕೌಶಿಕ | ಶಿವಧರ್ಮ | ವಾರುಣ |
| ಪರಾಶರ | ಮಾರೀಚ | ಶಾಂಬರ |

| | | | | | | |
|---|---|---|---|---|---|---|
| ವೃಷಿತಾಶ್ವ | ಅರಸು | -- | ದ್ವಾ. | ಮ.ಭಾ. | - | ಭದ್ರಾ |
| ವ್ಯೋಮ | ರಾಕ್ಷಸ | -- | ದ್ವಾ. | ಭಾಗವತ | ಮಯನ ವಂಶಜ | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಸ್ಮೃತಿಗ್ರಂಥವನ್ನೂ ರಚಿಸಿದರು. ಸಕಲವೇದಗಳ ಶಾಸ್ತ್ರಗಳ ಸಾರರೂಪವಾದ ಅನೇಕಾರ್ಥಗರ್ಭಿತವಾದ ಮೂರು ಭಾಷೆಗಳಿಂದ ಕೂಡಿದ ಒಂದು ಲಕ್ಷ ಗ್ರಂಥಾತ್ಮಕವಾದ ಮಹಾ ಇತಿಹಾಸಗ್ರಂಥವೆಂಬ ಮಹಾ ಭಾರತವನ್ನು ರಚಿಸಿ ಕೊಟ್ಟರು. ಇದನ್ನು ಪಂಚಮವೇದವೆನ್ನುವರು. |
| | ಸತ್ಯವತಿಯು ಪರಾಶರರೆಂಬ ಮುನಿಯನ್ನು ಯಮುನಾನದಿಯನ್ನು ದಾಟಿಸುವಾಗ ಅಲ್ಲಿಯ ಸಣ್ಣದ್ವೀಪದಲ್ಲಿ ಕನ್ಯಾವಸ್ಥೆಯಲ್ಲಿಯೇ ವ್ಯಾಸರನ್ನು ಪಡೆದಳು. ಎಂಟುವರುಷದ ಬಾಲಕನಾದ ಇವರು ತಾಯಿಗೆ ಇದರ ಲೇಪವಿಲ್ಲದಂತೆ ಅನುಗ್ರಹಿಸಿ ಸ್ಮರಿಸಿದಾಗ ಬರುವುದಾಗಿ ತಿಳಿಸಿ ಹೊರಟರು. ಮಹಾತಪಸ್ವಿಗಳು ಬ್ರಹ್ಮಚರ್ಯ ಸತ್ಯವ್ರತ ಪಾಲಕರಾದ ಇವರು ಸರ್ವಜ್ಞತಮರೂ ಸಹಸ್ರಾರು ಶಿಷ್ಯ ಪರಿವೃತರೂ ಆಗಿದ್ದರು. ತಾಯಿಯ ಆಶಯದಂತೆ ಶಂತನು ಮಹಾರಾಜ, ಪುತ್ರರ ನಿರ್ಯಾಣದ ನಂತರ ರಾಜಸಂತಾನವನ್ನು ಮುಂದುವರೆಸಲು ಧೃತರಾಷ್ಟ್ರ, ಪಾಂಡು ಹಾಗೂ ವಿದುರರ ಜನ್ಮಕ್ಕೆ ಕಾರಣರಾದರು. ಹೀಗಾಗಿ ಪಾಂಡವ ಕೌರವರಿಗೆ ಪಿತಾಮಹರು. ಅನೇಕ ಶಿಷ್ಯರನ್ನು ಹೊಂದಿದ್ದರು. ರುದ್ರದೇವರ ಅವತಾರಿಗಳಾದ ಶುಕಮುನಿಗಳು ಇವರ ಮಕ್ಕಳಾದರು. ವ್ಯಾಸರ ಭಾಗವತಾದಿಗಳ ಪ್ರಚಾರಕರೂ ಆದರು. ವರ್ಷಕ್ಕೆ ನಾಲ್ಕು ಬಾರಿ ವ್ಯಾಸ ಪೂಜೆ ಇದೆ. ಈ ವೇದವ್ಯಾಸರು ಮಹಾಭಾರತವೆಂಬ ಜಗತ್ತಿನ ಅತಿ ದೊಡ್ಡ ಐತಿಹಾಸಿಕ ಸತ್ವಭರಿತ ಗ್ರಂಥವನ್ನು ರಚಿಸಿದುದಲ್ಲದೆ ಅದರಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿ ಪ್ರಧಾನ ಪಾತ್ರವನ್ನು ನಿರ್ವಹಿಸಿದರು. ಕುರುಪಾಂಡವರ ಜನನಕ್ಕೂ ಕಾರಣರಾದ ಇವರು ಕೌರವರು ನೂರಾಗಲು ಗಾಂಧಾರಿಗೆ ವರವನ್ನಿತ್ತರು. ಗಾಂಧಾರಿಯಿಂದ ಗರ್ಭಸ್ರಾವವಾಗಿ ಬಿದ್ದ ಮಾಂಸಪಿಂಡದ ಚೂರುಗಳನ್ನು ನೂರಾಒಂದು ತುಪ್ಪದ ಗಡಿಗೆಯಲ್ಲಿರಿಸಿ ಜೀವಂತಗೊಳಿಸಿದರು. ಹಿಮಾಲಯದಲ್ಲಿ ಶಾಲಿಹೋತ್ರಾಶ್ರಮದಲ್ಲಿ ಕುಂತಿ ಪಾಂಡುವಿಗೂ ಅನುಗ್ರಹಿಸಿದರು. ಕಾಡಿನಲ್ಲಿ ಸಂದಿಗ್ಧಸ್ಥಿತಿಯಲ್ಲಿದ್ದ ಭೀಮನಿಗೆ ಹಿಡಂಬಿಯನ್ನು ಮದುವೆಯಾಗಲು ಪ್ರೇರೇಪಿಸಿದರು. ಪಾಂಡವರಲ್ಲಿ ಹಿಡಿಂಬವನದಿಂದ ಏಕ ಚಕ್ರನಗರಕ್ಕೆ ಕರೆದೊಯ್ದರು. ದ್ರೌಪದೀ ಸ್ವಯಂವರದ ನಂತರ ದ್ರುಪದ ದೃಷ್ಟದ್ಯುಮ್ನ, ಧರ್ಮಜರಿಗೆ ದ್ರೌಪದಿಯ ಪೂರ್ವವೃತ್ತಾಂತವಾದ ಐವರು ಒಳಗಿರುವುದನ್ನು ತಿಳಿಸಿ ಮನವರಿಕೆ ಮಾಡಿಸಿ ಮದುವೆ ಮಾಡಿಸಿದರು. ಧರ್ಮರಾಜನಿಗೆ ರಾಜಸೂಯ ಯಾಗಕ್ಕೆ ಧೈರ್ಯತುಂಬಿ ಮಾಡಲು ಎಲ್ಲ ಮಾರ್ಗದರ್ಶನ ನೀಡಿದರು. ರಾಜಸೂಯದಲ್ಲಿ ಇವರ ಇನ್ನೊಂದು ರೂಪವಾದ ಶ್ರೀಕೃಷ್ಣ ಅರ್ಗಪೂಜೆ ಸ್ವೀಕರಿಸಿದರೆ ಇವರು ಯಜ್ಞದ ಬ್ರಹ್ಮಪದವಿಯನ್ನಲಂಕರಿಸಿದರು. ನಂತರ ಧರ್ಮಜಗೆ ಅಭಿಷೇಕ ಮಾಡಿದರು. ಪಾಂಡವರ ಪಕ್ಷಪಾತಿಯಾದ ಇವರು ಧೃತರಾಷ್ಟ್ರನಿಗೆ ಬುದ್ಧಿವಾದ ಹೇಳಿದರು. ದ್ವೈತವನದಲ್ಲಿ ಪಾಂಡವರಿಗೆ ಉಪದೇಶಿಸಿದರು. ಮಹಾಯುದ್ಧದ ಮುನ್ನ ಸಂಜಯನಿಗೆ ದಿವ್ಯದೃಷ್ಟಿ ನೀಡಿ ಧೃತರಾಷ್ಟ್ರನಿಗೆ ಯುದ್ಧವಾರ್ತೆ ಹೇಳಲು ಯೋಜಿಸಿದರು. ಯುದ್ಧದಲ್ಲಿ ಅಭಿಮನ್ಯು, ಘಟೋತ್ಕಚರು ನಿಧನರಾದಾಗ ಧರ್ಮಾದಿಗಳಿಗೆ ಸಾಂತ್ವನ ಹೇಳಿದರು. ಯುದ್ಧಾನಂತರ ಧೃತರಾಷ್ಟ್ರನಿಗೆ ಸಾಂತ್ವನ ಹೇಳಿದರು. ಅಶ್ವತ್ಥಾಮಾಚಾರ್ಯರು ಹಾಗೂ ಅರ್ಜುನರು ಬಿಟ್ಟ ಬ್ರಹ್ಮಾಸ್ತ್ರಗಳ ನಡುವೆ ಪ್ರತ್ಯಕ್ಷರಾಗಿ ನಿಂತು ಶಾಂತಗೊಳಿಸಿದ ತಾವು ವಿಷ್ಣುವಿನ ಅವತಾರರೆಂದು ಸಾಬೀತು ಮಾಡಿದರು. ಯುಧಿಷ್ಠಿರಗೆ ರಾಜನೀತಿ ಉಪದೇಶ. ಕೃಷ್ಣನೊಂದಿಗೆ ಯುಧಿಷ್ಠಿರಾದಿಗಳಿಗೆ ಪಟ್ಟಾಭಿಷೇಕ ಮಾಡಿದರು. ಧೃತರಾಷ್ಟ್ರ ಗಾಂಧಾರಿಯರಿಗೆ ಯುದ್ಧದಲ್ಲಿ ಅಸು ನೀಗಿದ ಎಲ್ಲ ಮಕ್ಕಳನ್ನೂ ಅವರ ಅಪೇಕ್ಷೆಯಂತೆ ತೋರಿಸಿದರು. ಪಾಂಡವರಿಗೆ ಭೂಮಿಯನ್ನು ತ್ಯಜಿಸಲು ಸೂಚಿಸಿದರು. ಸಪ್ತ ಚಿರಂಜೀವಿಗಳಲ್ಲಿ ಇವರೂ ಒಬ್ಬರಾಗಿರುವರು. ಇಂದಿಗೂ ಉತ್ತರ ಬದರಿಯಲ್ಲಿ ಶ್ರೀಮದಾಚಾರ್ಯ ಮಧ್ವರೊಂದಿಗೆ ವಿರಾಜಮಾನರಾಗಿರುವರು. |
| ಸಾಲ್ವ, ಮುದ್ರ ಮುಂ. ಏಳುಪುತ್ರರು | ಚಂದ್ರವಂಶದ ಪುರುವಂಶಜ. ಧರ್ಮಾತ್ಮ, ಚಕ್ರವರ್ತಿ, ಅತಿಕಾಮದಿಂದ ಕ್ಷಯರೋಗದಿ ಸತ್ತ. ಆಕಾಶವಾಣಿಯಂತೆ ಇವನ ಶವದಿಂದಲೆ ಹೆಂಡತಿ ಮಕ್ಕಳನ್ನು ಪಡೆದಳು. (ಪಾಂಡುಗೆ ಕುಂತಿ ಹೇಳಿದ ಕಥೆಯು) |
| - | ಮಯಾಸುರ ವಂಶಜ, ಕೃಷ್ಣನನ್ನು ಕೊಲ್ಲಲು ಬಂದು ಅವನಿಂದಲೇ ಸತ್ತ. ಕಳ್ಳನ ಪಾತ್ರ ವಹಿಸಿ ಗೋಪಾಲಕನನ್ನು ಗುಹೆಯಲ್ಲಿಡುತ್ತಿದ್ದ. ಬ್ರಹ್ಮನ ವರವಿತ್ತು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಶಂಯು | ಋಷಿ | -- | ದ್ವಾ. | ಮ. ಭಾ. | ಬೃಹಸ್ಪತಿ,ತಾರಾ | ಸತ್ಯಾ |
| ಶಕಟ | ರಾಕ್ಷಸ | -- | ದ್ವಾ. | ಮ. ಭಾ. | - | - |
| ಶಕುನಿ | ದ್ವಾಪರ(ಅಸುರ) | -- | ದ್ವಾ. | ಮ. ಭಾ. | ಸುಬಲ | - |
| ಶಕುಂತಲಾ | ಋಷಿಕನ್ಯೆ | -- | ದ್ವಾ. | ಮ. ಭಾ. | ವಿಶ್ವಾಮಿತ್ರ,ಮೇನಕ | ದುಷ್ಯಂತ |
| ಶಕ್ತಿ | ಮಹರ್ಷಿ | -- | ದ್ವಾ. | ಮ. ಭಾ. | ವಶಿಷ್ಠ ಅರುಂಧತಿ | ಅದೃಶ್ಯಂತಿ |
| ಶಕ್ರದೇವ | ಅರಸು | -- | ದ್ವಾ. | ಮ. ಭಾ. | ಭಾನುಮಂತ | - |
| ಶಕ್ರದೇವ | ಅರಸು | ಮಣಿಭದ್ರ | ದ್ವಾ. | ಮ. ಭಾ. | ಸೃಗಲ ವಾಸುದೇವ | |
| ಶಚೀ | ದೇವತೆ | -- | - | ಭಾಗವತ | ಪುಲೋಮ, | ಇಂದ್ರ |
| ಶಂಕುಕರ್ಣ | ಅರಸು | -- | ದ್ವಾ. | ಮ. ಭಾ. | ಜನಮೇಜಯ ವಪುಷ್ಟಮೆ | - |
| ಶಣ್ಡ | ಮುನಿ | -- | ತ್ರೇ. | ಭಾಗವತ | ಶುಕ್ರಾಚಾರ್ಯ | - |
| ಶತಧನ್ವ | ಅಸುರ | -- | ದ್ವಾ. | ಮ. ಭಾ. | ಹೃದಿಕ | - |
| ಶತಶೃಂಗ | ಚಕ್ರವರ್ತಿ | -- | - | ಭಾಗವತ | ಭರತ | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಭರತ, ಭಾರದ್ವಜ | ಹಿರಿಯ ಮಗ. ಇವನಿಗೆ ಪ್ರಥಮ ಆಹುತಿ. ಮೂರು ಕನ್ಯೆಯರು. |
| – | ಕಂಸನ ಭೃತ್ಯ. ಕಂಸನ ಅಪ್ಪಣೆಯಂತೆ ಶಕಟ (ಬಂಡಿ) ರೂಪದಿ ಗೋಕುಲದಲ್ಲಿದ್ದು ಬಾಲಕೃಷ್ಣನನ್ನು ಸಂಹರಿಸಲು ಹೋಗಿ ಕೃಷ್ಣನ ಕಾಲಿನ ಹೊಡೆತಕ್ಕೆ ಮುರಿದು ಸತ್ತುಬಿದ್ದ. |
| ಅನೇಕ ಮಕ್ಕಳು ಉಲೂಕಾದಿಗಳು | ಗಾಂಧಾರಿ ಒಡಹುಟ್ಟಿದವ. ದುರ್ಯೋಧನನ ಸೋದರಮಾವ. ಇವನು ಧರ್ಮವಿರೋಧಿ. ಇವನಿಗೆ ಅನೇಕ ಸಹೋದರರು ಹನ್ನೊಂದು ಸಹೋದರಿಯರಿದ್ದರು. ಎಲ್ಲ ಸಹೋದರಿಯರನ್ನು ಧೃತರಾಷ್ಟ್ರನಿಗೆ ಕೊಟ್ಟು ಮದುವೆ ಮಾಡಿದ. ದುಷ್ಟನಾದ ದುರ್ಯೋಧನನಿಗೆ ದುರ್ಬುದ್ಧಿ ಪ್ರಚೋದಕನಾಗಿದ್ದ. ರಾಜ ಸೂಯಯಾಗಕ್ಕೆ ಹೋಗಿ ಧರ್ಮರಾಜಾದಿಗಳ ಐಶ್ವರ್ಯ, ವೈಭವಾದಿಗಳನ್ನು ಕಂಡು ಅಸೂಯೆಯಿಂದ ಅದನ್ನು ಮೋಸದಿಂದ ಪಡೆಯಲು ದುರ್ಯೋಧನನಿಗೆ ಸಲಹೆ ನೀಡಿ ಜೂಜಿಗೆ ಆಹ್ವಾನಿಸುವಂತೆ ಮಾಡಿದ. ಮೋಸದಿಂದ ಪಗಡೆಯಾಡಿ ಯುಧಿಷ್ಠಿರನನ್ನು ಸೋಲಿಸಿದ. ಮರುದ್ಯೂತದಲ್ಲೂ ಸೋಲಿಸಿ ಪಾಂಡವರನ್ನು ಅರಣ್ಯಕ್ಕೆ ಅಟ್ಟುವಂತೆ ಮಾಡಿದ. ಪಾಂಡವರು ದ್ವೈತವನದಲ್ಲಿದ್ದಾಗ ದುರ್ಯೋಧನನೊಂದಿಗೆ ಘೋಷಯಾತ್ರೆ ನೆಪದಲ್ಲಿ ಹೋಗಿ ಗಂಧರ್ವರಿಂದ ಅವಮಾನಿತನಾದ. ಕೃಷ್ಣನ ಸಂಧಾನ ಸಮಯದಲ್ಲೂ ದುರಾಲೋಚನೆ ನೀಡಿದ. ಯುದ್ಧದಲ್ಲಿ ಅನೇಕ ಸಲ ಸೋತು ಓಡಿ ಹೋದ. ಎಲ್ಲ ಸಹೋದರರನ್ನೂ ಮಕ್ಕಳನ್ನು ಕಳೆದುಕೊಂಡು ಹದಿನೆಂಟನೇ ದಿನ ಸಹದೇವನೊಂದಿಗೆ ದ್ವಂದ್ವಯುದ್ಧದಲ್ಲಿ ಸತ್ತ. ಸಂಶಯಕ್ಕೆ ಅಭಿಮಾನಿ ದೈತ್ಯ. ಶಕುನಿ ಅಧ್ಯಾತ್ಮದಲ್ಲಿ ನಾಸ್ತಿಕ್ಯಬುದ್ಧಿಯ ಸಂಕೇತ. |
| ಭರತ | ಕಣ್ವಋಷಿಗಳ ಸಾಕುಮಗಳು. ಹಿಮಾಲಯದಲ್ಲಿಯ ಮಾಲಿನಿ ನದಿಯ ದಡದಲ್ಲಿ ಜನಿಸಿದಳು. ಕಣ್ವಾಶ್ರಮ ದಲ್ಲಿ ಬೆಳೆದು ದೊಡ್ಡವಳಾಗಿ ದುಷ್ಯಂತ ಮಹಾರಾಜನೊಂದಿಗೆ ಗಾಂಧರ್ವವಿವಾಹವಾಯಿತು. ಭರತನನ್ನು ಪಡೆದಳು. ದುಷ್ಯಂತ ಇವಳನ್ನು ಸ್ವೀಕಾರ ಮಾಡದಿರಲು ಆಕಾಶವಾಣಿಯಾಯಿತು. ನಂತರ ಸ್ವೀಕರಿಸಿ ರಾಣಿಯ ಪಟ್ಟವನ್ನು ಕೊಟ್ಟ. ಚಂದ್ರವಂಶದ ಪೂರುವಿನ ವಂಶದಲ್ಲಿ ಬಂದ ದುಷ್ಯಂತನ ರಾಜ್ಯಭಾರವನ್ನು ಭರತ ಮುಂದುವರೆಸಿದ. ಈ ಭೂಮಿಗೆ ಭಾರತವೆಂಬ ಹೆಸರನ್ನು ತಂದ. |
| ಪರಾಶರ | ವೇದವ್ಯಾಸರ ಅಜ್ಜ. ಇವರಿಗೆ 99 ತಮ್ಮಂದಿರಿದ್ದರು. ಮಹಾ ತಪಸ್ವಿಗಳು. ಕಲ್ಮಾಷಪಾದ ಇವರನ್ನು ಸಂಹರಿ ಸಲು ಬಂದಾಗ ರಾಕ್ಷಸನಾಗೆಂದು ಶಾಪವಿತ್ತರು. |
| – | ಭಾನುಮತಿಯ ಒಡಹುಟ್ಟಿದವ. ದುರ್ಯೋಧನನ ಮೈದುನ. ಭಾರತಯುದ್ಧದಲ್ಲಿ ಎರಡನೇದಿನ ಭೀಮ ನಿಂದ ಮಡಿದ. |
| – | ಕರವೀರಪುರದ ಅರಸ. ತಂದೆಗೆ ವಿರುದ್ಧವಾಗಿ ಶ್ರೀಕೃಷ್ಣನ ಭಕ್ತ. ಧರ್ಮರಾಜನ ಪರವಾಗಿದ್ದು ಯುದ್ಧದಲ್ಲಿ ಮಡಿದ. |
| ಜಯಂತ | ಪತಿವ್ರತಾಸ್ತ್ರೀ. ದೇವರಾಜನ ಮಡದಿ. ಸ್ವರ್ಗಲೋಕದ ರಾಣಿ. ದ್ರೌಪದಿಯ ಶರೀರದಲ್ಲಿ ಸೇರಿಕೊಂಡಿದ್ದಳು. ಸುಖದಾಂಪತ್ಯಕ್ಕೆ ಇವಳ ಅನುಗ್ರಹ ಬೇಕು. ಇವಳನ್ನು ನಹುಷ ಕಾಮಿಸಿ ಶಾಪಕ್ಕೆ ಗುರಿಯಾದ. |
| – | ಶತಾನೀಕನ ತಮ್ಮ. ಪಾಂಡವ ಸಂತಾನವನ್ನು ಮುಂದುವರಿಸಿದ. |
| – | ಅಮರ್ಕನ ಸೋದರ. ಹಿರಣ್ಯಕಶಿಪುವಿನ ಶುಕ್ರಾಚಾರ್ಯರ ಗುರುಕುಲದಲ್ಲಿ ಪ್ರಹ್ಲಾದನಿಗೆ ಗುರುವಾಗಿದ್ದ ಪುರೋಹಿತ. ಅರ್ಥಕಾಮಗಳ ಬಗ್ಗೆ ಮಾತ್ರ ಉಪದೇಶ ನೀಡುತ್ತಿದ್ದರು. |
| – | ಯದುವಂಶಜ. ಕೃತವರ್ಮನ ತಮ್ಮ. ಸತ್ಯಭಾಮೆಯನ್ನು ಹಾಗೂ ಶಮಂತಕ ಮಣಿಯನ್ನು ತನಗೆ ಕೊಡದ ಕಾರಣಕ್ಕೆ ಸತ್ರಾಜಿತನನ್ನು ಕೊಂದನು. ಕೃಷ್ಣನನ್ನು ದ್ವೇಷಿಸಿ ಅವನಿಂದಲೇ ಕೊಲ್ಲಲ್ಪಟ್ಟ. |
| 8 ಪುತ್ರರು ಕುಮಾರಿ | ಋಷಭದೇವನ ಮೊಮ್ಮಗ, ಇವನ ಮಗನಿಂದಾಗಿ ಈ ದೇಶಕ್ಕೆ ಭಾರತವೆಂದು ಹೆಸರಾಯಿತು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಶತಾನಂದ | ಮಹರ್ಷಿ | -- | ತ್ರೇ. | ರಾ | ಗೌತಮ,ಅಹಲ್ಯೆ | - |
| ಶತ್ರುಘ್ನ | ಕಾಮ | ಅನಿರುದ್ಧ | ತ್ರೇ. | ರಾ. | ದಶರಥ,ಸುಮಿತ್ರಾ | ಶ್ರುತಕೀರ್ತಿ |
| ಶನೈಶ್ಚರ | ದೇವತೆ | ಸೂರ್ಯ | - | ಭಾಗವತ | ಸೂರ್ಯ, ಛಾಯಾದೇವಿ | - |
| ಶಂತನು | ವರುಣ | -- | ದ್ವಾ. | ಮ.ಭಾ. | ಪ್ರತೀಪ, ಸುನಂದಾ | ಗಂಗಾ, ಸತ್ಯವತಿ |
| ಶಬರೀ | ಬೇಡತಿ | ಅಪ್ಸರಾ | ತ್ರೇ. | ರಾ. | - | - |
| ಶಮೀಕ | ಮಹರ್ಷಿ | -- | ದ್ವಾ. | ಭಾಗವತ | - | - |
| ಶಂಬರ | ಮಾಯಾವಿ | ಅಸುರ | ದ್ವಾ. | ಮ.ಭಾ. | ಕಶ್ಯಪ, ದನು | ಮಾಯಾವತಿ (ರತಿ) |
| ಶಂಬೂಕ | ಅಸುರ | ಜಂಘ | ತ್ರೇ. | ರಾ. | - | - |
| ಶಂಖಚೂಡ | ಯಕ್ಷ | -- | ದ್ವಾ. | ಮ.ಭಾ. | ಕುಬೇರನ ಸೇವಕ | - |
| ಶರಭಂಗ | ಮಹರ್ಷಿ | -- | ತ್ರೇ. | ರಾ. | ಗೌತಮವಂಶಜ | ಅಪ್ಸರೆ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಸತ್ಯಧೃತಿ | ಜನಕ ಮಹಾರಾಜನ ಪುರೋಹಿತ. ಜನಕನಿಗೆ ವೆಂಕಟಾಚಲ ಮಾಹಾತ್ಮೆಯನ್ನು ಹೇಳಿದ. ಇವನು ವಿದೇಹ ರಾಜನ ಪುರೋಹಿತನಾಗಿದ್ದ |
| ಸುಬಾಹು, ಶತ್ರುಘಾತಿ | ಸೂರ್ಯವಂಶಜ. ಲಕ್ಷ್ಮಣನ ತಮ್ಮ ಯಾವಾಗಲೂ ಭರತನನ್ನು ಅನುಸರಿಸುತ್ತಿದ್ದ ಶ್ರೀರಾಮನ ಅನುಚರನಾಗಿದ್ದ. ಶ್ರೀರಾಮನ ಪಟ್ಟಾಭಿಷೇಕದ ನಂತರ ಇವನನ್ನು ಲವಣಾಸುರನನ್ನು ಸಂಹರಿಸಲು ಕಳುಹಿಸಿದ. ಲವಣಾಸುರ ಸತ್ತ ಮೇಲೆ ಮಧುರಾಕ್ಕೆ ರಾಜನಾದ. ಇವನು ವಾಲ್ಮೀಕಿ ಆಶ್ರಮಕ್ಕೂ ಹೋಗಿದ್ದ. ಕಡೆಗೆ ಮಹಾಪ್ರಸ್ಥಾನವನ್ನು ಕೈಗೊಂಡ. |
| - | ನವಗ್ರಹಗಳಲ್ಲಿ ಒಬ್ಬ ದೇವತೆ. ವೈವಸ್ವತನ ತಮ್ಮ, ತಪತಿಯ ಸಹೋದರ, ಮಂದಗತಿಯವನಾದರೂ ಬಹುತೀಕ್ಷ್ಣಸ್ವಭಾವದ ಗ್ರಹ. |
| ಭೀಷ್ಮ ಚಿತ್ರಾಂಗದ ವಿಚಿತ್ರವೀರ್ಯ | ಚಂದ್ರವಂಶಜ. ಮಹಾಶೂರ, ಹಿಂದೆ ಮಹಾ ಭಿಕ್ಷಕ್ ಎಂಬ ರಾಜನಾಗಿದ್ದ. ಶಾಪದಿಂದ ಶಂತನುವಾದ. ದೇವಾಪಿ, ಬಾಹ್ಲೀಕರ ಮಧ್ಯದವನು. ಅರಣ್ಯದಲ್ಲಿ ಬಿದ್ದಿದ್ದ ಅನಾಥ ಕೃಪ-ಕೃಪಿ ಶಿಶುಗಳನ್ನು ಕಾಪಾಡಿದ. ದೇವಾಪಿ ರಾಜ್ಯಬಿಟ್ಟು ಕಾಡಿಗೆ ಹೋದ ಕಾರಣ ಇವನೇ ರಾಜನಾದ. ಇವನ ಕೈಗಳ ಸ್ಪರ್ಶಮಾತ್ರ ದಿಂದ ಆರೋಗ್ಯವಂತನಾಗಿ ವೃದ್ಧನೂ ಯೌವನವನ್ನು ಪಡೆಯುತ್ತಿದ್ದ. ತಂದೆಯ ಮಾತಿನಂತೆ ಗಂಗೆಯನ್ನು ಮದುವೆಯಾದ. ಆದರೆ ಗಂಗೆಯ ಷರತ್ತಿನಂತೆ ಏಳು ಮಕ್ಕಳನ್ನು ಕಳೆದುಕೊಂಡು ಎಂಟನೇಯವನಾದ ದೇವವ್ರತ ಮಗನನ್ನು ಉಳಿಸಿಕೊಂಡ. ಬಾಲಕನಾದ ಇವನು ಗಂಗಾಪ್ರವಾಹವನ್ನು ಅಡ್ಡಕಟ್ಟಿದ್ದನ್ನು ನೋಡಿ ಬೆರಗಾದ. ಆಗ ಗಂಗೆ ದೇವವ್ರತನನ್ನು ತಂದೆಗೆ ಒಪ್ಪಿಸಿದಳು. ಇವನು ಸತ್ಯವತಿಯನ್ನು ವರಿಸಲಾಗಿ ಸತ್ಯವ್ರತ ಭೀಷ್ಮಪ್ರತಿಜ್ಞೆ ಮಾಡಿ ಮದುವೆ ಮಾಡಿಸಿದ. ಶಂತನು ಭೀಷ್ಮನಿಗೆ ಇಚ್ಛಾಮರಣತ್ವ ವರವನ್ನು ಕೊಟ್ಟನು. ಸ್ವರ್ಗ ಸೇರಿದ. |
| - | ಶ್ರೀರಾಮನ ಭಕ್ತಳು. ಮತಂಗರ ಆಶ್ರಮದಲ್ಲಿದ್ದು ಅವರಿಂದ ಉಪದೇಶ ಪಡೆದಳು. ಶ್ರೀರಾಮ ಲಕ್ಷ್ಮಣರು ಆಶ್ರಮಕ್ಕೆ ಬಂದಾಗ ಸ್ವಾಗತಿಸಿ ಆತಿಥ್ಯ ನೀಡಿದಳು. ರಾಮನ ಸಮ್ಮುಖದಲ್ಲಿ ಅಗ್ನಿಪ್ರವೇಶ ಮಾಡಿ ಉದ್ಧಾರವಾದಳು. |
| ಶೃಂಗಿ | ಇವರು ಸಮಾಧಿ ಸ್ಥಿತಿಯಲ್ಲಿದ್ದಾಗ ಪರೀಕ್ಷಿತ ಮಹಾರಾಜ ತಿಳಿಯದೆ ಇವರ ಕೊರಳಿಗೆ ಸತ್ತ ಹಾವನ್ನು ಮಾಲೆಯಾಗಿ ಹಾಕಿ ಹೋದ. ಮಗ ಶೃಂಗಿ ಏಳುದಿನಗಳಲ್ಲಿ ತಕ್ಷಕನಿಂದ ಕಚ್ಚಿಸಿಕೊಂಡು ಸಾಯುವಂತೆ ಶಪಿಸಿದುದನ್ನು ತಿಳಿದು ಕುಪಿತನಾಗಿ - ವಿಷಯವನ್ನು ಶಿಷ್ಯ ಗೌರಮುಖನಿಗೆ ತಿಳಿಸಲು ಹೇಳಿದರು. |
| - | ಅಸುರನಾದ ಇವನು ಮಹಾ ಮಾಯಾವಿ. ವಿಪ್ರಚಿತ್ತಿಯ ತಮ್ಮ. ಪಾತಾಳದಲ್ಲಿದ್ದ ಇವನು ಕೃಷ್ಣನ ಮಗನಾದ ಪ್ರದ್ಯುಮ್ನನಿಂದ ಸಾವಿರುವುದಾಗಿ ನಾರದರಿಂದ ತಿಳಿದು ಅವನನ್ನೇ ಕೊಲ್ಲಲು ಪ್ರಯತ್ನಿಸಿ ಪ್ರಸವ ಗೃಹದಿಂದ ಕೂಸನ್ನು ಅಪಹರಿಸಿ ಸಮುದ್ರದಲ್ಲಿ ಒಗೆದ. ಮತ್ತೆ ಅವನಲ್ಲಿಗೆ ಬಂದು, ಅವನ ಖಡ್ಗದಿಂದ ತಲೆ ಉರುಳಿ ಸತ್ತ. ರತಿಯು ಶಾಪದಿಂದಾಗಿ ಇವನ ವಶದಲ್ಲಿದ್ದಳು. ಇವಳೇ ಪ್ರದ್ಯುಮ್ನನನ್ನು ಪೋಷಿಸಿದಳು. |
| - | ಜಂಘು ಎಂಬ ಹೆಸರಿನ ದೈತ್ಯ. ಶೂದ್ರ-ಪಾರ್ವತಿಯಿಂದ ವರಪಡೆದು ಶಿವನ ಸ್ಥಾನ ಬಯಸಿದ್ದ. ಲೋಕ ಕಂಟಕನಾದ ಇವನನ್ನು ರಾಮ ಸಂಹರಿಸಿದ. |
| - | ಶಿವನ ವರದಿಂದ ಗೋಪಿಯರನ್ನು ಪೀಡಿಸುತ್ತಿದ್ದ ಕ್ರೂರಿ. ಕೃಷ್ಣನಿಂದ ಹತನಾದ. ಇವನ ತಲೆಯಲ್ಲಿದ್ದ ಮಣಿಯನ್ನು ಕಿತ್ತಿ ಬಲರಾಮಗೆ ಕೊಟ್ಟ |
| - | ವನದಲ್ಲಿದ್ದ ರಾಮಸೀತಾರನ್ನು ತನ್ನ ಆಶ್ರಮದಲ್ಲಿ ಸತ್ಕರಿಸಿದ. ರಾಮನು ಅನುಮತಿ ಪಡೆದು ಅಗ್ನಿ ಪ್ರವೇಶ ಮಾಡಿ ಅವರಿಂದಲೇ ಸದ್ಗತಿ ಹೊಂದಿದ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| **ಶರ್ಮಿಷ್ಠೆ** | ರಾಜಕುವರಿ | -- | ದ್ವಾ. | ಮ.ಭಾ. | ವೃಷಪರ್ವ | ಯಯಾತಿ |
| **ಶರ್ಯಾತಿ** | ಮಹಾರಾಜ | -- | - | ಭಾಗವತ | ವೈವಸ್ವತಮನು ಶ್ರದ್ಧಾ | - |
| **ಶರ್ಯಾತಿ** | ಕ್ಷತ್ರಿಯ | -- | ದ್ವಾ | ಮ.ಭಾ | ಪ್ರಾಚೀನ್ಯಾಂತ ಅಶ್ಮಕೀ | ಸತ್ಯವ್ರತೆ |
| **ಶಲ** | ಅರಸು | ವಿರೂಪಾಕ್ಷರುದ್ರ | ದ್ವಾ. | ಮ.ಭಾ. | ಸೋಮದತ್ತ | - |
| **ಶಲ್ಯ** | ಸಹ್ಲಾದ,ಅರಸು | ವಾಯು | ದ್ವಾ. | ಮ.ಭಾ. | ಋತಾಯನ | - |
| **ಶರ್ವತ್ರಾತ** | ಕ್ಷತ್ರಿಯ | ವಾಯು | ದ್ವಾ. | ಮ.ಭಾ. | ಭೀಮಸೇನ,ಕಾಳಿ | - |
| **ಶಶಬಿಂದು** | ಚಕ್ರವರ್ತಿ (ರಾಜರ್ಷಿ) | -- | - | ಭಾಗವತ | ಚಿತ್ರರಥ | ಹತ್ತುಸಾವಿರ ಮಡದಿಯರು |
| **ಶಾಂಡಿಲಿ** | ಋಷಿಕುಮಾರಿ | -- | ತ್ರೇ. | ರಾ. | ಶಾಂಡಿಲ್ಯ | - |
| **ಶಾಲಿಹೋತ್ರ** | ಮುನಿ | -- | ತ್ರೇ. | ಭಾಗವತ ಮ.ಭಾ | ಕಪಿಲಮುನಿ | - |
| **ಶಿಖಂಡಿ** | ವರಾಂಗಿ | (ಅಂಬಾ) | - | ದ್ವಾ. | ಮ.ಭಾ. | ದ್ರುಪದ, ಮನಸ್ವಿನಿ ಹಿರಣ್ಯವರ್ಮನ ಪುತ್ರಿ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ದ್ರುಹ್ಯು, ಅನು, ಪೂರು | ಯಯಾತಿಯ ಕಿರಿಯ ಹೆಂಡತಿ. ಒಮ್ಮೆ ಈಕೆ ಮತ್ತು ದೇವಯಾನಿ ಜಲಕ್ರೀಡೆಯಾಡಿ ತಿಳಿಯದೆ ದೇವಯಾನಿಯ ವಸ್ತ್ರವನ್ನುಟ್ಟಳು. ಇದರಿಂದ ಕುಪಿತಳಾದ ದೇವಯಾನಿ ಮತ್ತು ಶರ್ಮಿಷ್ಠೆಯರಲ್ಲಿ ಜಗಳವಾಯಿತು. ಸಿಟ್ಟಿನಿಂದ ದೇವಯಾನಿಯನ್ನು ಬಾವಿಯಲ್ಲಿ ತಳ್ಳಿ ಹೊರಟು ಹೋದಳು. ಅಲ್ಲಿಗೆ ಬಂದ ಯಯಾತಿ ಇವಳನ್ನು ಕಾಪಾಡಿದ. ತಂದೆಯ ಮಾತಿನಂತೆ ಶರ್ಮಿಷ್ಠೆ ದೇವಯಾನಿಗೆ ಅವಳ ಸಾವಿರ ದಾಸಿಯರೊಂದಿಗೆ ರಹಸ್ಯವಗಿ ಮಕ್ಕಳನ್ನು ಪಡೆದಳು. ಯಥಾರ್ಥ ತಿಳಿದ ದೇವಯಾನಿಗೂ ಇವಳಿಗೂ ವಾಕ್ಯುದ್ಧವಾಯಿತು. ಪೂರುವಿನಿಂದ ಇವಳ ವಂಶವು ಮುಂದುವರೆಯಿತು. ಈ ವಂಶದಲ್ಲಿ ಭೀಮ ಅವತರಿಸಿದ. |
| ಸುಕನ್ಯೆ | ಸೂರ್ಯವಂಶಜ. ಮನುವಿನ ಮೂರನೇ ಪುತ್ರ. ಬ್ರಹ್ಮಜ್ಞಾನಿ. ಚ್ಯವನ ಋಷಿಗಳಿಗೆ ಮಗಳನ್ನು ಕೊಟ್ಟು ಮದುವೆ ಮಾಡಿದ. ಅಳಿಯನ ಮೂಲಕ ಯಜ್ಞವನ್ನು ಮಾಡಿದ. ಇವನ ವಂಶದಲ್ಲಿ ಹೈಹಯ, ತಾಲ ಜಂಘರಾಜರು ಬಂದರು. |
| ಅಹಂಯಾತಿ | ಚಂದ್ರವಂಶಜ. ಅನೇಕ ಯಜ್ಞಗಳನ್ನಾಚರಿಸಿ ರಾಜ್ಯಭಾರ ಮಾಡಿದ. |
| – | ಬಾಹ್ಲೀಕ ರಾಜನ ಮೊಮ್ಮಗ. ಒಬ್ಬ ರುದ್ರ. ಭೂರಿ, ಭೂರಿಶ್ರವ ಇವನ ಸಹೋದರರು. ಈತ ದ್ರೌಪದಿ ಸ್ವಯಂವರ ರಾಜಸೂಯ ಯಾಗಕ್ಕೂ ಹೋಗಿದ್ದ. ದುರ್ಯೋಧನನ ಪರವಾಗಿ ಯುದ್ಧವಾಡಿದ. ದ್ರುಷ್ಟದ್ಯುಮ್ನನಿಂದ ಹತನಾದ. |
| ರುಕ್ಮಾಂಗದ, ರುಕ್ಮರಥ | ಮಹಾಪರಾಕ್ರಮಿ. ಮದ್ರದೇಶಾಧಿಪ. ಪಾಂಡುರಾಜನ ಕಿರಿಯ ಮಡದಿ ಮಾದ್ರಿಯ ಸೋದರ. ದ್ರೌಪದಿ ಸ್ವಯಂವರದಲ್ಲಿ ಭೀಮನಿಂದ ಯುದ್ಧವಾಡಿ ಸೋತ. ಅತಿರಥನಾದ ಇವನು ಭಾರತಯುದ್ಧದಲ್ಲಿ ಪಾಂಡವರಿಗೆ ಸಹಕರಿಸಲು ಬಂದು ಮೋಸಹೋಗಿ ದುರ್ಯೋಧನನ ಪಕ್ಷವಹಿಸಿದ. ಭೀಮನಿಂದ ಸೋತ. ದುರ್ಯೋಧನನ ಬೇಡಿಕೆಯಂತೆ ಕರ್ಣನಿಗೆ ಸಾರಥಿಯಾಗಲು ಒಪ್ಪಿದ. ಕರ್ಣನ ತೇಜೋವಧೆ ಮಾಡಿದ. ಕರ್ಣ ಸತ್ತ ನಂತರ ಕೌರವರ ಸೇನಾಧಿಪತಿಯಾದ. ಯುಧಿಷ್ಠಿರನಿಂದ ಸೋದರರೊಂದಿಗೆ ಹತನಾದ. |
| – | ಮಹಾಯುದ್ಧದ ನಂತರವೂ ಉಳಿದವ. |
| ಒಂದು ಕೋಟಿ ಮಕ್ಕಳು. ಬಿಂದುಮತಿ | ಚಂದ್ರ ವಂಶಜ, ರಾಜರ್ಷಿ, ವೃಷ್ಣಿ ವಂಶಜನು. ಮಾಂಧಾತ ಇವನ ಅಳಿಯ. ಯಮೋಪಾಸಕ. ಯದುವಂಶದ ಅರಸು. ಒಬೊಬ್ಬ ಮಡದಿಯಲ್ಲಿ ಒಂದು ಸಾವಿರ ಪುತ್ರರು. ಇವನ ಮಗಳಾದ ಬಿಂದುಮತಿ ಯನ್ನು ಮಾಂಧಾಂತ ರಾಜನಿಗೆ ಕೊಟ್ಟು ಮದುವೆ ಮಾಡಿದ. ಚೈತ್ರರಥ ಎಂಬ ಹೆಸರಿದೆ. |
| – | ಋಷಭಕೂಟ ಗುಹೆಯಲ್ಲಿದ್ದರು. ವಾನರರು ಸೀತಾನ್ವೇಷಣೆಗೆ ಹೋದಾಗ ಇವಳಲ್ಲಿ ಆತಿಥ್ಯ ಪಡೆದರು. ಒಮ್ಮೆ ಗರುಡ ಈಕೆಗೆ ಕೇಡನ್ನು ಬಗೆದು ರೆಕ್ಕೆ ಸುಟ್ಟುಕೊಂಡು ನಂತರ ಪ್ರಾರ್ಥಿಸಿ ಪಡೆದುಕೊಂಡ. |
| – | ಅಶ್ವಶಾಸ್ತ್ರ ಬರೆದವನು. ತಪಶ್ಶಕ್ತಿಯಿಂದ ಶಾಂತ ಸರೋವರ ನಿರ್ಮಿಸಿದ್ದ. ಭೀಮಸೇನ ಹಿಡಂಬಿ ವಿವಾಹವಾದ ಮೇಲೆ ಪಾಂಡವರು ಆರು ತಿಂಗಳು ಇವನ ಆಶ್ರಮದಲ್ಲಿದ್ದರು. |
| ಕ್ಷತ್ರದೇವ, ಋಕ್ಷದೇವ | ಹುಟ್ಟಿನಿಂದ ಹೆಣ್ಣಾದ ಇವನು ಗಂಡಿನ ವೇಷಧರಿಸಿ ಬೆಳೆದ. ಹಿರಿಯ ಮಗ. ಹಿಂದಿನ ಜನ್ಮದಲ್ಲಿ ಅಂಬೆ ಭೀಷ್ಮರನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದ್ದಳು. ಶಿವನನ್ನು ಆರಾಧಿಸಿ ವರ ಪಡೆದಳು. ದ್ರುಪದಗೆ ಎಂದಾದರೂ ಗಂಡಾಗುವನೆಂಬ ನಂಬಿಕೆ ಇತ್ತು. ತುಂಬುರನೆಂಬ ಯಕ್ಷ ಪ್ರೀತಿಯಿಂದ ತನ್ನ ಪುರುಷತ್ವವನ್ನು ಕೊಟ್ಟು ಕಾರ್ಯವಾದ ಕೂಡಲೆ ಹಿಂತಿರುಗಿಸಿ ತನ್ನ ಸ್ತ್ರೀತ್ವವನ್ನು ಹಿಂದೆ ಪಡೆಯಲು ಹೇಳಿದ. ಶಿಖಂಡಿಗೆ ದಶಾರ್ಣರಾಜನ (ಹಿರಣ್ಯವರ್ಮ) ಮಗಳೊಂದಿಗೆ ಮದುವೆಯಾಯಿತು. ವಿಷಯ ತಿಳಿದ ಮಾವನ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಶಿವಕನ್ಯೆ | ಭಾರತೀ | ಪಾರ್ವತಿ ಶಚೀ ಶ್ಯಾಮಲಾ, ಉಷಾ. | ದ್ವಾ | ಮ.ಭಾ. | - | - |
| ಶತ ಉಲ್ಲುಕ ಕ್ಷತ್ರಿಯರು | | ಅರ್ಯಮ,ಅಂಶ | ದ್ವಾ | ಮ.ಭಾ | ಬಲರಾಮ ರೇವತಿ | - |
| ಶಿಶುಪಾಲ | ಹಿರಣ್ಯಕಶಿಪು | ಜಯ | ದ್ವಾ. | ಮ.ಭಾ. | ದಮಘೋಷ, ಶ್ರುತಶ್ರವಾ | - |
| ಶಿವ | ರುದ್ರದೇವರು | ಸಂಕರ್ಷಣ | - | - | ಬ್ರಹ್ಮಸರಸ್ವತಿ | ಪಾರ್ವತಿ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಹೆದರಿಕೆಯಿಂದ ಪ್ರಾಣ ತ್ಯಜಿಸಲು ಕಾಡಿಗೆ ಹೋದ. ಅಲ್ಲಿ ಈ ಸ್ಥೂಣಾಕರ್ಣ ಪುರುಷತ್ವವನ್ನು ಕೊಟ್ಟದ್ದು. ಹೀಗಾಗಿ ತಂದೆ ಮಾವ ಹೆಂಡತಿಯರನ್ನು ಸಂತೋಷಪಡಿಸಿ ಮಗನನ್ನೂ ಪಡೆದ. ಪುರುಷತ್ವವನ್ನು ಹಿಂತಿರುಗಿಸಲು ಹೋದಾಗ ಯಕ್ಷನಿಗೆ ಬಂದ ಶಾಪದಿಂದಾಗಿ ಹಾಗೆ ಹಿಂತಿರುಗಿದ. ದ್ರೋಣಾಚಾರ್ಯರಲ್ಲಿ ಅಸ್ತ್ರವಿದ್ಯಾಭ್ಯಾಸ ಮಾಡಿದ. ಭಾರತ ಯುದ್ಧದಲ್ಲಿ ಅಶ್ವತ್ಥಾಮರಿಂದ ಸೋತ. ಅರ್ಜುನನ ಸಹಾಯದಿಂದ ಭೀಷ್ಮರ ಮೇಲೆ ಯುದ್ಧಕ್ಕೆ ಹೋದ. ಭೀಷ್ಮರು ಸಾಯಲು ಇವನು ಕಾರಣನಾದ. ಕಡೆಗೆ ಇವಳು ಕಡೆ ರಾತ್ರಿ ಶಿಬಿರದಲ್ಲಿ ಮಲಗಿದ್ದಾಗ ಅಶ್ವತ್ಥಾಮರಿಂದ ಮಡಿದಳು. ಇವನಲ್ಲಿದ್ದ ಪುರುಷತ್ವವನ್ನು ತುಂಬುರು ಹಿಂದಕ್ಕೆ ಪಡೆದಿದ್ದ. |
| - | ಬ್ರಾಹ್ಮಣ ಸ್ತ್ರೀ, ತಪಸ್ಸನ್ನಾಚರಿಸಿ ಐದು ಸಲ ಪತಿಂದೇಹಿ ಎಂದು ಬೇಡಿದಳು. ಶಿವನು ಐದು ಪತಿಯುಳ್ಳವಳಾಗೆಂದು ವರವನಿತ್ತ. ಮುಂದೆ ಇವಳೇ ದ್ರೌಪದಿಯಾಗಿ ಅಗ್ನಿಕುಂಡದಿಂದ ಹೊರಬಂದಳು. |
| - | ಈರ್ವರು ಆದಿತ್ಯರು, ಯೋಧರು, ಈ ಯಾದವರು ದ್ವಾರಕಾದಲ್ಲಿದ್ದರು. |
| ಸುಕೇತು, ಧೃಷ್ಟಕೇತು ಶರಭ, ರೇಣುಮತಿ ದೇವಕಿ | ಅಸುರ, ಯದುವಂಶಜ. ಚೇದಿದೇಶದ ರಾಜ, ಜರಾಸಂಧನ ಆಪ್ತ ಶಿಷ್ಯ ಅಲ್ಲದೆ ಪ್ರಧಾನ ಸೇನಾಪತಿ ಆಗಿದ್ದ. ಕೃಷ್ಣನ ಸೋದರತ್ತೆ ಮಗ. ಒಮ್ಮೆ ಕೃಷ್ಣ ಸೋದರತ್ತೆ ಮನೆಗೆ ಹೋಗಿ ಇವನನ್ನು (ಶಿಶುವಾಗಿದ್ದಾಗ) ಎತ್ತಿಕೊಳ್ಳಲು ಇವನ ಹೆಚ್ಚಿನ ಎರಡು ಕೈಗಳು ಕಳಚಬಿದ್ದವು. ಆಗ ಅವಳು ಇವನಿಂದಲೇ ಮರಣವೆಂದು ತಿಳಿದು ಉಳಿಸಲು ಪ್ರಾರ್ಥಿಸಿದಳು. ಆಗ ಕೃಷ್ಣ ಶತಾಪರಾಧಗಳನ್ನು ಕ್ಷಮಿಸುವೆನೆಂದು ಮಾತುಕೊಟ್ಟ. ಇವನು ದ್ರೌಪದಿ ಸ್ವಯಂವರಕ್ಕೆ ಹೋಗಿದ್ದ. ಧರ್ಮರಾಜನ ರಾಜಸೂಯ ಯಾಗಕ್ಕೆ ಭೀಮ ದಿಗ್ವಿಜಯಕ್ಕೆ ಇವನಲ್ಲಿ ಹೋದಾಗ ಭಯದಿಂದ ಕಪ್ಪಕೊಟ್ಟಿದ್ದ. ರುಕ್ಮಿಣಿಯ ವಿವಾಹದ ವಿಷಯದಲ್ಲಿ ಕೃಷ್ಣನಿಗೆ ಕೊಡಬಾರದೆಂದು ಜರಾಸಂಧನ ಪಕ್ಷ ವಹಿಸಿದ. ರಾಜಸೂಯಯಾಗದಲ್ಲಿ ಕೃಷ್ಣನಿಗೆ ಅಗ್ರಪೂಜೆ ಕೊಡಬೇಕೆಂದು ಭೀಷ್ಮರು ಪ್ರತಿಪಾದಿಸಿದಾಗ ಇವನು ಭೀಷ್ಮರನ್ನು ನಿಂದಿಸಿದ ಅಲ್ಲದೆ ಕೃಷ್ಣನನ್ನು ತಿರಸ್ಕರಿಸಿ ಹೀಯಾಳಿಸಿ ಬೈಯತೊಡಗಿದ. ಭೀಮ ಸಿಟ್ಟಿಗೆದ್ದು ಕೊಲ್ಲಲು ಹೋದಾಗ ಕೃಷ್ಣ ತಡೆದ. ಕಡೆಗೆ ಕೃಷ್ಣ ಚಕ್ರದಿಂದ ಇವನ ಶಿರಶ್ಛೇದನ ಮಾಡಿದ. ಇವನ ಇಬ್ಬರು ಮಕ್ಕಳು ಯುದ್ಧದಲ್ಲಿ ದ್ರೋಣರಿಂದ ಸತ್ತರು. ಮಗಳನ್ನು ನಕುಲನಿಗೆ ಕೊಟ್ಟು ಮದುವೆ ಮಾಡಿದ್ದ. |
| ಗಣೇಶ, ಕುಮಾರ ಏಕಾದಶರುದ್ರರು | ತ್ರಿಮೂರ್ತಿಗಳಲ್ಲಿ ಒಬ್ಬ. ಬ್ರಹ್ಮದೇವರ ಹಣೆಯಿಂದ ಹುಟ್ಟಿ ಬಂದರು. ಅಹಂಕಾರ ತತ್ತ್ವದ ಅಭಿಮಾನಿ ದೇವತೆ. ಲಯಕಾರಕರಾದವರು. ಮನೋಭಿಮಾನಿಯೂ ಆದ ರುದ್ರರು ಗರುಡಶೇಷರಿಗೆ ಸಮರು. ಈತನನ್ನು ನೀಲಕಂಠ, ವೃಷವಾಹನ, ಸ್ಮಶಾನವಾಸಿ, ಚಂದ್ರಶೇಖರ, ಉಮೇಶ, ತ್ರಿನೇತ್ರ, ಈಶ್ವರ ಭವ, ಧೂರ್ಜಟಿ, ಹರ, ಕಪಲಿ, ಮಹದೇವ, ನಂದೀಶ್ವರ, ಪಶುಪತಿ, ಪಿನಾಕೀ, ಸ್ವಾಮಿ, ತ್ರಿಶೂಲಿ, ತ್ರಿಪುರಾಂತಕ, ಉಗ್ರೇಶ, ವಿರೂಪಾಕ್ಷ, ವಿಶ್ವನಾಥ, ಯೋಗೇಶ್ವರ, ಗಂಗಾಧರ ಮೊದಲಾಗಿ ಅನೇಕ ಹೆಸರುಗಳಿಂದ ಕರೆಸಿಕೊಳ್ಳುವ. ಸೋತ್ತಮರಿಗೆ ಗೌರವ ಕೊಡದ ಕಾರಣ ದಕ್ಷಯಜ್ಞವನ್ನು ಧ್ವಂಸಗೋಳಿಸಿದ. ಸಮುದ್ರ ಮಥನ ಕಾಲದಲ್ಲಿ ಉದ್ಭವಿಸಿದ ವಿಷವನ್ನು (ವಾಯು ದೇವರು ಕೊಟ್ಟ ಶೇಷ) ಪಾನಮಾಡಿ ಶ್ರೀಕಂಠನೆಂದೆನಿಸಿದ. ವಿಷ್ಣುವಿನ ಮೋಹಿನೀ ರೂಪಕ್ಕೆ ಮರುಳಾಗಿ ಮೋಹಿತ ಗೊಂಡ. ಇವನು ಕ್ಷಿಪ್ರಪ್ರಸಾದನೆನಿಸಿ ಅಸುರರ ತಪಸ್ಸಿಗೆ ಮೆಚ್ಚಿ ಯೋಚಿಸದೆ ಬೇಡಿದ ವರಗಳನ್ನು ನೀಡುವ ದೇವ. ಅಸುರರ ಆರಾಧ್ಯದೈವ. ಒಮ್ಮೆ ಭಸ್ಮಾಸುರನಿಗೆ ವರನೀಡಿ ಭಗವಂತನಿಂದ ಪಾರಾದ. ಹೀಗೆ ರಾವಣಾದಿ ದೈತ್ಯರಿಗೆ ಮಾರುಹೋಗಿ ವರಗಳನ್ನು ಕೊಟ್ಟ. ದ್ವಾಪರಾಂತ್ಯದಲ್ಲಿ ಅಶ್ವತ್ಥಾಮರಾಗಿ ಅವತರಿಸಿದ. ದುರ್ಯೋಧನನ ಪರವಾಗಿದ್ದು ಮಹಾಯುದ್ಧದಲ್ಲಿ ದ್ರೋಣರ ಅವಸಾನದ ನಂತರ ಘೋರಯುದ್ಧ ಮಾಡಿದ. ಕಡೆಯ ರಾತ್ರಿ ಉಳಿದವರಿದ್ದ ಶಿಬಿರವನ್ನು ಭಸ್ಮ ಮಾಡಿದ. ಪಾಂಡವರ ವಂಶ ನಿರ್ವಂಶ ಮಾಡುವ ಪ್ರಯತ್ನ ವಿಫಲವಾಯಿತು. ಯುದ್ಧದ ಕಡೆಯ ದಿನ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಶುಕಾಚಾರ್ಯ | ಶಿವ | -- | ದ್ವಾ. | ಮ.ಭಾ. | ವೇದವ್ಯಾಸ, ಘೃತಾಚಿ | ಪೀವರಿ |
| ಶುಕ್ರಾಚಾರ್ಯ | ಮಹರ್ಷಿ | -- | ದ್ವಾ. | ಮ.ಭಾ. | ಭೃಗು,ಪುಲೋಮೆ | ಶತಪರ್ವಾ, ಊರ್ಜಸ್ವತಿ, ಜಯಂತಿ |
| ಶಿನಿ | ಕ್ಷತ್ರಿಯ | -- | ದ್ವಾ. | ಮ.ಭಾ. | ಅನಮಿತ್ರ | - |
| ಶಿಬಿ | ಚಕ್ರವರ್ತಿ | -- | ದ್ವಾ. | ಮ.ಭಾ. | ಉಶೀನ,ಮಾಧವಿ (ಕಾನೀನ) | - |
| ಶುನಶ್ಶೇಫ | ಮಹರ್ಷಿ | -- | - | ಭಾಗವತ | ಋಚೀಕ | - |
| ಶುನಕ | ಮಹರ್ಷಿ | -- | ದ್ವಾ. | ಮ.ಭಾ. | ಪ್ರಮತಿ,ಘೃತಾಚಿ | ಪ್ರಮದ್ವರೆ |
| ಶೂರ್ಪಣಖಾ | ರಾಕ್ಷಸಿ | -- | ತ್ರೇ. | ರಾ. | ವಿಶ್ರವಸ, ರಾಕಾ | ವಿದ್ಯುಜ್ಜಿಹ್ವ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಇವನ ಮೂಲರೂಪವಾದ ಈಶ್ವರನೊಂದಿಗೇ ಯುದ್ಧವಾಡಿದ. ಶ್ರೀಕೃಷ್ಣ ಮೋಹ ಪಡಿಸಲು ಶಿವನನ್ನು ಕುರಿತು ತಪಸ್ಸನ್ನಾಚರಿಸಿದ. ವನವಾಸದಲ್ಲಿದ್ದ ಅರ್ಜುನ ಇವನನ್ನು ಕುರಿತು ತಪಸ್ಸನ್ನಾಚರಿಸಿ, ಕಿರಾತರೂಪದ ಇವನೊಂದಿಗೆ ಯುದ್ಧವಾಡಿ ಮೆಚ್ಚಿಸಿ ಪಾಶುಪತಾಸ್ತ್ರವನ್ನು ಪಡೆದ. ಕಾಮನಾದ ಮನ್ಮಥನನ್ನೂ ಸುಟ್ಟು ಹಾಕಿದ. ಭಗವಂತನ ಆಜ್ಞೆಯಂತೆ ಪಾಶುಪತಶಾಸ್ತ್ರವನ್ನು ರಚಿಸಿದ. ನಿತ್ಯ ರಾಮಮಂತ್ರ ಜಪಿಸುತ್ತ ಶ್ರೀಹರಿಯ ಪರಮಾನುಗ್ರಹಕ್ಕೆ ಪಾತ್ರನಾಗಿ ಶುದ್ಧ ವೈಷ್ಣವನೆಂದೆನಿಸಿದವನು. ಇವನ ಉಪಾಸ್ಯ ಮೂರ್ತಿ ನರಸಿಂಹ ಇವನು ಕೈಲಾಸವಾಸಿಯಾಗಿ ಈಶಾನ್ಯಾಧಿಪತಿ. (ನೋಡಿ ರುದ್ರ). |
| ಕೃಷ್ಣ ಗೌರಪ್ರಭ ಭೂರಿ, ದೇವಶ್ರುತ, ಕೀರ್ತಿ | ತಂದೆಯಿಂದಲೇ ವಿದ್ಯೆಯನ್ನು ಕಲೆತರು. ವೈರಾಗ್ಯ ಶಿಖಾಮಣಿಯಾಗಿದ್ದ ಜನಕನಲ್ಲೂ ವಿದ್ಯಾಭ್ಯಾಸ ಮಾಡಿದ. ನಾರದರ ಉಪದೇಶ ಪಡೆದಿದ್ದ. ವ್ಯಾಸರಿಂದ ಸಂಪೂರ್ಣ ಮಹಾಭಾರತ, ಭಾಗವತಾದಿಗಳನ್ನು ಕೇಳಿದ. ವೇದಗಳನ್ನು ಕಲೆತರು. ಎಲ್ಲ ಧರ್ಮಶಾಸ್ತ್ರಗಳ ಉಪದೇಶ ಪಡೆದರು. ಅರಣಿಕಾಷ್ಠದಿಂದ ವ್ಯಾಸರ ವೀರ್ಯದಿಂದ ಇವರು ಹುಟ್ಟಿದರೆಂದು ಉಲ್ಲೇಖವಿದೆ. ಇವರನ್ನು ಆರಣೇಯ ಎನ್ನುವರು. ಅಣುಹನೆಂಬ ಋಷಿ ಇವನ ಅಳಿಯ. ವ್ಯಾಸರಿಂದ ಕೇಳಿದ್ದ ಭಾಗವತವನ್ನು ಪರೀಕ್ಷಿತ್ ರಾಜ ಪ್ರಾಯೋಪ್ರವೇಶಕ್ಕೆ ಕುಳಿತಾಗ ಅಲ್ಲಿಗೆ ಹೋಗಿ ಏಳು ದಿನಗಳಲ್ಲಿ ಭಾಗವತವನ್ನು ಹೇಳಿ ಅವನನ್ನು ಉದ್ಧರಿಸಿದರು. |
| ದೇವಯಾನಿ, ದೇವಿ ಶಂಡ,ಅಮರ್ಕ ಶುಕ್ರ (ಗ್ರಹ) ಮುಂ. | ಚ್ಯವನರಿಗೆ ಅಣ್ಣ. ಶಿವನನ್ನು ಮೆಚ್ಚಿಸಿ ಮೃತಸಂಜೀವಿನಿ ವಿದ್ಯೆ ಕಲೆತರು. ವರುಣ ಇವನ ಅಳಿಯ. ಒಮ್ಮೆ ಇವರು ಶಿವನ ಶುಕ್ರ (ವೀರ್ಯ) ದಿಂದ ಜನಿಸಿ ಶುಕ್ರರೆನಿಸಿದ್ದರು. ಅಸುರರ ಪರವಾಗಿದ್ದವರು. ಯುದ್ಧದಲ್ಲಿ ಮೃತ ದಾನವರನ್ನು ಬದುಕಿಸಿದರು. ಬಲಿಚಕ್ರವರ್ತಿಗೆ ಗುರುವಾಗಿದ್ದರು. ವಾಮನನಿಗೆ ಭೂಮಿದಾನ ಕೊಟ್ಟಾಗ ಬಲಿಗೆ ನೀರು ಬಿಡುವ ಗಿಂಡಿಯ ತೂತಲ್ಲಿ ಅಡ್ಡಬಂದರು. ಹೀಗಾಗಿ ಒಂದು ಕಣ್ಣನ್ನು ಕಳೆದುಕೊಂಡರು. ಹೀಗೆ ಇವರು ತಮ್ಮ ಮಕ್ಕಳನ್ನೆ ಹಿರಣ್ಯಕಶಿಪುವಿನ ಗುರುಕುಲದಲ್ಲಿ ಗುರುಗಳನ್ನಾಗಿ ನೇಮಿಸಿದ್ದರು. ಇವರ ನಾಲ್ಕು ಮಕ್ಕಳೂ ದೈತ್ಯರ ಪುರೋಹಿತರಾಗಿದ್ದರು. ಈತನು ಕಚನನ್ನು ಶಿಷ್ಯನನ್ನಾಗಿಸಿಕೊಂಡು ಎರಡು ಸಲ ಜೀವದಾನ ಮಾಡಿದ. ಇಂದ್ರನ ಮಗಳಾದ ಜಯಂತಿಯನ್ನು ವಿವಾಹವಾದ. ದೇವಯಾನಿಗೆ ಬಂದ ಸಂಕಷ್ಟವನ್ನು ಪರಿಹರಿಸಿದ. |
| ಸತ್ಯಕ | ಯದುಕುಲದ ವೃಷ್ಣಿವಂಶಜ. ಸಾತ್ಯಕಿತ ತಾತ. ವೀರ. ಸೋಮದತ್ತನೊಂದಿಗೆ ಯುದ್ಧಮಾಡಿದ. |
| ವೃಷದರ್ಭ, ಸುವೀರ ಮದ್ರ, ಕೇಕಯ, ಬೃಹದ್ಗರ್ಭ ಕಪೋತರೋಮ | ಚಂದ್ರವಂಶಜ. ಯಯಾತಿಯ ಅಳಿಯ. ಇವನು ರಾಜರ್ಷಿಯಾಗಿದ್ದ. ಧರ್ಮ ತ್ಯಾಗಕ್ಕೆ ಹೆಸರಾಗಿದ್ದ. ಇವನು ದಾನದಲ್ಲಿ ಶ್ರೇಷ್ಠನಾದವನೆಂದು ಸ್ವರ್ಗಾದಿಲೋಕಗಳಲ್ಲಿ ಪ್ರಸಿದ್ಧಿ ಪಡೆದಿದ್ದ. ಒಮ್ಮೆ ಇಂದ್ರ ಹದ್ದಿನರೂಪದಲ್ಲಿ ಪರೀಕ್ಷಿಸಲು ಇವನು ತನ್ನ ಮಾಂಸವನ್ನೇ ಕತ್ತರಿಸಿ ತಕಡಿಯಲ್ಲಿಟ್ಟ ಕಡೆಗೆ ತಾನೆ ಬಲಿಯಾಗಿ ಕೂತ. ಕಪೋತರೂಪದ ಅಗ್ನಿಯಿಂದ ವರದಾನ ಪಡೆದ. ದೈವಭಕ್ತ, ಭಾರತವರ್ಷವನ್ನು ಅತ್ಯಂತವಾಗಿ ಪ್ರೀತಿಸಿದ. ತನ್ನ ರಾಜ್ಯದಲ್ಲಿ ಮಾಂಸಭಕ್ಷಣ ವನ್ನು ನಿಷೇಧಿಸಿದ. ಇವನ ಪುಣ್ಯವನ್ನು ಯಯಾತಿಗೆ ಧಾರೆ ಎರೆದು ಸ್ವರ್ಗಕ್ಕೆ ಕಳುಹಿಸಿದ. |
| – | ಭೃಗುವಂಶಜ. ಇವನು ಮಧ್ಯಮ ಪುತ್ರ. ತಂದೆ ಲಕ್ಷ ಗೋವುಗಳನ್ನು ಪಡೆದು ಹರಿಶ್ಚಂದ್ರ ಮಹರಾಜನಿಗೆ ಯಜ್ಞ ಪಶುವಾಗಿ ಮಾರಿದ. ವಿಶ್ವಾಮಿತ್ರರು ಇವನನ್ನು ಬಿಡಿಸಿಕೊಂಡು ಬಂದು ತನ್ನ ಪುತ್ರನನ್ನಾಗಿ ಸ್ವೀಕರಿಸಿದರು. ವಿಶ್ವಾಮಿತ್ರರೇ ವಿದ್ಯೆಯನ್ನು ಹೇಳಿ ಉದ್ಧರಿಸಿದರು. ಇವನ ಹೆಸರು ದೇವರಾತನೆಂದಾಯಿತು. |
| ಶೌನಕ | ಚ್ಯವನರ ಮೊಮ್ಮಗ. ಈತನ ಮಗನಿಗೆ ಸೂತಪುರಾಣಿಕರು ಭಾರತ ಕಥೆಯನ್ನು ಹೇಳಿದರು. |
| ಸಾಂಬ | ರಾವಣ ಕುಂಭಕರ್ಣರ ತಂಗಿ ವಿಭೀಷಣನ ಅಕ್ಕ. ದುಷ್ಟಸ್ವಭಾವದ ರಕ್ಕಸಿ. ಇವಳ ಗಂಡನನ್ನು ರಾವಣ ದಿಗ್ವಿಜಯಕ್ಕೆ ಹೊರಟಾಗ ವಿರುದ್ಧಪಕ್ಷದವನೆಂದು ತಿಳಿಯದೆ ಕೊಂದ. ಗೋಳಿಟ್ಟ ತಂಗಿಗೆ ಹದಿನಾಲ್ಕು ಸಾವಿರ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಶುಕ್ರ(ಶುಕ) | ಮಹಾರಾಜ | -- | ದ್ವಾ. | ಮ.ಭಾ. | ಶರ್ಯಾತಿ | - |
| ಶೂರಸೇನ | ಯದುವಂಶಜ ಕ್ಷತ್ರಿಯ | -- | ದ್ವಾ. | ಮ.ಭಾ. | ದೇವಮೀಢ | ಭೋಜದೇವಿ, ಇತರರು |
| ಶೃಂಗಿ | ಮಹರ್ಷಿ | -- | ದ್ವಾ. | ಭಾಗವತ | ಶಮೀಕ | - |
| ಶಿಂಶುಮಾರ | ವಿಷ್ಣು | -- | ತ್ರೇ | ಭಾಗವತ | - | ಮಹಾಲಕ್ಷ್ಮೀ |
| ಶೇಷ | ದೇವತೆ | -- | - | ಭಾಗವತ | ಕಶ್ಯಪ, ಕದ್ರು | ವಾರುಣಿ, ಕಾಂತಿ |
| ಶೈಭ್ಯ | ಋಭು | -- | ದ್ವಾ. | ಮ.ಭಾ. | - | ಶ್ರುತಕೀರ್ತಿ |
| ಶೌನಕ | ಮಹರ್ಷಿ | -- | ದ್ವಾ. | ಮ.ಭಾ. | ಶುನಕ,ಪ್ರಮದ್ವರೆ | - |
| ಶ್ಯೇನೀ | ದೇವತೆ | -- | ದ್ವಾ. | ಮ.ಭಾ. | ಕಶ್ಯಪ,ತಾಮ್ರಾ | ಅರುಣ |
| ಶ್ರೀ | ಮಹಾಲಕ್ಷ್ಮಿ | -- | - | ಭಾಗವತ | - | ಮಹಾವಿಷ್ಣು |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
| --- | --- |
| | ರಾಕ್ಷಸ ಸೇನೆಯೊಂದಿಗೆ ದಂಡಕಾರಣ್ಯಕ್ಕೆ ಕಳುಹಿಸಿದ. ಜೊತೆಗೆ ಖರದೂಷಣ ಅಸುರನನ್ನು ಕಳಿಸಿದ. ಮತ್ತೊಬ್ಬ ಗಂಡನನ್ನು ಹುಡುಕುತ್ತಿರಲು ಅರಣ್ಯದಲ್ಲಿ ರಾಮನನ್ನು ಮೋಹಿಸಿ ಸೀತೆಯನ್ನೇ ನುಂಗಲು ಯತ್ನಿಸಿದಳು. ರಾಮನ ಆಜ್ಞೆಯಂತೆ ಲಕ್ಷ್ಮಣನಿಂದ ಕಿವಿ ಮೂಗನ್ನು ಕತ್ತರಿಸಿಕೊಂಡು ಅವಮಾನಿತಳಾದಳು. ಮತ್ತೆ ರಾವಣನಲ್ಲಿ ಹೋಗಿ ಸೀತೆಯ ಸೌಂದರ್ಯಾದಿಗಳನ್ನು ಹೇಳಿ ಅವನ ತಲೆಕೆಡಿಸಿದಳು. ಇತ್ತ ಖರಾದಿಗಳನ್ನು ರಾಮನ ಮೇಲೆ ಯುದ್ಧಕ್ಕೆ ಕಳುಹಿಸಿ ಸಾಯಿಸಿದಳು. ತಾನೂ ಅಧೋಗತಿಗೆ ಹೋದಳು. |
| – | ಸೂರ್ಯವಂಶಜ. ಇವನಿಗೆ ಶುಕ ಎಂದು ಹೆಸರಿದೆ. ನೂರು ಅಶ್ವಮೇಧಯಾಗ ಮಾಡಿದ ಪುಣ್ಯಾತ್ಮ. ಕೊನೆಗೆ ವಾನಪ್ರಸ್ಥಕ್ಕೆಂದು ಶತಶೃಂಗದಲ್ಲಿ ತಪಸ್ಸು ಮಾಡುತ್ತಿದ್ದ. ಈತನೇ ಬಾಲ ಪಾಂಡವರಿಗೆ ಹಿಮಾಲಯದಲ್ಲಿ ಶಾಸ್ತ್ರ ಶಸ್ತ್ರಾಭ್ಯಾಸ ಮಾಡಿಸಿದವನು. |
| ವಾಸುದೇವ, ಪೃಥೆ ಮುಂತಾದವರು | ಶ್ರೇಷ್ಠ ಪುರುಷ. ಇವನ ಮಗಳಾದ ಪೃಥೆಯನ್ನು ಮಿತ್ರನಾದ ರಾಜಾ ಕುಂತೀ ಭೋಜನಿಗೆ ದತ್ತಕವಾಗಿ ಕೊಟ್ಟ ಇದರಿಂದಾಗಿ ಅವಳಿಗೆ ಕುಂತಿ ಎಂದು ಹೆಸರು ಬಂತು. ಒಬ್ಬ ಮಗಳು ಶ್ರುತದೇವಿ - ದಂತವಕ್ರನ ತಾಯಿ, ಮಗಳು ಶ್ರುತಕೀರ್ತಿ - ಕೇಕಯ ರಾಜನ ಹೆಂಡತಿ, ಮಗಳು ರಾಜಾಧಿದೇವಿ - ವಿಂದಾನುವಿಂದರ ತಾಯಿ, ಶ್ರುತಶ್ರವಾ - ಶಿಶುಪಾಲನ ತಾಯಿ ಹೀಗೆ ಐವರು ಪುತ್ರಿಯರು. ಈತನ ಮೊಮ್ಮಗನಾಗಿ ಕೃಷ್ಣ ಅವತರಿಸಿ ಬಂದ. |
| – | ಅಂಗಿರಸ ವಂಶಜ, ಗೋವಿನ ಹೊಟ್ಟೆಯಲ್ಲಿ ಜನಿಸಿದವ. ತಂದೆ ಅಸಂಪ್ರಜ್ಞಾತಸಮಾಧಿಯಲ್ಲಿದ್ದಾಗ ಪರೀಕ್ಷಿತರಾಜ ಸತ್ತ ಸರ್ಪವನ್ನು ಕೊರಳಿಗೆ ಹಾಕಲು ರಾಜನಿಗೆ ಏಳು ದಿನದಲ್ಲಿ ತಕ್ಷಕನಿಂದ ಕಚ್ಚಿ ಸಾವು ಬರಲೆಂದು 8 ವರ್ಷದ ಈ ವಟು ಶಾಪಕೊಟ್ಟ |
| – | ಭಗವಂತನ ಪೂರ್ಣಾವತಾರ, ಬ್ರಹ್ಮಾಂಡವನ್ನು ತನ್ನ ಚೇಳಿನ ರೂಪದ ಕೊಂಡಿಯಲ್ಲಿ ಧರಿಸಿರುವ. ಮುಕ್ತಿ ಯೋಗ್ಯರು ಇವನ ದ್ವಾರಾ ಹೋಗುವರು. ಭಗವಂಶನ ಇದೊಂದು ವಿರಾಟ್ ರೂಪ. |
| – | ಸರ್ಪರಾಜ, ಸಾವಿರ ಹೆಡೆಗಳುಳ್ಳವ. ವಿಷ್ಣುವಿನ ಹಾಸಿಗೆಯಾಗಿರುವವನು. ಬ್ರಹ್ಮಾಂಡವನ್ನು ತನ್ನ ತಲೆಯ ಮೇಲೆ ಒಂದು ಸಾಸವೆ ಕಾಳಿನಂತೆ ಧರಿಸಿರುವ. ಭೂಮಿಯ ಅಧೋಭಾಗಕ್ಕೆ ಅಧಿಪತಿ. ಈತನಿಗೆ ಅನಂತನೆಂದು ಹೆಸರಿದೆ. ತ್ರೇತಾಯುಗದಲ್ಲಿ ಲಕ್ಷ್ಮಣನಾಗಿ, ದ್ವಾಪರದಲ್ಲಿ ಬಲರಾಮನಾಗಿ ಅವತರಿಸಿದ. ನಾಗಗಳಲ್ಲಿ ಪ್ರಥಮನೆನಿಸಿರುವ ಬ್ರಹ್ಮನಿಂದ ವರ ಪಡೆದು ಬಲಿಷ್ಠನಾದ. ಒಮ್ಮೆ ವಾಯುದೇವರಿಗೆ ಹಾಗೂ ಶೇಷನಿಗೆ ಪೈಪೋಟಿ ಹುಟ್ಟಿದಾಗ ಭಗವಂತನಾದ ವಿಷ್ಣುವಿನ ಅಧ್ಯಕ್ಷತೆಯಲ್ಲಿ ಸ್ಪರ್ಧೆ ನಡೆದು ವಾಯುವಿನಿಂದ ಪರಾಜಿತನಾದ. ಇವನಿಂದಾಗಿ ಶೇಷಾಚಲವೆಂದು ಹೆಸರಾಯಿತು. ಇವನು ಗರುಡ ರುದ್ರರಿಗೆ ಸಮನಾದ ದೇವತೆ. |
| ಪಂಚಕೇಕಯರು | ಶ್ರೀಕೃಷ್ಣನ ಮಾವ. ಪುತ್ರರೊಂದಿಗೆ ಪಾಂಡವರ ಪಕ್ಷ ವಹಿಸಿದ. ಇವನು ಕೇಕಯದೇಶದ ರಾಜನಾಗಿದ್ದ |
| ಭದ್ರಾ | |
| – | ಭೃಗುವಂಶಜರು. ನೈಮಿಷಾರಣ್ಯದಲ್ಲಿ ವಾಸವಾಗಿದ್ದು ನಿರಂತರ ಜ್ಞಾನಸತ್ರ ನಡೆಸುತ್ತಿದ್ದವರಲ್ಲಿ ಮುಖ್ಯಸ್ಥರು. ಅಲ್ಲದೆ ಕುಲಪತಿಯಾಗಿದ್ದರು. ಸೂತಪುರಾಣಿಕರಿಂದ ಪುರಾಣಗಳನ್ನು ಇತಹಾಸಾದಿಗಳನ್ನು ಕೇಳಿದವರಲ್ಲಿ ಪ್ರಧಾನರಾಗಿದ್ದರು. |
| ಸಂಪಾತಿ, ಜಟಾಯು | ದೃಧ್ರ ಪಕ್ಷಿಗಳಿಗೆ ಜನ್ಮವಿತ್ತ ತಾಯಿ. ಇವಳಲ್ಲಿ ಬಲಶಾಯಿ ಪಕ್ಷಿಗಳು ಹುಟ್ಟಿದವು. ವಿನತೆಯು ಇವಳ ಅತ್ತೆ. |
| ಬ್ರಹ್ಮಾಂಡ | ಕ್ಷೀರಸಮುದ್ರದಿಂದ ಜನಿಸಿದವಳು. ದೇಶಕಾಲಗಳಿಂದ ಭಗವಂತನಿಗೆ ಸಮಾಸಮಳು. ಶ್ರೀಹರಿಯ ನಂತರ ಬರುವ ಶ್ರೇಷ್ಠ ದೇವೋತ್ತಮಳು. ವಿಷ್ಣುವಿಗೆ ಗುಣಗಳಿಂದ ನ್ಯೂನಳು. ನಿತ್ಯಾ ಅವಿಯೋಗಿ ದಂಪತಿಗಳು. ಪ್ರಳಯ ಕಾಲದಲ್ಲಿ ಭಗವಂತನೊಂದಿಗಿರುವ ಏಕೈಕ ದೇವತೆ ಇವಳು. ನೋಡಿ ಲಕ್ಷ್ಮೀ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಶ್ರೀಮತಿ | ರಾಜಕನ್ಯೆ | -- | - | ಭಾಗವತ | ಅಂಬರೀಷ | ವಿಷ್ಣು |
| ಶ್ರುತದೇವಾ | ರಾಜಕನ್ಯೆ | -- | - | ಭಾಗವತ | ಶೂರಸೇನ | ವೃದ್ಧಶರ್ಮ |
| ಶ್ರುತಶ್ರವೆ | ರಾಜಕನ್ಯೆ | -- | ದ್ವಾ. | ಮ.ಭಾ. | ಶೂರಸೇನ | ದಮಘೋಷ |
| ಶ್ರುತಕೀರ್ತಿ | ದೇವತೆ | -- | ದ್ವಾ | ಮ.ಭಾ. | ಅರ್ಜುನ, ದ್ರೌಪದಿ | - |
| ಶ್ರುತಾಯು | ಅರಸು | -- | ದ್ವಾ. | ಮ.ಭಾ. | ವರುಣ,ಪರ್ಣಾಶಾ | - |
| ಶ್ರುತಾಯುಧ | ಅರಸು | -- | ದ್ವಾ. | ಮ.ಭಾ. | ವರುಣ,ಪರ್ಣಾಶಾ | - |
| ಶ್ವಫಲ್ಕ | ಯದುವಂಶಜ | -- | ದ್ವಾ. | ಮ.ಭಾ. | ವೃಷ್ಣಿ | ಗಾದಿನಿ |
| ಶ್ವೇತ | ರಾಜಕುವರ | -- | ದ್ವಾ. | ಮ.ಭಾ. | ವಿರಾಟ,ಸುರಥೆ | - |
| ಶ್ವೇತ | ಅರಸು | -- | ತ್ರೇ. | ಮ.ಭಾ. | - | - |
| ಶ್ವೇತಕೇತು | ಮಹರ್ಷಿ | -- | ದ್ವಾ. | ಮ.ಭಾ. | ಉದ್ದಾಲಕ | ಸುವರ್ಚಲಾ |
| ಷಣ್ಮುಖ | ದೇವತೆ | -- | - | ಭಾಗವತ | ಶಿವ, ಪಾರ್ವತಿ | ದೇವಸೇನೆ(ಷಷ್ಠೀ) |
| ಸಂಜ್ಞಾ | ದೇವತೆ | -- | ತ್ರೇ. | ಮ.ಭಾ. | ವಿಶ್ವಕರ್ಮ | ಸೂರ್ಯ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| - | ಇಕ್ಷ್ವಾಕುವಂಶದ ರಾಜಕುವರಿ. ಈಕೆಯನ್ನು ವಿವಾಹವಾಗಲು ಇಷ್ಟಪಟ್ಟ ನಾರದ ಹಾಗೂ ಪರ್ವತ ಇಬ್ಬರಲ್ಲಿ ಸ್ಪರ್ಧೆ ಏರ್ಪಟ್ಟಿತ್ತು. ಪರಾಜಿತರಾಗಿ ಕಪಿ ಮುಖದವರಾದರು. ಕಡೆಗೆ ವಿಷ್ಣುವೇ ವಿವಾಹವಾದನು. |
| ದಂತವಕ್ರ | ಯದುವಂಶದ ರಾಜಕುವರಿ. ಕುಂತಿಯ ತಂಗಿ. ಇವಳ ಮಗ ದುಷ್ಟ ಅಸುರ. ವೈಷ್ಣವರ ದ್ವೇಷಿ. ಇವನು ಶ್ರೀಕೃಷ್ಣನಿಂದ ಹತನಾದ. |
| ಶಿಶುಪಾಲ | ಕುಂತಿಯ ತಂಗಿ, ಯದುವಂಶಜಳು. ಇವಳ ಮಗ ದೈತ್ಯ. ಇವನನ್ನು ಕೃಷ್ಣ ಕೊಂದ. |
| - | ದ್ರೌಪದಿಯ ಮಕ್ಕಳಲ್ಲಿ ಮೂರನೆಯವನು. ಯುದ್ಧ ನಂತರ ಶಿಬಿರದಲ್ಲಿ ಅಶ್ವತ್ಥಾಮರಿಂದ ಹತರಾದರು. |
| ಧೀರ್ಗಾಯು<br>ನಿಯತಾಯು | ಕಲಿಂಗದೇಶದ ರಾಜ. ಧರ್ಮಜನ ರಾಜಸೂಯಯಾಗದಲ್ಲಿ ಭಾಗವಹಿಸಿದ್ದ. ದ್ರೌಪದೀ ಸ್ವಯಂವರಕ್ಕೂ ಬಂದಿದ್ದ ದುಷ್ಟ ಅರಸ. ದುರ್ಯೋಧನನ ಒಂದು ಅಕ್ಷೋಹಿಣಿ ಸೈನ್ಯಕ್ಕೆ ನಾಯಕನಾಗಿದ್ದ. ಭೀಮನಿಂದ ಸೋತ. ಇವನಲ್ಲಿದ್ದ ವರುಣನ ಗದೆಯನ್ನು ಭೀಮನಾಶಪಡಿಸಿದ. ಇವನು ಇವನ ಮಕ್ಕಳು ಅರ್ಜುನನಿಂದ ಸತ್ತರು. |
| - | ಕಲಿಂಗದೇಶದ ಅರಸು. ವರುಣ ಇವನಿಗೆ ದಿವ್ಯ ಗದೆಯನ್ನು ನೀಡಿದ್ದ. ದುರ್ಯೋಧನನ ಪಕ್ಷ ವಹಿಸಿ ಯುದ್ಧ ಮಾಡಿದ. ಕೃಷ್ಣನ ಮೇಲೆ ಗದೆಯನ್ನು ಎಸೆದಾಗ ಆಗದೆ ಹಾಗೆಯೇ ಹಿಂದೆ ಬಂದು ಇವನ ಮೇಲೆ ಬಿದ್ದು ಇವನನ್ನು ಸಾಯಿಸಿತು. (ಶ್ರುತಾಯು ಮತ್ತು ಶ್ರುತಾಯುಧ ಒಬ್ಬನೇ ಎಂದೂ ಹೇಳುವರು). |
| ಅಕ್ರೂರ | ಬಹಳ ಧರ್ಮಿಷ್ಠ ಕಾಶಿರಾಜ್ಯಕ್ಕೆ ಬರಬಂದಿದ್ದಾಗ ಅಲ್ಲಿಯ ರಾಜ ಇವನನ್ನು ಕರೆದೊಯ್ದು ಇವನು ಕಾಲಿಡುತ್ತಲೇ ವೃಷ್ಟಿಯಾಯಿತು. ಸಂತುಷ್ಟನಾದ ರಾಜ ಅವನ ಮಗಳಾದ ಗಾಂದಿನಿಯನ್ನು ಕೊಟ್ಟು ಮದುವೆ ಮಾಡಿದ. |
| - | ಉತ್ತರ ಕುಮಾರನ ಸೋದರ. ಶಂಖ ಇವನ ತಮ್ಮ. ಯುದ್ಧದಲ್ಲಿ ಭೀಷ್ಮರಿಂದ ಹತನಾದ. |
| - | ಉತ್ತಮ ವಿಷ್ಣು ಭಕ್ತ. ಪುರಿ ಕ್ಷೇತ್ರದ ಜಗನ್ನಾಥ ಇವನ ಪರದೈವ. ಅವನನ್ನು ಕುರಿತು ತಪಸ್ಸನ್ನಾಚರಿಸಿ ರಾಜ್ಯಕ್ಕೆ ಸುಭಿಕ್ಷೆ ತಂದು ಕಡೆಗೆ ಸಾಯುಜ್ಯ ಮುಕ್ತಿಯನ್ನು ಪಡೆದ. |
| - | ಗೌತಮಗೋತ್ರಜ. ಆರುಣಿ ಎಂದೂ ಹೆಸರಿದೆ. ನಚಿಕೇತ ಮುನಿಯ ತಮ್ಮ. ದೇವಸೇನಾನಿಯಾಗಿರುವ. ಸುವರ್ಚತಿಯೊಂದಿಗೆ ಚರ್ಚೆ ಮಾಡಿ ಮದುವೆಯಾದ. ಅಷ್ಟಾವಕ್ರಮುನಿಯೊಂದಿಗೆ ಇದ್ದವನು. ಗುರುಕುಲ ದಿಂದ ಬಂದವನು ತಂದೆಗೆ ಅಗೌರವ ತೋರಿದ. ಇದರಿಂದ ತಂದೆ ೯ ಉದಾಹರಣೆಗಳಿಂದ ವಿವರಿಸಿ ಅಹಂಕಾರ ಬೇಡವೆಂದು ಉಪದೇಶ ಮಾಡಿದ. |
| - | ಕುಮಾರಸ್ವಾಮಿ ಷಡಾನನ, ಸ್ಕಂದ ಎಂಬ ಹೆಸರಿದೆ. ಬ್ರಹ್ಮದೇವರು ದೇವತೆಗಳ ಸೇನಾಧಿಪತಿಯಾಗಿ ಅಭಿಷೇಕ ಮಾಡಿದರು. ಹಾಗೆಯೇ ನಂದಿಸೇನ, ಲೋಹಿತಾಕ್ಷ, ಪುರಾತಕರ್ಣ, ಕುಮುದಮಾಲಿ ಎಂಬ ಹಾಗೂ ಮಹಾವಿಷ್ಣುವು ಸಂಕ್ರಮ ಚಕ್ರ, ವಿಕ್ರಮ ಪಾರ್ಷದರನ್ನು ಅನುಗ್ರಹಿಸಿದರು. ಇತರ ಎಲ್ಲ ದೇವತೆಗಳಿಂದಲೂ ಆಯುಧಾದಿ ಗಳನ್ನು ಪಡೆದ. ಇವನನ್ನು ಸ್ಕಂಧನೆಂದು ಕರೆವರು. ಆರು ಮುಖದವನು. ಕೃತ್ತಿಕೆಯರನ್ನು, ಮಾತೃಗಣಗಳನ್ನು ತಾಯಿಯಾಗಿ ಸ್ವೀಕರಿಸಿದ. ಮಹಿಷಾಸುರ ತಾರಕಾಸುರ, ತ್ರಿಪಾದ ಮೊದಲಾದವರನ್ನೂ ಸಂಹರಿಸಿದ. |
| ವೈವಸ್ವತ, ಯಮ,<br>ಅಶ್ವಿನಿದೇವತೆಗಳು | ಇವಳು ಅಶ್ವರೂಪಧರಿಸಿದ್ದಾಗ ಸೂರ್ಯ ಅಶ್ವವಾಗಿ ಬಂದು ಸಂಗ ಮಾಡಲು ಇವಳ ಮೂಗಿನಿಂದ ನಾಸತ್ಯ ಮತ್ತು ದಸ್ರರೆಂಬ ಅಶ್ವಿನಿಕುಮಾರರು ಜನಿಸಿದರು. ಇದಕ್ಕೂ ಮುಂಚೆ ಸೂರ್ಯನ ತೇಜಸ್ಸನ್ನು ಸಹಿಸಲಾಗದೆ ಅವನೊಂದಿಗೆ ಸಂಸಾರಮಾಡದಾಗದೆಂದು ತನ್ನಂತಯೇ ಇರುವ ಒಬ್ಬ ಸ್ತ್ರೀಯನ್ನು ಸೃಷ್ಟಿಸಿ ಸೂರ್ಯನ ಬಳಿ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಶ್ರೀಮತಿ | ರಾಜಕನ್ಯೆ | -- | - | ಭಾಗವತ | ಅಂಬರೀಷ | ವಿಷ್ಣು |
| ಶ್ರುತದೇವಾ | ರಾಜಕನ್ಯೆ | -- | - | ಭಾಗವತ | ಶೂರಸೇನ | ವೃದ್ಧಶರ್ಮ |
| ಶ್ರುತಶ್ರವೆ | ರಾಜಕನ್ಯೆ | -- | ದ್ವಾ. | ಮ.ಭಾ. | ಶೂರಸೇನ | ದಮಘೋಷ |
| ಶ್ರುತಕೀರ್ತಿ | ದೇವತೆ | -- | ದ್ವಾ | ಮ.ಭಾ. | ಅರ್ಜುನ, ದ್ರೌಪದಿ | - |
| ಶ್ರುತಾಯು | ಅರಸು | -- | ದ್ವಾ. | ಮ.ಭಾ. | ವರುಣ,ಪರ್ಣಾಶಾ | - |
| ಶ್ರುತಾಯುಧ | ಅರಸು | -- | ದ್ವಾ. | ಮ.ಭಾ. | ವರುಣ,ಪರ್ಣಾಶಾ | - |
| ಶ್ವಫಲ್ಕ | ಯದುವಂಶಜ | -- | ದ್ವಾ. | ಮ.ಭಾ. | ವೃಷ್ಣಿ | ಗಾದಿನಿ |
| ಶ್ವೇತ | ರಾಜಕುವರ | -- | ದ್ವಾ. | ಮ.ಭಾ. | ವಿರಾಟ,ಸುರಥೆ | - |
| ಶ್ವೇತ | ಅರಸು | -- | ತ್ರೇ. | ಮ.ಭಾ. | - | - |
| ಶ್ವೇತಕೇತು | ಮಹರ್ಷಿ | -- | ದ್ವಾ. | ಮ.ಭಾ. | ಉದ್ದಾಲಕ | ಸುವರ್ಚಲಾ |
| ಷಣ್ಮುಖ | ದೇವತೆ | -- | - | ಭಾಗವತ | ಶಿವ, ಪಾರ್ವತಿ | ದೇವಸೇನೆ(ಷಷ್ಠೀ) |
| ಸಂಜ್ಞಾ | ದೇವತೆ | -- | ತ್ರೇ. | ಮ.ಭಾ. | ವಿಶ್ವಕರ್ಮ | ಸೂರ್ಯ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| - | ಇಕ್ಷ್ವಾಕುವಂಶದ ರಾಜಕುವರಿ. ಈಕೆಯನ್ನು ವಿವಾಹವಾಗಲು ಇಷ್ಟಪಟ್ಟ ನಾರದ ಹಾಗೂ ಪರ್ವತ ಇಬ್ಬರಲ್ಲಿ ಸ್ಪರ್ಧೆ ಏರ್ಪಟ್ಟಿತ್ತು. ಪರಾಜಿತರಾಗಿ ಕಪಿ ಮುಖದವರಾದರು. ಕಡೆಗೆ ವಿಷ್ಣುವೇ ವಿವಾಹವಾದನು. |
| ದಂತವಕ್ರ | ಯದುವಂಶದ ರಾಜಕುವರಿ. ಕುಂತಿಯ ತಂಗಿ. ಇವಳ ಮಗ ದುಷ್ಟ ಅಸುರ. ವೈಷ್ಣವರ ದ್ವೇಷಿ. ಇವನು ಶ್ರೀಕೃಷ್ಣನಿಂದ ಹತನಾದ. |
| ಶಿಶುಪಾಲ | ಕುಂತಿಯ ತಂಗಿ, ಯದುವಂಶಜಳು. ಇವಳ ಮಗ ದೈತ್ಯ. ಇವನನ್ನು ಕೃಷ್ಣ ಕೊಂದ. |
| - | ದ್ರೌಪದಿಯ ಮಕ್ಕಳಲ್ಲಿ ಮೂರನೆಯವನು. ಯುದ್ಧ ನಂತರ ಶಿಬಿರದಲ್ಲಿ ಅಶ್ವಾತ್ಥಾಮರಿಂದ ಹತರಾದರು. |
| ಧೀರ್ಗಾಯು<br>ನಿಯತಾಯು | ಕಲಿಂಗದೇಶದ ರಾಜ. ಧರ್ಮಜನ ರಾಜಸೂಯಯಾಗದಲ್ಲಿ ಭಾಗವಹಿಸಿದ್ದ. ದ್ರೌಪದೀ ಸ್ವಯಂವರಕ್ಕೂ ಬಂದಿದ್ದ ದುಷ್ಟ ಅರಸ. ದುರ್ಯೋಧನನ ಒಂದು ಅಕ್ಷೋಹಿಣಿ ಸೈನ್ಯಕ್ಕೆ ನಾಯಕನಾಗಿದ್ದ. ಭೀಮನಿಂದ ಸೋತ. ಇವನಲ್ಲಿದ್ದ ವರುಣನ ಗದೆಯನ್ನು ಭೀಮನಾಶಪಡಿಸಿದ. ಇವನು ಇವನ ಮಕ್ಕಳು ಅರ್ಜುನನಿಂದ ಸತ್ತರು. |
| - | ಕಲಿಂಗದೇಶದ ಅರಸು. ವರುಣ ಇವನಿಗೆ ದಿವ್ಯ ಗದೆಯನ್ನು ನೀಡಿದ್ದ. ದುರ್ಯೋಧನನ ಪಕ್ಷ ವಹಿಸಿ ಯುದ್ಧ ಮಾಡಿದ. ಕೃಷ್ಣನ ಮೇಲೆ ಗದೆಯನ್ನು ಎಸೆದಾಗ ಆಗದೆ ಹಾಗೆಯೇ ಹಿಂದೆ ಬಂದು ಇವನ ಮೇಲೆ ಬಿದ್ದು ಇವನನ್ನು ಸಾಯಿಸಿತು. (ಶ್ರುತಾಯು ಮತ್ತು ಶ್ರುತಾಯುಧ ಒಬ್ಬನೇ ಎಂದೂ ಹೇಳುವರು). |
| ಅಕ್ರೂರ | ಬಹಳ ಧರ್ಮಿಷ್ಠ ಕಾಶಿರಾಜ್ಯಕ್ಕೆ ಬರಬಂದಿದ್ದಾಗ ಅಲ್ಲಿಯ ರಾಜ ಇವನನ್ನು ಕರೆದೊಯ್ದ. ಇವನು ಕಾಲಿಡುತ್ತಲೇ ವೃಷ್ಟಿಯಾಯಿತು. ಸಂತುಷ್ಟನಾದ ರಾಜ ಅವನ ಮಗಳಾದ ಗಾಂದಿನಿಯನ್ನು ಕೊಟ್ಟು ಮದುವೆ ಮಾಡಿದ. |
| - | ಉತ್ತರ ಕುಮಾರನ ಸೋದರ. ಶಂಖ ಇವನ ತಮ್ಮ. ಯುದ್ಧದಲ್ಲಿ ಭೀಷ್ಮರಿಂದ ಹತನಾದ. |
| - | ಉತ್ತಮ ವಿಷ್ಣು ಭಕ್ತ. ಪುರಿ ಕ್ಷೇತ್ರದ ಜಗನ್ನಾಥ ಇವನ ಪರದೈವ. ಅವನನ್ನು ಕುರಿತು ತಪಸ್ಸನ್ನಾಚರಿಸಿ ರಾಜ್ಯಕ್ಕೆ ಸುಭಿಕ್ಷೆ ತಂದು ಕಡೆಗೆ ಸಾಯುಜ್ಯ ಮುಕ್ತಿಯನ್ನು ಪಡೆದ. |
| - | ಗೌತಮಗೋತ್ರಜ. ಆರುಣಿ ಎಂದೂ ಹೆಸರಿದೆ. ನಚಿಕೇತ ಮುನಿಯ ತಮ್ಮ. ದೇವಸೇನಾನಿಯಾಗಿರುವ. ಸುವರ್ಚತಿಯೊಂದಿಗೆ ಚರ್ಚೆ ಮಾಡಿ ಮದುವೆಯಾದ. ಅಷ್ಟಾವಕ್ರಮುನಿಯೊಂದಿಗೆ ಇದ್ದವನು. ಗುರುಕುಲ ದಿಂದ ಬಂದವನು ತಂದೆಗೆ ಅಗೌರವ ತೋರಿದ. ಇದರಿಂದ ತಂದೆ 9 ಉದಾಹರಣೆಗಳಿಂದ ವಿವರಿಸಿ ಅಹಂಕಾರ ಬೇಡವೆಂದು ಉಪದೇಶ ಮಾಡಿದ. |
| - | ಕುಮಾರಸ್ವಾಮಿ ಷಡಾನನ, ಸ್ಕಂದ ಎಂಬ ಹೆಸರಿದೆ. ಬ್ರಹ್ಮದೇವರು ದೇವತೆಗಳ ಸೇನಾಧಿಪತಿಯಾಗಿ ಅಭಿಷೇಕ ಮಾಡಿದರು. ಹಾಗೆಯೇ ನಂದಿಸೇನ, ಲೋಹಿತಾಕ್ಷ, ಪುರಾತಕರ್ಣ, ಕುಮುದಮಾಲಿ ಎಂಬ ಹಾಗೂ ಮಹಾವಿಷ್ಣುವು ಸಂಕ್ರಮ ಚಕ್ರ, ವಿಕ್ರಮ ಪಾರ್ಷದರನ್ನು ಅನುಗ್ರಹಿಸಿದರು. ಇತರ ಎಲ್ಲ ದೇವತೆಗಳಿಂದಲೂ ಆಯುಧಾದಿ ಗಳನ್ನು ಪಡೆದ. ಇವನನ್ನು ಸ್ಕಂಧನೆಂದು ಕರೆವರು. ಆರು ಮುಖದವನು. ಕೃತ್ತಿಕೆಯರನ್ನು, ಮಾತೃಗಣಗಳನ್ನು ತಾಯಿಯಾಗಿ ಸ್ವೀಕರಿಸಿದ. ಮಹಿಷಾಸುರ ತಾರಕಾಸುರ, ತ್ರಿಪಾದ ಮೊದಲಾದವರನ್ನೂ ಸಂಹರಿಸಿದ. |
| ವೈವಸ್ವತ, ಯಮ, ಅಶ್ವಿನಿದೇವತೆಗಳು | ಇವಳು ಅಶ್ವರೂಪಧರಿಸಿದ್ದಾಗ ಸೂರ್ಯ ಅಶ್ವವಾಗಿ ಬಂದು ಸಂಗ ಮಾಡಲು ಇವಳ ಮೂಗಿನಿಂದ ನಾಸತ್ಯ ಮತ್ತು ದಸ್ರರೆಂಬ ಅಶ್ವಿನಿಕುಮಾರರು ಜನಿಸಿದರು. ಇದಕ್ಕೂ ಮುಂಚೆ ಸೂರ್ಯನ ತೇಜಸ್ಸನ್ನು ಸಹಿಸಲಾಗದೆ ಅವನೊಂದಿಗೆ ಸಂಸಾರಮಾಡದಾಗದೆಂದು ತನ್ನಂತಯೇ ಇರುವ ಒಬ್ಬ ಸ್ತ್ರೀಯನ್ನು ಸೃಷ್ಟಿಸಿ ಸೂರ್ಯನ ಬಳಿ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಸಂವರಣ | ಅರಸು | -- | ದ್ವಾ | ಮ.ಭಾ. | ಋಕ್ಷರಾಜ, ರಥಂತರಿ | ತಪತಿ |
| ಸಂಶಪ್ತಕರು | ಯೋಧರು (ಅಸುರರು) | -- | ದ್ವಾ. | ಮ.ಭಾ. | ತ್ರಿಗರ್ತರಾಜ ಕುವರರು (ವೃದ್ಧಕ್ಷೇಮ) | - |
| ಸಂಹ್ಲಾದ | ದಾನವ | -- | ತ್ರೇ. | ಭಾಗವತ | ಹಿರಣ್ಯಕಶಿಪು ಕಯಾದು | ಕೃತಿ |
| ಸಗರ | ಚಕ್ರವರ್ತಿ | -- | ತ್ರೇ. | ಭಾಗವತ | ಬಾಹುಕ(ಅಸಿತ) ಯಾದವಿ | ಸುಮತಿ, ಕೇಶಿನೀ |
| ಸಂಜಯ | ತುಂಬುರು | ಮರುತ್ | ದ್ವಾ | ಮ.ಭಾ. | ಗವಲ್ಗಣ, | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಬಿಟ್ಟು ಹೋಗಿದ್ದಳು. ಅವಳೇ ಛಾಯಾದೇವಿ. ಇವಳು ಸೂರ್ಯನಿಂದ ಸಾವರ್ಣಮನು ಹಾಗೂ ಶನೈಶ್ಚರರನ್ನು ಪಡೆದಳು. ಇವಳ ಮಕ್ಕಳಲ್ಲಿಯ ಪಕ್ಷಪಾತವನ್ನು ನಿಜಾಂಶವನ್ನು ಜ್ಞಾನದೃಷ್ಟಿಯಿಂದ ತಿಳಿದ ಸೂರ್ಯ ವಿಶ್ವಕರ್ಮನಿಂದ ತೇಜಸ್ಸನ್ನು ಕುಗ್ಗಿಸಿ ಅಶ್ವವನ್ನು ಸಂಜ್ಞಾದೇವಿಯನ್ನು ಸಂಪರ್ಕಿಸಿದ. ನಂತರ ಈಕೆಯನ್ನು ಸಂತಸಪಡಿಸಿ ಕರೆತಂದ. |
| ಕುರು | ಸೂರ್ಯ ವಂಶಜ. ಸೂರ್ಯನ ಅಳಿಯ. ಸಾವಿತ್ರಿಯ ತಂಗಿ. ಇವನ ಗುರು ವಶಿಷ್ಠರ ಸಹಕಾರದಿಂದ ಹೋಗಿದ್ದ ರಾಜ್ಯ ಪ್ರಾಪ್ತವಾಯಿತು. ಪರಾಕ್ರಮಿಯಾಗಿದ್ದ ರಾಜ. ಒಮ್ಮೆ ಬೇಟೆಯಾಡಲು ವನಕ್ಕೆ ಹೋದಾಗ ಇವನ ಕುದುರೆ ಮರಣ ಹೊಂದಿತು. ಏಕಾಕಿಯಾಗಿ ವನದಲ್ಲಿ ಚಲಿಸುತ್ತಿರಲು ಸೂರ್ಯಕನ್ಯೆ (ತಪತಿ) ಕಾಣಲು ಮೋಹಿತನಾಗಿ ಗಾಂಧರ್ವ ವಿಯವಾಹವಾದ. ವಶಿಷ್ಠರ ಅನುಗ್ರಹವೂ ಆಯಿತು. |
| – | ಶಪಥಮಾಡಿ ಯುದ್ಧಮಾಡುವ ಯೋಧರು. ಭಾರತಯುದ್ಧದಲ್ಲಿ ದುರ್ಯೋಧನನ ಪರವಾಗಿ ಒಂಬತ್ತು ಕೋಟಿ ಸೈನ್ಯದೊಂದಿಗೆ ಬಂದವರು. ಇವರಲ್ಲಿ ಪ್ರಧಾನರು ತ್ರಿಗರ್ತರಾಜನಾದ ಸುಶರ್ಮ ಹಾಗೂ ಇವನ ತಮ್ಮಂದಿರಾದ ಸತ್ಯೇಷು, ಸತ್ಯಕರ್ಮ, ಸತ್ಯದೇವ, ಸತ್ಯರಥ ಈ ಐವರನ್ನು ಸಂಶಪ್ತಕರೆಂದು ಕರೆಯಲಾಗಿದೆ. ಇವರು ಯುದ್ಧಮಾಡಿ ಸೈನ್ಯದೊಂದಿಗೆ ಅರ್ಜುನನಿಂದ ಹತರಾದರು. |
| ಪಂಚಜನ ಸುಂದ ವಿಸುಂದ | ಪ್ರಹ್ಲಾದನ ತಮ್ಮ. ಇವನ ತಮ್ಮಂದಿರು ಅನುಹ್ಲಾದ, ಶಿವಿ ಮತ್ತು ಬಾಷ್ಕಲಿ. ಶಲ್ಯ (ಬಾಹ್ಲೀಕ) ಇವನ ಅಂಶದಿಂದ ಹುಟ್ಟಿದವ. |
| 60ಸಾವಿರ ಪುತ್ರರು ಅಸಮಂಜಸ | ಸೂರ್ಯವಂಶಜ. ತಂದೆಯ ಮರಣದ ನಂತರ ಗರ್ಭವತಿಯಾದ ಭಾರ್ಗವಮುನಿಯ ಆಶ್ರಮದಲ್ಲಿ ಸಗರನನ್ನು ಹೆತ್ತಳು. ಭಾರ್ಗವರೇ ಎಲ್ಲ ವಿದ್ಯೆಯನ್ನು ಕಲಿಸಿದರು. ಆಗ್ನೇಯಾಸ್ತ್ರವನ್ನು ಕೊಟ್ಟರು. ತನ್ನ ತಂದೆಯ ರಾಜ್ಯವನ್ನು ಮರಳಿ ಪಡೆದ. ಹೆಂಡತಿ ವೈದರ್ಭಿ(ಸುಮತಿ)ಯು ಕುಂಬಳಕಾಯಿ ಗಾತ್ರದ ಮಾಂಸದ ಮುದ್ದೆಯನ್ನು ಹೆತ್ತಳು. ಆಕಾಶವಾಣಿಯಂತೆ ಇದರ ಸಣ್ಣ ತುಂಡುಗಳನ್ನು 60 ಸಾವಿರ ಘೃತ ಗಡಿಗೆಗಳಲ್ಲಿಟ್ಟು ಕಾಪಾಡಿದರು. ಇವು 60 ಸಾವಿರ ಪುತ್ರರಾದರು. ಇವರು ಪಾತಾಳದಲ್ಲಿದ್ದ ಕಪಿಲರ ದೃಷ್ಟಿಗೆ ಭೂದಿಯಾದರು. ಇನ್ನೊಬ್ಬ ಮಗ ಅಸಮಂಜಸನನ್ನು ತ್ಯಾಗಮಾಡಿ ಮೊಮ್ಮಗ ಅಂಶುಮಂತನಿಗೆ ರಾಜ್ಯವಿತ್ತು ಸ್ವರ್ಗ ಸೇರಿದ. |
| – | ಒಬ್ಬ ಮರುತ್ತು. ವಿಚಿತ್ರ ವೀರ್ಯನ ಸೂತನ ಮಗ. ಉತ್ತಮ ಜ್ಞಾನಿ-ಧರ್ಮಾತ್ಮನೂ ಆಗಿದ್ದ. ವ್ಯಾಸರ ಶಿಷ್ಯ ಧೃತರಾಷ್ಟ್ರನ ಮಂತ್ರಿಗಳಲ್ಲಿ ಒಬ್ಬನಾಗಿದ್ದ. ಧರ್ಮಜನ ರಾಜಸೂಯ ಯಾಗದಲ್ಲಿ ರಾಜರನ್ನು ಸೇವಿಸುವ ಕೆಲಸ ಮಾಡಿದ. ಧೃತರಾಷ್ಟ್ರನಿಗೂ ಪಾಂಡವರಿಗೂ ಮಧ್ಯವರ್ತಿಯಾಗಿದ್ದ. ಅನೇಕ ಬಾರಿ ಧೃತರಾಷ್ಟ್ರನಿಗೆ ಸೂಕ್ತ ಸಲಹೆಗಳನ್ನು ಹೇಳುತ್ತಿದ್ದ. ಕೃಷ್ಣನ ಮಹಿಮೆಯನ್ನು ವರ್ಣಿಸುತ್ತಿದ್ದ. ವ್ಯಾಸರ ಕೃಪೆಯಿಂದ ಇವನಿಗೆ ದಿವ್ಯದೃಷ್ಟಿ ಪ್ರಾಪ್ತಿ. ಕುರುಕ್ಷೇತ್ರದಲ್ಲಿ ನಡೆದ ಯುದ್ಧದ ವಾರ್ತೆಯನ್ನು ಧೃತರಾಷ್ಟ್ರನಿಗೆ ವಿವರವಾಗಿ ಎಲ್ಲವನ್ನೂ ವಿವರಿಸಿದ. ಎರಡೂ ಪಕ್ಷಗಳ ವೀರರನ್ನು ವರ್ಣಿಸಿದ. ಯುದ್ಧದ ನಂತರ ದಿವ್ಯದೃಷ್ಟಿ ಹೋಯಿತು. ಹದಿನೆಂಟನೆಯ ದಿನ ಕುರುಕ್ಷೇತ್ರಕ್ಕೆ ಬಂದ ಇವನನ್ನು ಕೊಲ್ಲಲು ಬಂದ ಸಾತ್ಯಕಿಯನ್ನು ವ್ಯಾಸರು ತಡೆದು ರಕ್ಷಿಸಿದರು. ಧೃತರಾಷ್ಟ್ರ, ಕುಂತಿ ಹಾಗೂ ಗಾಂಧಾರಿಯರೊಂದಿಗೆ ವನಕ್ಕೆ ಹೋದ. ಅರಣ್ಯದಲ್ಲಿ ಮೂರು ದಿನಕ್ಕೊಮ್ಮೆ ಆಹಾರ ಸ್ವೀಕರಿಸುತ್ತಿದ್ದ. ಧೃತರಾಷ್ಟ್ರ ಗಾಂಧಾರಿ ಮತ್ತು ಕುಂತಿ ದಾವಾನಲದಲ್ಲಿ ದಗ್ಧರಾದರೂ ಇವನು ಉಳಿದ. ನಂತರ ಹಿಮಾಲಯಕ್ಕೆ ಹೋದ. |
| ಸಾತ್ಯಕಿ (ಯುಯುಧಾನ) | ಯದುವಂಶಜ. ಸಜ್ಜನನಾದ ಇವನು ದೈವಭಕ್ತ. ಯಾದವರೊಂದಿಗೆ ಸದ್ಗತಿ ಪಡೆದ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಸತ್ಯಜಿತ್ | ಕ್ಷತ್ರಿಯ | ಮಿತ್ರ | ದ್ವಾ | ಮ.ಭಾ. | ದ್ರುಪದ, | – |
| ಸತ್ಯಭಾಮಾ | ಮಹಾಲಕ್ಷ್ಮಿ | -- | ದ್ವಾ | ಮ.ಭಾ. | ಸತ್ರಜಿತ್, (ಸತ್ರಾಜಿತ) | ಶ್ರೀಕೃಷ್ಣ |
| ಸತ್ಯವತಿ | ದೇವತೆ (ರಾಜಕನ್ಯೆ) (ಅಚ್ಛೋದೆ) | -- | ದ್ವಾ | ಮ.ಭಾ. | ಉಪರಿಚರ, ಅದ್ರಿಕೆ(ಅಪ್ಸರೆ) (ಅಗ್ನಿಷ್ವಾತ್ತ) | ಪರಾಶರರು, ಶಂತನು |
| ಸತ್ಯವಂತ | ಮಹಾರಾಜ | -- | ದ್ವಾ | ಮ.ಭಾ. | ದ್ಯುಮತ್ಸೇನ, | ಸಾವಿತ್ರಿ |
| ಸರಸ್ವತೀ | ಋಜುದೇವತೆ | -- | – | ಭಾಗವತ | ಚ.ಬ್ರಹ್ಮ | – |
| ಸತ್ಯಜಿತ್ | ಕ್ಷತ್ರಿಯ | -- | ದ್ವಾ. | ಮ.ಭಾ. | ಪೃಷದ | – |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| - | ಯುದ್ಧದಲ್ಲಿ ಯುಧಿಷ್ಠಿರನ ರಕ್ಷಣೆಯ ಭಾರವನ್ನು ಇವನ ಮೇಲೆ ಅರ್ಜುನ ವಹಿಸಿದ್ದ. ದ್ರೋಣರಿಂದ ಕೊಲ್ಲಲ್ಪಟ್ಟ. ಇವನು ಅತಿರಥ. |
| ಹತ್ತು ಗಂಡು ಮಕ್ಕಳು ಒಬ್ಬ ಮಗಳು | ರುಕ್ಮಿಣಿಗೆ ಸಮಾನಳಾದ ಅವಳ ಇನ್ನೊಂದು ರೂಪ. ಕೃಷ್ಣನ ಪಟ್ಟ ಮಹಿಷಿ. ಕೃಷ್ಣ ಸತ್ರಾಜಿತನಿಗೆ ಸ್ಯಮಂತಕ ಮಣಿಯನ್ನು ತಂದೊಪ್ಪಿಸಲು ಅವನ ತಪ್ಪಿಗಾಗಿ ಇವಳನ್ನು ಕೊಟ್ಟು ಮದುವೆ ಮಾಡಿದ. ಶ್ರೀಕೃಷ್ಣ ನರಕಾಸುರನ ಜೊತೆ ಯುದ್ಧಕ್ಕೆ ಹೋದಾಗ ಇವಳನ್ನು ಕರೆದೊಯ್ದ. ಇವಳೂ ಯುದ್ಧದಲ್ಲಿ ಪಾಲ್ಗೊಂಡಳು. ನರಕನ ವಧೆ ನಂತರ ಸ್ವರ್ಗಕ್ಕೆ ಹೋಗಿ ಅಲ್ಲಿದ್ದ ಪಾರಿಜಾತ ವೃಕ್ಷವನ್ನು ಸತ್ಯಭಾಮೆಗೆ ಕೊಟ್ಟ. ಇದಕ್ಕೂ ಮುಂಚೆ ರುಕ್ಮಿಣಿಗೆ ಕೊಟ್ಟಿದ್ದ ಕಾರಣ ಕುಪಿತಳಾದವಳಂತೆ ನಟಿಸಿದ್ದಳು. ಪಾಂಡವರು ಕಾಮ್ಯಕವನದಲ್ಲಿದ್ದಾಗ ಇವಳೊಂದಿಗೆ ಕೃಷ್ಣ ಅಲ್ಲಿಗೆ ಹೋದ. ಸತ್ಯಭಾಮಾ ದ್ರೌಪದಿಯರ ಸಂವಾದ. ಕೃಷ್ಣ ಪರಂಧಾಮಕ್ಕೆ ಹೋದ ಬಳಿಕ ರುಕ್ಮಿಣಿ ಸತ್ಯಭಾಮೆಯರು ಕಾಡಿಗೆ ಹೊರಟು ದಾವಾಗ್ನಿಯಲ್ಲಿ ಸೇರಿದರು. |
| ವೇದವ್ಯಾಸರು, ಚಿತ್ರಾಂಗದ, ವಿಚಿತ್ರವೀರ್ಯ | ಹಿಂದೆ ಅಮೂರ್ತ ಪಿತೃಗಣದ ಮಾನಸಪುತ್ರಿಯಾಗಿದ್ದಳು. ಕಾಳಿಯೆಂಬ ನಾಮಾಂತರ. ವಸುವಿನ ವೀರ್ಯವನ್ನು ನುಂಗಿದ ಮೀನಿನ ಹೊಟ್ಟೆಯಲ್ಲಿದ್ದ ಶಿಶುವನ್ನು ಒಬ್ಬ ಅಂಬಿಗ ಕೊಯ್ದು ತೆಗೆದ. ಅಲ್ಲಿದ್ದ ಹೆಣ್ಣು ಶಿಶು ಮತ್ಸ್ಯಗಂಧೆ ಸತ್ಯವತಿಯಾದಳು. ಗಂಡು ಶಿಶು ಮತ್ಸ್ಯನೆಂಬ ರಾಜನಾದ. ಒಮ್ಮೆ ಪರಾಶರರು ಯಮುನೆಯನ್ನು ದಾಟಲು ಈ ಅಂಬಿಗೆಯ ಮಗಳಂತಿರುವ ಕನ್ಯೆಯಿಂದ ದೋಣಿಯ ಸಹಾಯ ಪಡೆದರು. ಅವರ ಅನುಗ್ರಹದಿಂದ ಗಂಧವತಿಯಾಗಿ ನಡುಗಡ್ಡೆಯಲ್ಲಿ ವ್ಯಾಸರನ್ನು ಪಡೆದಳು, ಜೊತೆಗೆ ಅವರ ವರದಿಂದ ಕನ್ಯಾತ್ವವೂ ಉಳಿಯಿತು ಮತ್ತು ಯೋಜನಗಂಧೆಯಾದಳು. ದೊಡ್ಡವಳಾಗಿದ್ದ ಇವಳನ್ನು ಒಮ್ಮೆ ಬೇಟೆಗೆಂದು ಬಂದ ಶಂತನು ಮಹಾರಾಜ ಬಯಸಿದ. ಭೀಷ್ಮ ಪ್ರತಿಜ್ಞೆಯನ್ನು ಮಾಡಿ ಈಕೆಯೊಂದಿಗೆ ತಂದೆಯ ವಿವಾಹ ಮಾಡಿಸಿದ. ಈಕೆಯ ಇಬ್ಬರು ಗಂಡುಮಕ್ಕಳು ಸಂತಾನವಿಲ್ಲದೆ ಮೃತರಾದರು. ನೆನೆದಾಗ ಬರುವುದಾಗಿ ವರವಿತ್ತಿದ್ದ ವೇದವ್ಯಾಸರು ಬಂದು ತಾಯಿಯ ಅಪೇಕ್ಷೆಯಂತೆ ಸೊಸೆಯರಾದ ಅಂಬಿಕೆಯಿಂದ ಧೃತರಾಷ್ಟ್ರನನ್ನೂ, ಅಂಬಾಲಿಕಳಲ್ಲಿ ಪಾಂಡುವಿನನ್ನು ಜನಿಸುವಂತೆ ಅನುಗ್ರಹಿಸಿದರು. ಕಡೆಯಲ್ಲಿ ಕುರುಪಾಂಡವರ ವಿರಸದ ದೃಶ ನೋಡಬಾರದೆಂದು ತಿಳಿದವಳಾಗಿ ವ್ಯಾಸಾಶ್ರಮಕ್ಕೆ ವಿದುರನ ತಾಯಿ ಹಾಗೂ ಇಬ್ಬರ ಸೊಸೆಯರೊಂದಿಗೆ ತಪಸ್ಸಿಗೆಂದು ತಪೋವನಕ್ಕೆ ತೆರಳಿದಳು. ಸದ್ಗತಿ ಪಡೆದರು. |
| ನೂರು ಗಂಡುಮಕ್ಕಳು | ಸತ್ಯವಾನ್ ಚಿತ್ರಾಶ್ವ ನಾಮಾಂತರ. ಬಾಲ್ಯದಿಂದಲೂ ಅಶ್ವಾರೋಹಣದಲ್ಲಿ ಆಸಕ್ತನಾಗಿದ್ದ. ರಾಜಕುವರನಾದರೂ ವನದಲ್ಲಿ ವಾಸಿಸುತ್ತಿದ್ದ. ಇವನನ್ನು ಸುಂದರಿ ಜ್ಞಾನಿ ತಪಸ್ವಿನಿಯಾದ ಸಾವಿತ್ರಿ ತಾನೇ ಆರಿಸಿಕೊಂಡು ಮದುವೆಯಾದಳು. ಒಮ್ಮೆ ಸತ್ಯವಾನ್ ಸಾವಿತ್ರಿಯೊಂದಿಗೆ ಸಮಿಧೆ ತರಲು ವನಕ್ಕೆ ಹೋದನು. ಅಲ್ಪಾಯುಷಿ ಆದ್ದರಿಂದ ವನದಲ್ಲೇ ಮರಣಹೊಂದಿದ. ಮಹಾಪಾತಿವ್ರತೆಯಾದ ಸಾವಿತ್ರಿ ತನ್ನ ಪತಿಯನ್ನು ಯಮ ಕರೆದೊಯ್ಯಲು ಯಮನನ್ನು ಹಿಂಬಾಲಿಸಿದಳು. ಯಮ ಸಾವಿತ್ರಿಯ ನಿಷ್ಠೆ ಪಾತಿವ್ರತ್ಯಕ್ಕೆ ಮೆಚ್ಚಿ ಇವನನ್ನು ಬದುಕಿಸಿ ವರಗಳನ್ನು ನೀಡಿದ. ರಾಜ್ಯವೂ ಲಭ್ಯವಾಗಿ ರಾಜ್ಯವನ್ನಾಳಿ ನೂರು ಮಕ್ಕಳನ್ನೂ ಪಡೆದ. |
| ಸಕಲ ಜೀವರು | ವಿದ್ಯಾಧಿದೇವತೆ. ಹಿಂದಿನ ಭಾರತಿದೇವಿಯೇ ಸರಸ್ವತಿ ಆಗುವಳು. ಚ. ಬ್ರಹ್ಮದೇವರ ಜೊತೆಗೆ ಮುಕ್ತಿಯನ್ನು ಪಡೆಯುವಳು. ಕಚ್ಛಪೀ ವೀಣೆ ಧರಿಸಿರುವಳು. ಅವ್ಯಕ್ತ ತತ್ತ್ವಾಭಿಮಾನಿ, ಪರಶುಕ್ಲರಲ್ಲಿ ಒಬ್ಬಳು. ಬ್ರಹ್ಮಾಣಿ ಎನ್ನುವರು. ವೇದಾಭಿಮಾನಿನಿಯಾಗಿ ತತ್ತ್ವಾಭಿಮಾನಿ ದೇವತೆಗಳಿಗೆ ಗುರುವಾಗಿರುವಳು. |
| - | ದ್ರುಪದನ ಸೋದರ. ದ್ರೋಣರ ಮಾತಿನಂತೆ ಕೌರವ, ಪಾಂಡವರು ದ್ರುಪದನ ಮೇಲೆ ಯುದ್ಧಕ್ಕೆ ಬಂದಾಗ ಇವನೂ ಯುದ್ಧ ಮಾಡಿದ್ದ. ಭಾರತಯುದ್ಧದಲ್ಲಿ ಧರ್ಮಜನ ರಕ್ಷಣೆಗೆ ಇವನನ್ನು ಅರ್ಜುನ ನೇಮಿಸಿದ್ದ. ಇವನು ದ್ರೋಣರಿಂದ ಹತನಾದ. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಸತ್ರಾಜಿತ | ಯದುವಂಶಜ | -- | ದ್ವಾ. | ಮ.ಭಾ. | ನಿಮ್ನ | 10 ಮಡದಿಯರು |
| ಸನತ್ಕುಮಾರ | ವಿಷ್ಣು | -- | - | ಭಾಗವತ | ಲಕ್ಷ್ಮೀ | |
| ಸನತ್ಕುಮಾರರು | ದೇವತೆಗಳು | - | ತ್ರೇ. | ಭಾಗವತ | ಚ.ಬ್ರಹ್ಮ | - |
| ಸಪ್ತಸಾಲಾಃ | ಅಸುರರು | -- | ತ್ರೇ | ರಾ. | - | - |
| ಸಂಪಾತಿ | ಪಕ್ಷಿ | ಮರುತ್ | ತ್ರೇಯು. | ರಾ. | ಅರುಣ,ಶ್ಯೇನಿ | - |
| ಸರಮಾ | ಮಹಾರಾಣಿ | -- | ತ್ರೇಯು. | ರಾ | ಶೈಲೂಷ | ವಿಭೀಷಣ |
| ಸರ್ವಕರ್ಮ | ಅರಸು | -- | ತ್ರೇ. | ರಾ | ಸೌದಾಸ | - |
| ಸಹದೇವ | ಅಶ್ವಿನಿದೇವತೆ (ನಾಸತ್ಯದಸ್ರು) | ವಾಯು | ದ್ವಾ. | ಮ.ಭಾ. | ಪಾಂಡು, ಮಾದ್ರಿ | ದ್ರೌಪದಿ, ವಿಜಯಾ, ಭಾನುಮತಿ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಸತ್ಯಭಾಮೆ<br>3 ಗಂಡು, 3 ಹೆಣ್ಣು | ಯಾದವರಲ್ಲಿ ಪ್ರಮುಖ. ಸೂರ್ಯನನ್ನು ಉಪಾಸನೆ ಮಾಡಿ ಅಮೂಲ್ಯವಾದ ಸ್ಯಮಂತಕಮಣಿಯನ್ನು ಪಡೆದಿದ್ದ. ಇದರಿಂದ ಪ್ರತಿನಿತ್ಯ 8 ಬಾರಿ ಚಿನ್ನ ಹುಟ್ಟುತ್ತಿತ್ತು. ಒಮ್ಮೆ ಇವನ ತಮ್ಮ (ಅವಳಿ) ಪ್ರಸೇನ ಇದನ್ನು ಧರಿಸಿ ಕಾಡಿಗೆ ಹೋಗಿ ಅಪವಿತ್ರವನ್ನಾಗಿಸಿದ. ಹೀಗಾಗಿ ಇವನಿಂದ ಸಿಂಹಕ್ಕೆ ಅದರಿಂದ ಕರಡಿ (ಜಾಂಬವಂತ) ನಿಗೆ ಸೇರಿತು. ಹಿಂದೆ ಈ ಮಣಿಯನ್ನು ಕೃಷ್ಣ ಅಪೇಕ್ಷಿಸಿದ್ದ ಕಾರಣ ಅಪವಾದ ಇವನ ಮೇಲೆ ಬಂದುದಕೆ, ಕೃಷ್ಣ ಜಾಂಬವಂತನಿಂದ ತಂದು ಸತ್ರಾಜಿತನಿಗೆ ಒಪ್ಪಿಸಿದ. ಕಾರಣ ಅವನ ಮಗಳಾದ ಸತ್ಯಭಾಮೆಯನ್ನು ಕೃಷ್ಣಗೆ ಕೊಟ್ಟು ಮದುವೆ ಮಾಡಿದ. ಶತಧನ್ವನಿಂದ ಇವನ ವಧೆಯಾಯಿತು. |
| | ಭಗವಂತನ ರೂಪ. ಬ್ರಹ್ಮಚಾರಿರೂಪ. ಸಮೃದ್ಧಿ ಪ್ರೇರಣ ರೂಪವಾಗಿದೆ. |
| - | ಬ್ರಹ್ಮದೇವರ ಮಾನಸಪುತ್ರರು, ಮಹಾಜ್ಞಾನಿಗಳು. ಯಾವಾಗಲೂ ಕುಮಾರಾವಸ್ಥೆಯಲ್ಲಿಯೇ ಇರುವವರು. ಬ್ರಹ್ಮಲೋಕದಲ್ಲಿ ವಾಸ. ಒಮ್ಮೆ ಮಹಾವಿಷ್ಣುವಿನ ದರ್ಶನಕ್ಕೆಂದು ವೈಕುಂಠಕ್ಕೆ ಹೋದಾಗ ದ್ವಾರಪಾಲಕರಾದ ಜಯವಿಜಯರು ಇವರನ್ನು ತಡೆದು ಶಾಪಕ್ಕೆ ಗುರಿಯಾದರು. ಸನತ್ಕುಮಾರರು ಸೃಷ್ಟಿಯ ವಿಷಯವಾಗಿ ವೃತ್ರಾಸುರನಿಗೆ ಉಪದೇಶಿಸಿದರು. ನಾರದರೊಂದಿಗೆ, ರುದ್ರದೇವರೊಂದಿಗೂ ಸಂವಾದ ಮಾಡಿದರು. ಒಮ್ಮೆ ವಿದುರನ ಅಪೇಕ್ಷೆಯಂತೆ ಸನತ್ಸುಜಾತರು ಧೃತರಾಷ್ಟ್ರನಿಗೆ ಉಪದೇಶ ನೀಡಿದರು ಅದನ್ನು ಸನತ್ಸುಜಾತೀಯ ವೆಂದೇ ಕರೆಯುವರು. |
| - | ಬ್ರಹ್ಮರ ವರದಿಂದ ಬ್ರಹ್ಮ ಪದವಿಯನ್ನೇ ಬಯಸಿದ ದುಷ್ಟರು. ಸುಗ್ರೀವನನ್ನು ಒಲಿಸಿಕೊಳ್ಳಲು ರಾಮ ಈ ವೃಕ್ಷಾಕಾರದ ಏಳು ದೈತ್ಯರನ್ನು ಸಂಹರಿಸಿದ. |
| ಸುಪಾರ್ಶ್ವ | ಜಟಾಯುವಿನ ಸಹೋದರ. ಒಮ್ಮೆ ಸೂರ್ಯನ ಸಮೀಪ ಹೋಗಲು ಪ್ರಯತ್ನಿಸಿ ಒಂದು ರೆಕ್ಕೆಯನ್ನು ಸುಟ್ಟುಕೊಂಡ. ಹನುಮಂತನೊಂದಿಗೆ ಸೀತಾ ಅನ್ವೇಷಣೆಗೆ ಹೊರಟ ವಾನರರ ಸಂಪರ್ಕವಾಯಿತು. ಶ್ರೀರಾಮ ಕಥೆಯನ್ನು ಕೇಳಿ ಇವನ ರೆಕ್ಕೆ ಚಿಗುರಿತು. ಅಲ್ಲದೆ ಚಂದ್ರ ಎಂಬ ಮುನಿಯ ವರವೂ ಇತ್ತು. ವಾನರರಿಗೆ ಲಂಕಾದಲ್ಲಿ ಸೀತೆ ಇದ್ದ ಸ್ಥಳವನ್ನು ತಿಳಿಸಿ ಮಾರ್ಗದರ್ಶನ ಮಾಡಿದ. |
| - | ಗಂಡನಂತೆಯೇ ದೈವಭಕ್ತೆ, ಗುಣವಂತಿ, ಸೀತೆ ಅಶೋಕವನದಲ್ಲಿದ್ದಾಗ ಆಗಾಗ ಹೋಗಿ, ಸಮಾಧಾನ ಹೇಳಿ ಯುದ್ಧದ ಬಗ್ಗೆಯೂ ತಿಳಿಸುತ್ತಿದ್ದಳು. ರಾಮ ಸೀತೆಯರ ಭಕ್ತಿ, ಧರ್ಮಕಾರ್ಯಗಳಲ್ಲಿ ಗಂಡಸಿಗೆ ಸಹಕರಿಸು ತ್ತಿದ್ದಳು. |
| - | ಸೂರ್ಯವಂಶದ ರಾಜ. ಪರಶುರಾಮರಿಗೆ ಭಯಪಟ್ಟು ಅವರು ಬಂದಾಗಲೆಲ್ಲಾ ಪರಾಶರರ ಆಶ್ರಮದಲ್ಲಿ ಅಡಗಿಕೊಂಡು ಅಲ್ಲಿಯೇ ಯಾಗಾದಿ ಕರ್ಮಗಳನ್ನು ಮಾಡುತ್ತಿದ್ದ. ಪರಶುರಾಮರು ಕಶ್ಯಪರಿಗೆ ಎಲ್ಲ ಭೂದಾನ ಮಾಡಿದ ಮೇಲೆ ಅದನ್ನು ಮತ್ತೆ ಪಡೆದು ರಾಜ್ಯವಾಳಿದ. |
| ಶ್ರುತಸೇನ,<br>ಸುಹೋತ್ರ | ಮಾದ್ರಿಯ ಅವಳಿ ಮಕ್ಕಳಲ್ಲಿ ಕಿರಿಯವ. ಬಹು ಸುಂದರ. ಹಿಮಾಲಯದ ಋಷಿಗಳೆ ಇವರಿಗೆ ನಾಮಕರಣ ಮಾಡಿದರು. ಕಾಶ್ಯಪರು ಉಪನಯನ ಸಂಸ್ಕಾರ ಮಾಡಿದರು. ರಾಜರ್ಷಿ ಶುನಕ ಪ್ರಾರಂಭದ ಅಸ್ತ್ರವಿದ್ಯೆ ಕಲಿಸಿದ. ಮಾದ್ರಿ ತನ್ನ ಸಹಗಮನದ ಮುಂಚೆ ಇವರನ್ನು ಕುಂತಿ ಕೈಗೆ ಒಪ್ಪಿಸಿದಳು. ಕುಂತೀ ಸಮೇತ ಹಸ್ತಿನಾವತಿಗೆ ಬಂದು ಭೀಷ್ಮರ ಸೂಚನೆಯಂತೆ ದ್ರೋಣರಲ್ಲಿ ಅಸ್ತ್ರ-ಶಸ್ತ್ರವಿದ್ಯಾಭ್ಯಾಸ ಮಾಡಿದ. ಅರ್ಜುನ. ದ್ರುಪದನ ಮೇಲೆ ಆಕ್ರಮಣಕ್ಕೆ ಹೋದಾಗ ಇವನೂ ಹೋಗಿದ್ದ. ಉದ್ಧವನಿಂದ ರಾಜನೀತಿ ಶಾಸ್ತ್ರವನ್ನು ಕಲಿತ. ವಾರಣಾವತದಲ್ಲಿ ಲಾಕ್ಷಾಗೃಹದಿಂದ ಭೀಮನಿಂದ ರಕ್ಷಿತನಾಗಿ ಏಕಚಕ್ರನಗರಕ್ಕೆ ಬಂದ. ಎಲ್ಲ ರೀತಿಯಲ್ಲಿ ಹಿರಿಯ ಅಣ್ಣಂದಿರಿಗೆ ವಿಧೇಯನಾಗಿದ್ದ. ದ್ರೌಪದೀ ಸ್ವಯಂವರದ ನಂತರ ವಿಧಿಪೂರ್ವಕ ಅಣ್ಣಂದಿರ ಜೊತೆ ಇವನ ಮದುವೆ. ಇಂದ್ರಪ್ರಸ್ಥ ನಿರ್ಮಾಣದಲ್ಲಿ ಭಾಗವಹಿಸಿದ. ಒಂದು ವರ್ಷ ದ್ರೌಪದಿ ಜೊತೆ ವಾಸ. ರಾಜಸೂಯ ಯಾಗಕ್ಕಾಗಿ ದಕ್ಷಿಣದಿಕ್ಕಿನ ದಿಗ್ವಿಜಯ. ಲಂಕೆಗೆ ಘಟೋತ್ಕಚನನ್ನು ಕಳಿಸಿ ಕಪ್ಪ ತರಿಸಿದ. ಯುಧಿ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಸಹದೇವ | ಅರಸು ಒಬ್ಬರುದ್ರ | ಪತ್ರತಾಪ | ದ್ವಾ. | ಮ.ಭಾ. | ಜರಾಸಂಧ | - |
| ಸರ್ವೋತ್ತುಂಗ | ಕ್ಷತ್ರಿಯ | ವಾಯು | ದ್ವಾ. | ಮ.ಭಾ. | ಭೀಮಸೇನ, ದೇವಿ | - |
| ಸಾತ್ಯಕಿ | ಸಂವಹ ಮರುತ್ತು | ಗರುಡ (ಚಕ್ರಾಭಿಮಾನಿಕಾಮ) | ದ್ವಾ | ಮ.ಭಾ. | ಸತ್ಯಕ, | ಭೋಜಾ (ಸರಸ್ವತಿ) |
| ಸಾಧ್ಯರು | ದೇವತಾ ಗಣ | -- | ದ್ವಾ | ಮ.ಭಾ. | ಚ.ಬ್ರಹ್ಮ (ಧರ್ಮ) | - |
| ಸಾಂದೀಪಿನಿ | ಕಾಮ | -- | ದ್ವಾ. | ಮ.ಭಾ. | - | - |
| ಸಾಂಬ | ಕಾಮ (ಸ್ಕಂದ) | ಬ್ರಹ್ಮ | ದ್ವಾ. | ಮ.ಭಾ. | ಕೃಷ್ಣ ಜಾಂಬವತಿ | ಲಕ್ಷಣಾ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಷ್ಠಿರನ ಜೂಜಾಟದಲ್ಲಿ ಇವನೂ ಸೋತ. ಶಕುನಿಯನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದ. ವನವಾಸದಲ್ಲಿ ಒಮ್ಮೆ ನೀರು ತರಲು ಹೋಗಿ ಯಕ್ಷನಿಂದ ಬಿದ್ದ. ಅಜ್ಞಾತವಾಸದಲ್ಲಿ ತಂತಿಪಾಲನಾಗಿ ಗೋಶಾಲಾಧ್ಯಕ್ಷನಾಗಿದ್ದ. ಗೋಗ್ರಹಣ ಸಮಯದಲ್ಲಿ ತ್ರಿಗರ್ತನೊಂದಿಗೆ ಯುದ್ಧವಾಡಿದ. ಕೃಷ್ಣನಿಗೆ ಯುದ್ಧವಾಗುವಂತೆ ಸಂಧಾನ ಮಾಡಲು ಸಲಹೆ ಇತ್ತ, ಯುದ್ಧದಲ್ಲಿ ಸೋಲು ಗೆಲುವನ್ನು ಸಾಧಿಸಿದ. ಇವನಿಂದ ಶಕುನಿ ಪುತ್ರರು ಕಡೆಗೆ ಶಕುನಿಯ ವಧೆಯಾಯಿತು. ಯುಧಿಷ್ಠಿರನ ರಾಜ್ಯದಲ್ಲಿ ಧರ್ಮಸ್ಥಾಪಿಸಲು ನಕುಲ ಸಹದೇವರು ಶ್ರಮಿಸಿದರು. ಯುಧಿಷ್ಠಿರನೊಂದಿಗೆ ತಾಯಿ ಕುಂತಿಯನ್ನು ಕಾಣಲು ವನಕ್ಕೆ ಹೋದ. ಕುಂತಿಗೆ ವಿಶೇಷವಾಗಿ ಈ ಮಾದ್ರಿಪುತ್ರರು ಪ್ರೀತಿಪಾತ್ರರಾಗಿದ್ದರು. ಯುಧಿಷ್ಠಿರನೊಂದಿಗೆ ಮಹಾಪ್ರಸ್ಥಾನ ಕ್ಕೆಂದು ಹಿಮಾಲಯಕ್ಕೆ ಹೊರಟ. ದ್ರೌಪದಿಯ ನಂತರ ಇವನು ದಾರಿಯಲ್ಲಿ ಮಹಾಪ್ರಸ್ಥಾನಯಾತ್ರೆ ಗೈದು ಸ್ವರ್ಗ ಸೇರಿದ. ಆಧ್ಯಾತ್ಮದಲ್ಲಿ ಸಹದೇವ ವಿನಯದ ಸಂಕೇತ. |
| - | ತಂದೆಯ ಸಾವಿನ ನಂತರ ಕೃಷ್ಣನಿಗೆ ಶರಣಾದ. ಇವನನ್ನೇ ರಾಜ್ಯದಲ್ಲಿ ಕುಳ್ಳರಿಸಿ ಅಭಿಷೇಕ ಮಾಡಿದರು. ಇವನ ಇಬ್ಬರು ಸಹೋದರಿಯರು ಕಂಸನ ಹೆಂಡಂದಿರು.ಇವನಿಲ್ಲದ್ದ ರಥವನ್ನು ಕೃಷ್ಣನಿಗೆ, ಒಬ್ಬ ತಂಗಿಯನ್ನು ಸಹದೇವನಿಗೆ ಸಮರ್ಪಿಸಿದ. ಎಲ್ಲ ರಾಜರನ್ನು ಬಿಡುಗಡೆ ಮಾಡಿಸಿದ್ದ ಕಾರ್ಯವನ್ನು ಮಾಡಿದ. ಒಂದು ಅಕ್ಷೋಹಿಣೀ ಸೈನ್ಯದೊಂದಿಗೆ ಧರ್ಮಜಗೆ ಸಹಾಯ ಮಾಡಿದ. ಏಳು ಸೈನ್ಯಾಧಿಪತಿಗಳಲ್ಲಿ ಇವನೂ ಒಬ್ಬನಾಗಿದ್ದ. ಯುದ್ಧದಲ್ಲಿ ದ್ರೋಣರಿಂದ ಮಡಿದ. |
| - | ಮಹಾಯುದ್ಧನಂತರವೂ ಉಳಿದವನು. ಧರ್ಮಿಷ್ಠ |
| ಯೌಯುಧಾನಿ (ಯುಗಂಧರ) | ಯುಯುಧಾನ ನಾಮಾಂತರ. ವೃಷ್ಣಿವಂಶಜ. ಸದಾ ಪಾಂಡವರ ಪಕ್ಷಪಾತಿ. ಅರ್ಜುನನಿಂದ ಧನುರ್ವಿದ್ಯೆ ಕಲಿತ. ಈತ ಒಬ್ಬ ಅತಿರಥಿ. ರಾಜಸೂಯದಲ್ಲಿ ಧರ್ಮಜಗೆ ಛತ್ರಿ ಹಿಡಿದಿದ್ದ. ಕೃಷ್ಣನಲ್ಲಿ ತಾನು ಯುದ್ಧಕ್ಕೆ ಸಮ್ಮತಿಸಿದ. ಸೈನ್ಯದೊಂದಿಗೆ ಧರ್ಮಜಗೆ ಸಹಾಯಕ್ಕೆ ಬಂದ. ಯುದ್ಧದಲ್ಲಿ ಮುಖ್ಯಪಾತ್ರ ವಹಿಸಿದ. ಅರ್ಜುನ ಇವನನ್ನು ಯುಧಿಷ್ಠಿರನ ರಕ್ಷಣೆಗೆ ನಿಯೋಜಿಸಿದ. ಅದ್ಭುತವಾಗಿ ಯುದ್ಧವನ್ನೂ ಆಡಿದ. ಇವನಿಂದ ಸೋಮದತ್ತಾದಿ ಅನೇಕರು ಸತ್ತರು. ದ್ರೋಣರನ್ನು ವಧಿಸಿದ ದ್ರುಷ್ಟದ್ಯುಮ್ನನನ್ನು ಖಂಡಿಸಿ ಅವನನ್ನು ಕೊಲ್ಲಲು ಹೋದ. ಭೀಮಸೇನ ಇವನನ್ನು ತಡೆದ. ಅಲ್ಲಿಗೆ ಬಂದಿದ್ದ ಸಂಜಯನನ್ನು ಕೊಲ್ಲಲು ಹೋದಾಗ ವೇದವ್ಯಾಸರು ತಡೆದರು. ಯುದ್ಧದಲ್ಲಿ ಉಳಿದವರಲ್ಲಿ ಇವನೊಬ್ಬ ಕೃಷ್ಣನ ಪ್ರೀತಿಪಾತ್ರ. ಯಾದವರೆಲ್ಲರೂ ಪ್ರಭಾಸಕ್ಕೆ ಹೋಗಿ ಅಲ್ಲಿ ಹೋರಾಡುತ್ತಿರಲು ಇವನು ತನ್ನ ಮೂಲರೂಪವಾದ ಮರುತ್ತುಗಣದಲ್ಲಿ ಸೇರಿದ. ಸ್ವರ್ಗವಾಸಿಯಾದ. |
| - | ಈ ಗಣದವರು ಯಾವದೇ ಸತ್ಕಾರ್ಯ ಸಂದರ್ಭದಲ್ಲಿ ಬಂದು ಶುಭ ಹಾರೈಸುವರು. ಬ್ರಹ್ಮ ಸಭಾ, ಇಂದ್ರ ಸಭಾದಲ್ಲಿರುವರು. ಅಮೃತಕ್ಕಾಗಿ ಹೋರಾಡಿದರು. ಜ್ಞಾನಿಗಳು. ತ್ರಿಮೂರ್ತಿಗಳ ಆರಾಧಕರು. ಯಜ್ಞಗಳಲ್ಲಿ ಭಾಗವಹಿಸುವರು (ಇವರು 12 ದೇವತೆಗಳು) |
| ಒಬ್ಬ ಮಗ | ಆವಂತಿ ಪಟ್ಟಣದಲ್ಲಿ ವಾಸವಾಗಿದ್ದ ಬ್ರಾಹ್ಮಣ. ಒಳ್ಳೆಯ ಶ್ರೋತ್ರಿಯ. ಇವರಲ್ಲಿಗೆ ಬಲರಾಮ, ಕೃಷ್ಣ ಸುಧಾಮ ಮೊದಲಾದ ಅನೇಕರು ವಿದ್ಯಾಭ್ಯಾಸಕ್ಕೆ ಬಂದರು. ಮೃತನಾಗಿದ್ದ ಈತನ ಮಗನನ್ನು ಜೀವಂತವಾಗಿ ತಂದು ಗುರುದಕ್ಷಿಣೆಯಾಗಿ ಕೃಷ್ಣ ನೀಡಿದ. 64 ವಿದ್ಯೆಗಳನ್ನು 64 ದಿನದಲ್ಲಿ ಇವರಲ್ಲಿ ಕೃಷ್ಣ ಕಲಿತಂತೆ ಮಾಡಿದ. |
| - | ಇವನೊಬ್ಬ ಯಾದವ ವೀರ. ಸುಂದರಾಂಗ. ಇವನು ಅರ್ಜುನನಿಂದ ಧನುರ್ವಿದ್ಯೆಯನ್ನು ಕಲಿತ. ವೇಗವಂತನೆಂಬ ದುಷ್ಟ ಅಸುರನನ್ನು ಸಂಹರಿಸಿದ. ದುರ್ಯೋಧನನ ಪುತ್ರಿ ಲಕ್ಷಣಾ ಸ್ವಯಂವರಕ್ಕೆ ಹೋಗಿ ಇವಳನ್ನು |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಸಾರ್ವಭೌಮ | ಅರಸು | -- | ದ್ವಾ. | ಮ. ಭಾ. | ಅಹಂಯಾತಿ, ಭಾನುಮತಿ | ಸುಂದರಾ |
| ಸಾಲ್ವ (ಬ್ರಹ್ಮದತ್ತ) | ಅರಸು (ಅಸುರ) | ಬಲಿ | ದ್ವಾ. | ಮ. ಭಾ. | ಬ್ರಹ್ಮದತ್ತ | ಇಬ್ಬರು ಪತ್ನಿಯರು |
| ಸಾವಿತ್ರೀ | ರಾಣಿ | -- | - | ಮ. ಭಾ. | ಅಶ್ವಪತಿ, ಮಾಳವಿ | ಸತ್ಯವಾನ್ |
| ಸಿಂಹಿಕಾ | ರಾಕ್ಷಸಿ | -- | ತ್ರೇ. | ರಾ. | - | - |
| ಸಿಂಹಿಕಾ | ದೇವತೆ | -- | ತ್ರೇ. | ಭಾಗವತ | ದಕ್ಷ | ಕಶ್ಯಪ |
| ಸೀತಾ | ಮಹಾಲಕ್ಷ್ಮಿ | -- | ತ್ರೇ. | ರಾ. | ಜನಕ | ಶ್ರೀರಾಮಚಂದ್ರ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಅಪಹರಿಸಿಕೊಂಡು ಬರಲು ಪ್ರಯತ್ನಿಸಿದ. ಸಿಕ್ಕುಬಿದ್ದು ಕಾರಾಗ್ರಹದಲ್ಲಿರಿಸಿದ ವಿಷಯ ತಿಳಿದ ಬಲರಾಮ ನೇಗಿಲಿನೊಂದಿಗೆ ಹಸ್ತಿನಾವತಿಯನ್ನೇ ಕಿತ್ತಲು ಬಂದಾಗ ಹೆದರಿ ಸಾಂಬನನ್ನು ಬಿಟ್ಟು ಲಕ್ಷಣಾದೊಂದಿಗೆ ಕಳುಹಿಸಿದರು. ಒಮ್ಮೆ ಇವನಗೆ ಯಾದವರು ಗರ್ಭಿಣಿ ವೇಷ ಹಾಕಿ ಮುನಿಗಳ ಹತ್ತಿರ ಹೋಗಿ 'ಈಕೆ ಎಂತಹ ಮಗುವನ್ನು ಹಡೆಯುತ್ತಾಳೆ' ಎಂದು ಕೇಳಿದರು. ಅಪರೋಕ್ಷಜ್ಞಾನದಿಂದ ವಾಸ್ತವವನ್ನು ತಿಳಿದು 'ಇವಳು ಹೆರುವ ಮುಸಲ ವಂಶವನ್ನೇ ನಾಶಮಾಡುತ್ತದೆ' ಎಂದರು. ಭಗವದಿಚ್ಛೆಯಂತೆ ಹಾಗೇ ಆಯಿತು. ಕಡೆಗೆ ಯಾದವರೊಂದಿಗೆ ಪ್ರಭಾಸದಲ್ಲಿ ದೇಹಬಿಟ್ಟ |
| ಜಯತ್ಸೇನ | ಚಂದ್ರವಂಶದ ಅರಸು. ತನ್ನ ಆಳ್ವಿಕೆಯಿಂದ ಒಳ್ಳೆ ಹೆಸರು ಪಡೆದಿದ್ದ. |
| ಬ್ರಹ್ಮದತ್ತ | ಸಾಲ್ವದೇಶದ ಅರಸು, ಇವನು ಬಲಿ ಎಂಬ ದೈತ್ಯ. ಜರಾಸಂಧನ ಅನುಚರ. ಶಿಶುಪಾಲನ ಮಿತ್ರ. ಇವನಲ್ಲಿ ಹಂಸಡಿಂಬಿಕರು ಸೌಭವೆಂಬ ಮಾಯಾಮಯವಾದ ವಿಮಾನವಿತ್ತು. ಐರಾವತದಂತಹ ಆನೆ ಇತ್ತು. ಇವನ ಗುರು ಜರಾಸಂಧ ಹಿಂದೆ ಭೀಷ್ಮ ಅಂಬೆ ಹಾಗೂ ತಂಗಿಯರು ಮೂವರನ್ನು ಸ್ವಯಂವರದಿಂದ ಬಲಾತ್ಕಾರವಾಗಿ ಕರೆದೊಯ್ದಾಗ ಅವರೊಂದಿಗೆ ಯುದ್ಧವಾಡಿ ಸೋತ. ದ್ವಾರಕೆಯನ್ನು ಮುತ್ತಿಗೆ ಹಾಕಲು ಬಂದು ಕೃಷ್ಣನಿಂದ ಹತನಾದ. |
| 100 ಗಂಡು ಮಕ್ಕಳು | ದ್ಯುಮತ್ಸೇನನ ಸೊಸೆ. ಸಾವಿತ್ರೀದೇವಿಯ ವರದಿಂದ ಜನಿಸಿ ಅವಳ ಆರಾಧಕಳು, ಸುಂದರಿ ಹಾಗೂ ಜ್ಞಾನಿ. ಸತ್ಯವಂತನನ್ನು ತಾನೇ ಪರೀಕ್ಷಿಸಿ ವರಿಸಿ ಮದುವೆಯಾದಳು. ನಾರದರಿಂದ ಪತಿಯ ಆಯುಷ್ಯದ ಮಿತಿಯನ್ನು ತಿಳಿದಿದ್ದರೂ ಅವನನ್ನು ಅನುಸರಿಸಿದಳು. ಪತಿಯೊಂದಿಗೆ ವನಕ್ಕೆ ಸೌದೆಯನ್ನು ತರಲು ಹೋದಳು. ಆಯುಷ್ಯವನ್ನು ಸೆಳೆಯಲು ಬಂದ ಯಮನೊಂದಿಗೆ ಸಂವಾದ ಮಾಡಿ ಪತಿಯ ಜೀವದೊಂದಿಗೇ ಹೋದ ಪತಿವ್ರತೆ. ಯಮನನ್ನು ಗೌರವಿಸಿ ಮೆಚ್ಚಿಸಿ ವರಗಳನ್ನು ಪಡೆದಳು. ತನ್ನ ಮಾವನಿಗೆ ಕಣ್ಣು ಬರುವಂತೆ, ತಂದೆಗೂ ಸಂತಾನವಾಗುವಂತೆ, ತನಗೆ ನೂರು ಗಂಡು ಮಕ್ಕಳಾಗುವಂತೆ ವರ ಪಡೆದು ಗಂಡನನ್ನು ಬದುಕಿಸಿಕೊಂಡ ಮಹಾಪತಿವ್ರತಾ ಸ್ತ್ರೀ. |
| - | ಇವಳು ಛಾಯಾಗ್ರಹಿಯಾಗಿದ್ದಳು. ಹನುಮಂತ ಲಂಕೆಗೆ ಪ್ರವೇಶಿಸುವ ಮುನ್ನ ಸಮುದ್ರದಲ್ಲಿ ಇವನ ನೆರಳನ್ನು ಹಿಡಿದು ಸೆಳೆದಳು. ಆದರೆ ಹನುಮಂತನ ಸಾಮರ್ಥ್ಯದಿಂದ ಅವನಿಂದಲೇ ಹತಳಾದಳು. |
| ರಾಹು, ಸುಚಂದ್ರ ಚಂದ್ರಹರ್ತಾ, ಚಂದ್ರ ಪ್ರಮರ್ದನ | ಅಸುರ ಸ್ವಭಾವದ ಮಕ್ಕಳನ್ನು ಪಡೆದಳು. ಕಶ್ಯಪರ ಮಡದಿಯರಲ್ಲಿ ಒಬ್ಬಳು. |
| ಲವ, ಕುಶ | ಅಯೋನಿಜೆ. ಜನಕ ಸಂತಾನಾರ್ಥವಾಗಿ ಭೂಶೋಧೆ ಮಾಡಲು (ಯಜ್ಞಕ್ಕೆಂದು) ನೇಗಿಲಿಗೆ ಸಿಲುಕಿ ಸಿಕ್ಕವಳು. ಮಹಾವಿಷ್ಣುವಿನ ಅವತಾರದ ಕಾರ್ಯವಾದ ಧರ್ಮ ಸಂಸ್ಥಾಪನೆ ಹಾಗೂ ದುಷ್ಟ ನಿಗ್ರಹದ ಕಾರ್ಯಕ್ಕೆ ಅಂಗಭೂತಳಾಗಿ ಅವತರಿಸಿ ಬಂದ ಲಕ್ಷ್ಮಿ. ತಂದೆಯ ಮನೆಯಲ್ಲಿದ್ದ ಶಿವಧನಸ್ಸನ್ನು ಇವಳು ಬಾಲೆಯಾಗಿದ್ದಾಗ ಎತ್ತಿದ್ದ ಕಾರಣ ಅದನ್ನೇ ಇವಳ ಮದುವೆಗೆ ಪಣವನ್ನಾಗಿಟ್ಟ ಶ್ರೀರಾಮಲಕ್ಷ್ಮಣರು ವಿಶ್ವಾಮಿತ್ರರೊಂದಿಗೆ ಮಿಥಿಲೆಗೆ ಸ್ವಯಂವರಕ್ಕೆಂದು ಬಂದರು. ರಾಮ ಶಿವಧನಸ್ಸನ್ನು ಭಂಗಗೊಳಿಸಿ ಇವಳೊಂದಿಗೆ ವಿವಾಹವಾದ. ಹನ್ನೆರಡು ವರುಷ ರಾಮನೊಂದಿಗೆ ಇದ್ದ ಬಳಿಕ ತನ್ನ ಚಿಕ್ಕತ್ತೆ ಕೈಕೇಯಿಯ ಮಾತಿನಂತೆ ರಾಮ ವನಕ್ಕೆ ತೆರಳಬೇಕಾಯಿತು. ಇವಳೂ ರಾಮನ ಅನುಮತಿ ಪಡೆದು 14 ವರ್ಷಗಳು ವನಕ್ಕೆ ಹೊರಟಳು. ಅತ್ಯಂತ ರೂಪವತಿ-ಗುಣವತಿಯಾದ ಇವಳು ಎಲ್ಲದರಲ್ಲೂ ಪತಿಯನ್ನು ಅನುಸರಿಸಿದಳು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|




| | | | | | | |
|---|---|---|---|---|---|---|
| ಸುಕನ್ಯಾ | ರಾಜಕನ್ಯೆ | -- | ತ್ರೇ. | ಮ.ಭಾ. | ಶರ್ಯಾತಿ | ಚ್ಯವನ ಋಷಿ |
| ಸುಕೇತು | ಯಕ್ಷ | -- | ತ್ರೇ | ರಾ. | - | - |
| ಸುಗ್ರೀವ | ಸೂರ್ಯ | ಬ್ರಹ್ಮ | ತ್ರೇ. | ರಾ | ಯಕ್ಷ, ಸೂರ್ಯ | ರುಮೆ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಬಂಗಾರದ ಜಿಂಕೆಯ ವೇಷದಲ್ಲಿದ್ದ ಮಾರೀಚನನ್ನು ಅಪೇಕ್ಷಿಸಿ ತರಲು ರಾಮನನ್ನು ಬೇಡಿದಳು. ದುಷ್ಟರಾವಣ ಭಿಕ್ಷುಕನ ವೇಷದಲ್ಲಿ ಬಂದು ಇವಳನ್ನು ಅಪಹರಿಸಿ ಪುಷ್ಪಕವಿಮಾನದಲ್ಲಿ ಲಂಕೆಗೆ ಕೊಂಡೊಯ್ದ. ನಿಜ ಸೀತೆಯನ್ನು ಮುಟ್ಟಲೂ ಅನರ್ಹನಾದ ರಾವಣ ಅಪಹರಿಸಿದ್ದು ಮಾಯಾ ಸೀತೆ ಎಂಬ ಪ್ರತಿಕೃತಿಯನ್ನು (ಅಗ್ನಿಪುತ್ರಿ ವೇದವತಿ) ಇವಳಲ್ಲಿ ಇಂದ್ರನಿದ್ದು ಶಕ್ತಿ ತುಂಬಿದ. ಸೀತೆ ಕೈಲಾಸಕ್ಕೆ ಹೊರಟಳು. ಸೀತೆ ತನ್ನ ಆಭರಣಗಳನ್ನು ಹರಿದ ಸೆರಗಿನಲ್ಲಿ ಗಂಟುಕಟ್ಟಿ ಕೆಳಗೆ ಒಗೆದಳು. ಇದನ್ನು ಕಂಡ ರಾಮ ಪ್ರಲಾಪಿಸಿದಂತೆ ಮಾಡಿದ. ಅಶೋಕವನದಲ್ಲಿದ್ದ ಸೀತೆಗೆ ಸಮಾಧಾನವನ್ನು ತ್ರಿಜಟೆ ಹೇಳುತ್ತಿದ್ದಳು. ಕಾಮುಕ ರಾವಣನ ಪೀಡೆಯೂ ಹೆಚ್ಚಿತು. ರಾಮದೂತ ಹನುಮಂತ ಬಂದು ರಾಮ ಕಳುಹಿಸಿದ ಉಂಗುರವನ್ನು ಕೊಟ್ಟು ಚೂಡಾಮಣಿಯನ್ನು ಪಡೆದು ಇದನ್ನು ರಾಮನಿಗೆ ಸಮರ್ಪಿಸಿ ಆನಂದಗೊಳಿಸಿದ. ರಾಮ ಯುದ್ಧದಲ್ಲಿ ರಾವಣನ ಸಂಹಾರದ ನಂತರ ಸೀತೆಯನ್ನು ಅಗ್ನಿಪರೀಕ್ಷೆಗೆ ಗುರಿಮಾಡಿದ. ಅಗ್ನಿಯಿಂದ ಬಂದ ನಿಜಸೀತೆಯನ್ನು ಪರಿಗ್ರಹಿಸಿದ. ಸೀತೆಯೊಂದಿಗೆ ಪುಷ್ಪಕವಿಮಾನದಲ್ಲಿ ಬಂದ ರಾಮ ಅಯೋಧ್ಯೆಯಲ್ಲಿ 25 ಸಾವಿರ ವರ್ಷ ರಾಜ್ಯವಾಳಿದ. ದುಷ್ಟ ಅಸುರನಾದ ಅಗಸನ ಮಾತಿಗೆ ರಾಮ ಗರ್ಭಿಣಿಯಾದ ಸೀತೆಯನ್ನು ವನದಲ್ಲಿ ಬಿಡಲು ಲಕ್ಷ್ಮಣನಿಗೆ ಆಜ್ಞಾಪಿಸಿದ. ನಿತ್ಯಾ ಅವಿಯೋಗಿನಿಯಾದ ಪವಿತ್ರ ಸೀತೆ ವಾಲ್ಮೀಕಿಗಳ ಆಶ್ರಮದಲ್ಲಿ ಲವ-ಕುಶರನ್ನು ಹೆತ್ತಳು. ಈ ಬಾಲಕರೊಂದಿಗೆ ಸೀತೆಯು ವಾಲ್ಮೀಕಿಗಳ ದ್ವಾರಾ ರಾಮನನ್ನು ಸೇರಿದಳು. ಕಡೆಗೆ ಭೂಮಿಯಿಂದ ಬಂದ ಸೀತೆ ಭೂಮಿಯಲ್ಲಿಯೇ ಅದೃಶ್ಯಳಾದಳು. |
| ಪ್ರಮತಿ | ಸೂರ್ಯವಂಶದ ವೈವಸ್ವತಮನುವಿನ ಮೊಮ್ಮಗಳು. ಒಮ್ಮೆ ತಂದೆಯೊಂದಿಗೆ ಬೇಟೆಗೆಂದು ಅರಣ್ಯಕ್ಕೆ ಹೋದಾಗ ತನ್ನ ಸಖಿಯರೊಂದಿಗೆ ಆಡುತ್ತ ಒಂದು ಹುತ್ತದಲ್ಲಿ ಎರಡು ಹೊಳೆಯುತ್ತಿರುವ ಕರಡಿಗಳನ್ನು ಕಂಡಳು. ಕುತೂಹಲದಿಂದ ಒಂದು ಕಡ್ಡಿಯಿಂದ ಚುಚ್ಚಲಾಗಿ ಆ ಎರಡು ಕಣ್ಣಿನ ಗುಡ್ಡುಗಳಿಂದ ರಕ್ತಸ್ರಾವವಾಯಿತು. ಹೆದರಿದಳು. ತಕ್ಷಣ ರಾಜ ಸೈನಿಕಾದಿಗಳಿಗೆ ಮೂತ್ರಬಂಧನವಾಗಿ ರಾಜನಿಗೆ ಅಯೋಮಯವಾಯಿತು. ಮಗಳ ಈ ಅಚಾತುರ್ಯ ತಿಳಿದು ಹುತ್ತದ ಬಳಿಗೆ ಬರಲು ಅಲ್ಲಿ ತಪಸ್ಸನ್ನಾಚರಿಸುತ್ತಿರುವವರು ಚ್ಯವನ ಋಷಿಗಳೆಂದು ತಿಳಿದು ತಪ್ಪಿಗೆ ಕ್ಷಮೆ ಯಾಚಿಸಿದರು. ಅವರ ಅಪೇಕ್ಷೆಯಂತೆ ಅನಿವಾರ್ಯವಾಗಿ ಈ ಮಗಳನ್ನು ಕೊಟ್ಟು ಆ ಮುದುಕ ಋಷಿಗೆ ಮದುವೆ ಮಾಡಬೇಕಾಯಿತು. ಕೆಲಕಾಲದ ನಂತರ ಅಶ್ವಿನೀದೇವತೆಗಳಿಂದ ಯೌವನ ಪಡೆದು ಸಕಲ ವೈಭವದಿ ಸುಕನ್ಯೆಯೊಂದಿಗೆ ಸುಖದಿಂದಿದ್ದರು. ಇದನ್ನು ಕಂಡ ಶರ್ಯಾತಿಯೂ ಆನಂದಗೊಂಡ. |
| ತಾಟಕಿ | ಬ್ರಹ್ಮರ ವರದಿಂದ ಸಾವಿರ ಆನೆ ಬಲದ ಮಗಳನ್ನು ಪಡೆದ. ಯಕ್ಷ ಸುಂದ ಇವನ ಅಳಿಯ. ಸುಬಾಹು ಮೊಮ್ಮಗ. |
| ಅಂಗದ | ವಾಲಿಯ ತಮ್ಮ. ಒಮ್ಮೆ ಯಕ್ಷರಾಜ ಸ್ತ್ರೀರೂಪದಿ ಸರೋವರದಲ್ಲಿ ಸ್ನಾನಮಾಡುವಾಗ ಸೂರ್ಯ ಇಂದ್ರರು ಇವಳಲ್ಲಿ ಮೋಹಗೊಂಡರು. ಸೂರ್ಯನ ತೇಜಸ್ಸು ಇವಳ ಗ್ರೀವ (ಕುತ್ತಿಗೆ)ದ ಮೇಲೆ ಬಿದ್ದು ಈ ಸುಗ್ರೀವ ಜನಿಸಿದ. ಇಂದ್ರನ ತೇಜಸ್ಸು ವಾಲ(ಬಾಲ)ದ ಮೇಲೆ ಬಿದ್ದು ವಾಲಿ ಜನಿಸಿದ. ಇಬ್ಬರೂ ಬಲಶಾಲಿಗಳು. ಕಿಷ್ಕಿಂದೆಯಲ್ಲಿ ಬೆಳೆದರು. ಸುಗ್ರೀವ ಯುವರಾಜನಾದ. ವಾಲಿ ಕಣ್ಮರೆಯಾದನೆಂದು ರಾಜನೂ ಆದ. ಹೀಗೆ ಮಾಯಾವಿ ರಾಕ್ಷಸನಿಂದಾಗಿ ಇಬ್ಬರಲ್ಲಿ ವೈಮನಸ್ಯ ಬೆಳೆಯಿತು. ಜಗಳ ಪ್ರಾರಂಭವಾಯಿತು. ಸುಗ್ರೀವಗೆ ರಾಮರ ಮೈತ್ರಿ ಹನುಮಂತನಿಂದಾಯಿತು. ಸುಗ್ರೀವನಿಗಾಗಿ ರಾಮ ವಾಲಿಯನ್ನು ವಧಿಸಿದ. ಮಾತಿನಂತೆ ಸುಗ್ರೀವ ಸೀತಾನ್ವೇಷಣೆ ಮಾಡದಿರಲು ಲಕ್ಷ್ಮಣನ ಮೂಲಕ ಎಚ್ಚರಿಸಿದ. ನಂತರ ಸುಗ್ರೀವ ಸೀತಾಶೋಧನೆಗೆಂದು ತನ್ನ ಸೈನ್ಯವನ್ನು ಎಲ್ಲಾ ದಿಕ್ಕುಗಳಿಗೂ ಕಳಿಸಿದ. ಹನುಮಂತನನ್ನು ದಕ್ಷಿಣದಿಕ್ಕಿಗೆ ಕಳುಹಿಸಿದ. ಹನುಮಂತ ಲಂಕೆಗೆ ಹೋಗಿ ಸೀತಾಳನ್ನು ಸಂದರ್ಶಿಸಿ ಎಲ್ಲರೂ ಹಿಂತಿರುಗಿದ ಮೇಲೆ, |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಸುತನು | ಯಾದವ ಕನ್ಯೆ | -- | ದ್ವಾ. | ಮ.ಭಾ. | ಆಹುಕ | ಅಕ್ರೂರ |
| ಸುದಾಮ (ಕುಚೇಲ) | ಬಡ ಬ್ರಾಹ್ಮಣ | -- | ದ್ವಾ. | ಭಾಗವತ | - | - |
| ಸುದೇಷ್ಣಾ (ಚಿತ್ರಾ) | ರಾಣಿ | -- | ದ್ವಾ. | ಮ.ಭಾ. | ಕೇಕಯರಾಜ | ವಿರಾಟ |
| ಸುದ್ಯುಮ್ನ (ಇಲಾ) | ಅರಸು | -- | - | ಭಾ/ಮ.ಭಾ. | ವೈವಸ್ವತಮನು ಶ್ರದ್ಧಾದೇವಿ | ಚಂದ್ರ, ಬುಧ |
| ಸುದ್ಯುಮ್ನ | ಅರಸು | -- | - | ಮ.ಭಾ. | ಸೇನಜಿತ | - |
| ಸುಧನ್ವ | ಅರಸು | -- | ದ್ವಾ. | ಮ.ಭಾ. | ಹಂಸಧ್ವಜ | ಪ್ರಭಾವತಿ |
| ಸುಧನ್ವ | ಬ್ರಾಹ್ಮಣ | -- | ದ್ವಾ. | ಮ.ಭಾ. | ಅಂಗೀರಸ | ಕೇಶಿನಿ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಸಮುದ್ರದತ್ತ ಸುಗ್ರೀವ ಸೈನ್ಯವನ್ನು ತಂದು ಸೇತುವೆಯನ್ನು ನಿರ್ಮಿಸಿದ. ರಾಮರಾವಣರ ಯುದ್ಧದಲ್ಲಿ ಹನುಮಂತನ ನಂತರದ ವ್ಯಕ್ತಿ ಸುಗ್ರೀವನೇ ಆಗಿದ್ದ. ರಾವಣನೊಂದಿಗೆ ದ್ವಂದ್ವಯುದ್ಧವಾಡಿದ, ಕುಂಭಕರ್ಣನಿಗೆ ಸಿಕ್ಕಿಬಿದ್ದು ಜಾಣತನದಿ ತಪ್ಪಿಸಿಕೊಂಡ. ರಾಮನ ಪಟ್ಟಾಭಿಷೇಕದ ನಂತರ ಸುಗ್ರೀವ ಕಿಷ್ಕಿಂಧೆಯ ರಾಜನಾದ. ರಾಮನ ಅವತಾರ ಅಂತ್ಯಗೊಳಿಸಿದ ಮೇಲೆ ಅಂಗದನಿಗೆ ಪಟ್ಟಗಟ್ಟಿ ರಾಮನೊಂದಿಗೆ ಮಹಾಪ್ರಸ್ಥಾನ, ಮೂಲರೂಪ ಸೇರಿದ. |
| - | ಇವಳ ಮದುವೆಯನ್ನು ಅಕ್ರೂರನೊಂದಿಗೆ ಕೃಷ್ಣನೆ ಮಾಡಿಸಿದ. ಪತಿಗೆ ಅನುಗುಣಳಾದ ಸತಿಯಾಗಿದ್ದಳು. |
| - | ಶ್ರೀಕೃಷ್ಣ ಬಲರಾಮರ ಜೊತೆ ಸಂದೀಪಿನಿ ಆಚಾರ್ಯರ ಗುರುಕುಲದಲ್ಲಿ ಸಹಪಾಠಿಯಾಗಿದ್ದವನು. ಕಡು ಬಡವ. ಇವನಿಗೆ ಕುಚೇಲನೆಂಬ ಹೆಸರಿತ್ತು. ಸದಾಚಾರಿಯಾಗಿ ನಿತ್ಯ ಪಾಠಪ್ರವಚನಾದಿಗಳಲ್ಲಿ ನಿರತನಾಗಿದ್ದ ಒಮ್ಮೆ ಹೆಂಡತಿಯ ಹಳೆಯ ಸ್ನೇಹಿತ ಕೃಷ್ಣನನ್ನು ಕಂಡು ಸಹಾಯ ಪಡೆಯುವಂತೆ ಸೂಚಿಸಿದಳು. ಹಿಡಿ ಅವಲಕ್ಕಿಯನ್ನು ಗಂಟು ಕಟ್ಟಿಕೊಂಡು ದ್ವಾರಕಾಧೀಶನನ್ನು ಕಾಣಲು ಹೋದ. ಕೃಷ್ಣನ ಆತಿಥ್ಯ ತೋರಿದ ಗೌರವಾದಿಗಳು ಇವನನ್ನು ಮೂಕನನ್ನಾಗಿಸಿತು. ಭಗವಂತ ಅತ್ಯಲ್ಪಜೀವಿಗೆ ತೋರಿದ ಪರಮಾನುಗ್ರಹವೆಂದು ಕೊಂಡ. ಕೃಷ್ಣನೇ ಕೊಂಕಳಿಗೆ ಕೈ ಹಾಕಿ ತಂದ ಅವಲಕ್ಕಿಯನ್ನು ತಿಂದು ಹೆಂಡತಿ ಜಾಂಬವತಿಗೂ ಕೊಟ್ಟ ಸುಧಾಮನಿಗೆ ಏನೂ ಕೊಡದೆ ಬೀಳ್ಕೊಟ್ಟ. ಸುಧಾಮ ಭಗವಂತ ಐಶ್ವರ್ಯ ಕೊಡದಿರುವುದೇ ಉದ್ಧಾರಕ್ಕೆ ಕಾರಣವೆಂದು ಅವನನ್ನೇ ನೆನೆಯುತ್ತಾ ಮನೆಯ ಹತ್ತಿರ ಬಂದು ನೋಡಲು ಸುಧಾಮ ಶ್ರೀಧಾಮನಾಗಿದ್ದ ಕೃಷ್ಣನನ್ನು ಸ್ಮರಿಸಿದ. |
| ಉತ್ತರಕುಮಾರ, ಉತ್ತರಾ | ಮತ್ಸ್ಯದೇಶದ ರಾಜನ ಮಹಿಷಿ. ಕೀಚಕ ಇವಳು ಅಕ್ಕತಂಗಿಯರ ಮಕ್ಕಳು ಕೀಚಕನ ತಂಗಿ, ಕೇಕಯರಾಜನ ಮಗಳು. ಇವಳ ಬಳಿಗೆ ಅಜ್ಞಾತವಾಸಕ್ಕೆಂದು ದ್ರೌಪದಿ ಸೈರಂಧ್ರಿ ವೇಷದಲ್ಲಿ ಮಾಲಿನಿ ಹೆಸರಿನಿಂದ ಬಂದು ಆಶ್ರಯಪಡೆದಳು. ಕಾಮುಕ ಕೀಚಕ ಸೈರಂಧ್ರಿಯನ್ನು ಬಯಸಿದಾಗ ಇವಳು ಅನಿವಾರ್ಯವಾಗಿ ಬಲವಂತದಿಂದ ಅವನಲ್ಲಿಗೆ ಕಳುಹಿಸಿದಳು. ಭೀಮಸೇನನಿಂದ ಕಾಮುಕನ ಸಂಹಾರದ ನಂತರ ಸೈರಂಧ್ರಿಗೆ ಹೆದರಿದಳು. ತನ್ನ ಮಗಳನ್ನು ಕೃಷ್ಣನ ಪಾಂಡವರ ಅನಿಸಿಕೆಯಂತೆ ಅಭಿಮನ್ಯುವಿಗೆ ಕೊಟ್ಟು ಮದುವೆ ಮಾಡಿದಳು. |
| ಪುರೂರವನ್, ಉತ್ಕಲ, ಗಯ, ವಿಮಲ | ಸೂರ್ಯವಂಶ ಹಾಗೂ ಚಂದ್ರವಂಶಕ್ಕೆ ಇವನೇ ಮೂಲಕಾರಣ. ಮನು ಹಾಗೂ ಹೆಂಡತಿಯರಿಂದಾಗಿ ಇಲಾ ಸುದ್ಯುಮ್ನನಾದಳು. ಇವನು ಇಲಾವೃತ ಖಂಡಕ್ಕೆ ಸುಕುಮಾರ ವನಕ್ಕೆ ಹೋದಾಗ ಹೆಣ್ಣಾದ. ಶಿವನ ವರದಿಂದ ಒಂದೊಂದು ತಿಂಗಳು ಹೆಣ್ಣು ಗಂಡು ಆಗುತ್ತಿದ್ದ. ಒಮ್ಮೆ ಬುಧ ಬಯಸಿ ಮದುವೆಯಾಗಿ ಪುರುರವಸ್‌ನನ್ನು ಪಡೆದ. ಗಂಡಾಗಿದ್ದಾಗ ಮೂರು ಗಂಡು ಮಕ್ಕಳನ್ನು ಪಡೆದ. |
| ಯುವನಾಶ್ವ | ಚಂದ್ರವಂಶದ ಅರಸು. ಶಂಖಮುನಿಯ ತಮ್ಮ ಲಿಖಿತನು ಅಣ್ಣನ ಮನೆಯಲ್ಲಿ ಹಣ್ಣಿನ ಕಳ್ಳತನ ಮಾಡಿ ಈ ಅರಸನಲ್ಲಿಗೆ ಬಂದು ಎರಡೂ ಕೈಗಳನ್ನು ಕತ್ತರಿಸಿಕೊಂಡು ಶಿಕ್ಷೆಯಾಗಿ ಅನುಭವಿಸಿದ. ಇಬ್ಬರಿಗೂ ಉತ್ತಮಗತಿ ಸಿಕ್ಕಿತು. |
| - | ಚಂಪಕಾವತಿಯ ರಾಜ. ಕೃಷ್ಣನ ಭಕ್ತ. ಯುಧಿಷ್ಠರನ ಅಶ್ವಮೇಧಯಾಗದ ಕುದುರೆಯನ್ನು ಕಟ್ಟಿ ಹಾಕಿದ. ಕುದುರೆಯೊಂದಿಗೆ ಬಂದಿದ್ದ ಅರ್ಜುನನೊಂದಿಗೆ ಯುದ್ಧವಾಡಿ ಮಡಿದ. |
| - | ಕೇಶಿನಿಗಾಗಿ ಪ್ರಹ್ಲಾದನ ಮಗ ವಿರೋಚನನೊಂದಿಗೆ ಸ್ಪರ್ಧೆಗಿಳಿದ. ನ್ಯಾಯಕ್ಕಾಗಿ ಪ್ರಹ್ಲಾದನ ಬಳಿಗೆ ಹೋದರು. ಪ್ರಹ್ಲಾದ ಕೇಶಿನಿ ಸುಧನ್ವನಿಗೆ ಸೇರತಕ್ಕವಳೆಂದು ನಿರ್ಣಯವಿತ್ತು ಇವನಿಂದ ವಿರೋಚನನಿಗೆ ಜೀವದಾನ ಸಿಕ್ಕಿತು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಸುನಂದಾ | ರಾಜಪುತ್ರಿ | -- | ದ್ವಾ. | ಮ.ಭಾ. | ಕೇಕಯರಾಜ | ಸಾರ್ವಭೌಮ |
| ಸುನಂದಾ | ಮಹಾರಾಣಿ | -- | ದ್ವಾ. | ಮ.ಭಾ. | ಶಿಬಿರಾಜ | ಪ್ರತೀಪ |
| ಸುನಂದಾ | ಮಹಾರಾಣಿ | -- | ದ್ವಾ. | ಮ.ಭಾ. | ಸರ್ವಸೇನ | ಭರತ |
| ಸುನೀತಿ | ರಾಣಿ | -- | ತ್ರೇ. | ಭಾ. | | ಉತ್ತಾನಪಾದ |
| ಉಪಸುಂದ (ಸುಂದ) | ಅಸುರರು | -- | ತ್ರೇ. | ರಾ. | ನಿಕುಂಭ | ತಾಟಕಿ |
| ಸುಭಾಹು | ದುಷ್ಟಕ್ಷತ್ರಿಯ | -- | ದ್ವಾ. | ಮ.ಭಾ. | ಸುಬಲ | - |
| ಸುಭದ್ರಾ | ತ್ರಿಜಟಿ, ಅಪ್ಸರೆ | ಉಮಾ, ಗೌರಿ | ದ್ವಾ. | ಮ.ಭಾ. | ವಸುದೇವ, ದೇವಕಿ | ಅರ್ಜುನ |
| ಸುಮಂತ್ರ | ಮಂತ್ರಿ | -- | ತ್ರೇ. | ರಾ. | - | - |
| ಸುಮಂತು | ಮಹರ್ಷಿ | ಗರುಡ | ದ್ವಾ. | ಮ.ಭಾ. | ವರುಣ | - |
| ಸುಮಾಲಿ | ರಾಕ್ಷಸ | -- | ತ್ರೇ. | ರಾ. | | ಕೇತುಮತಿ |
| ಸುಮಿತ್ರಾ | ರಾಣಿ | -- | ತ್ರೇ. | ರಾ. | ಶೂರರಾಜ, | ದಶರಥ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಜಯತ್ಸೇನ | ಕುರುವಂಶಕ್ಕೆ ಸೇರಿದವಳು. |
| ದೇವಾಪಿ, ಶಂತನು | ಚಂದ್ರವಂಶದ ಪುರುರಾಜನ ಸೊಸೆ. ಮಗ ಶಂತನುವಿಂದ ಕುರುವಂಶ ಬೆಳೆಯಿತು. |
| ಬಾಹ್ಲೀಕ | |
| ಭುಮನ್ಯು | ಸಾಮ್ರಾಟ್ ಭರತನ ಪಟ್ಟದ ರಾಣಿ. ದುಷ್ಯಂತನ ಸೊಸೆ. |
| ಧ್ರುವ | ಮಗನಿಗೆ ಮಲತಾಯಿ ಸುರುಚಿಯಿಂದ ಅಪಮಾನವಾದಾಗ ಅವನಿಗೆ ಭಗವಂತನನ್ನು ಆರಾಧಿಸು ಎಂದು ಪ್ರೇರಣೆ ಇತ್ತಳು. ಮಗನ ಪುಣ್ಯದಿಂದ ಸದ್ಗತಿ ಹೊಂದಿದಳು. |
| ಮಾರೀಚ, ಸುಭಾಹು | ಸೋದರರು. ಹಿರಣ್ಯಕಶಿಪುವಿನ ವಂಶಜ. ಈ ಇಬ್ಬರು ಸೋದರರು ಬ್ರಹ್ಮದೇವರಿಂದ ಅನ್ಯರಿಂದ ಮರಣ ಉಂಟಾಗಬಾರದೆಂಬ ವರ ಪಡೆದರು. ತಿಲೋತ್ತಮೆಯನ್ನು ಮೋಹಿಸಿದ ಇವರು ಅವಳನ್ನು ಪಡೆಯಲು ಪರಸ್ಪರ ಕಾದಾಡಿ ಮೃತಪಟ್ಟ ಮೂರ್ಖರು. |
| – | ಗಾಂಧಾರಿಯ ಸೋದರ, ಶಕುನಿಯ ತಮ್ಮ, ಯುದ್ಧದಲ್ಲಿ ಭೀಮನಿಂದ ಸತ್ತ. |
| ಅಭಿಮನ್ಯು | ಶ್ರೀಕೃಷ್ಣ ಬಲರಾಮರ ತಂಗಿ, ರೋಹಿಣಿ ಬಳಿಯಲ್ಲಿ ಬೆಳೆದಳು. ಇವಳನ್ನು ಬಲರಾಮ ದುರ್ಯೋಧನನಿಗೆ ಕೊಡಲು ಮನಮಾಡಿದ್ದ, ಕೃಷ್ಣ ಅರ್ಜುನನಿಗೆ ಕೊಡಲು ಇಚ್ಛಿಸಿದ್ದ. ಕಾರಣಾಂತರದಿಂದ ಅರ್ಜುನ ಒಂದು ವರುಷ ತೀರ್ಥಯಾತ್ರೆ ಮಾಡಬೇಕಾಯಿತು. ಸಂಚರಿಸುತ್ತಾ ಪ್ರಭಾಸ ಕ್ಷೇತ್ರಕ್ಕೆ ಅಲ್ಲಿಂದ ದ್ವಾರಕೆಗೆ ಬಂದ. ಅಲ್ಲಿ ಕೃಷ್ಣನ ಆಶಯದಂತೆ ಸನ್ಯಾಸಿವೇಷಧರಿಸಿ ಬಲರಾಮನ ಮನೆಗೆ ಚಾತುರ್ಮಾಸ್ಯಕ್ಕೆಂದು ಬಂದ. ಈ ಸನ್ಯಾಸಿಯ ಸುಶ್ರೂಷೆಗಾಗಿ ಸುಭದ್ರಾಳನ್ನು ಬಲರಾಮ ನಿಯೋಜಿಸಿದ. ಅರಮನೆಯಲ್ಲೇ ವಾಸ ಹೂಡಿದ. ಈ ಮೋಹಕ ಹುಡುಗಿಯನ್ನು ಅರ್ಜುನ ಮೋಹಿಸಿದ. ಇಬ್ಬರ ಪ್ರೇಮ ಬೆಳೆಯಿತು. ಒಮ್ಮೆ ಎಲ್ಲರೂ ಜಾತ್ರೆಗೆಂದು ಹೋದಾಗ ಅರ್ಜುನ ಶ್ರೀಕೃಷ್ಣನ ಅಪ್ಪಣೆ ಪಡೆದು ಇವಳನ್ನು ಅಪಹರಿಸಿಕೊಂಡು ಇಂದ್ರಪ್ರಸ್ಥಕ್ಕೆ ಹೋದ. ಇವಳ ಇಚ್ಛೆಯೂ ಈಡೇರಿತು. ಭಾರತಯುದ್ಧದಲ್ಲಿ ಮಗ ಅಭಿಮನ್ಯುವನ್ನು ಕಳೆದುಕೊಂಡಳು. ಇವಳ ಮೊಮ್ಮಗ ಪರೀಕ್ಷಿತ ವಂಶವನ್ನು ಬೆಳೆಸಿದ. |
| – | ದಶರಥನ ಮುಖ್ಯಮಂತ್ರಿ, ಇವನಿಗೆ ರಾಮನಲ್ಲಿ ಅತಿಯಾದ ಭಕ್ತಿ, ರಾಜನಿಗೆ ಉತ್ತಮ ಸಲಹೆಗಾರನಾಗಿದ್ದ, ರಾಮನನ್ನು ಅರಣ್ಯಕ್ಕೆ ಬಿಟ್ಟವನು, ಭರತನ ಹಿಂದೆ ರಾಮನನ್ನು ಕರೆತರಲು ಹೋಗಿದ್ದ. ಇವನು 9 ದಿನಗಳ ಮುನ್ನ ಅಂದರೆ 9999 ವರ್ಷ 11 ತಿಂಗಳು 21 ದಿನಕ್ಕೆ ಮರಣ ಹೊಂದಿ ಯಮಪುರಿಗೆ ಹೋಗಲು ಶ್ರೀರಾಮ ಇವನನ್ನು ಬಲಾತ್ಕಾರದಿಂದ ಕರೆತಂದ (ತ್ರೇತಾಯುಗದಲ್ಲಿ 10,000 ವರ್ಷ ಆಯುಷ್ಯ). ಯಮನಿಗೂ ಶ್ರೀರಾಮನಿಗೂ ಯುದ್ಧವಾಗಿ ಕಡೆಗೆ ಯಮನು ಮಣಿದು ಒಪ್ಪಿದ. 9 ದಿನಗಳ ನಂತರ ಸುಮಂತ್ರ ಸ್ವರ್ಗಸ್ಥನಾದ. |
| – | ವೇದವ್ಯಾಸರ ಶಿಷ್ಯರು. ಅಥರ್ವವೇದ ಪ್ರವರ್ತಕರು. ಜೈಮಿನಿ ಮೊದಲಾದವರ ಸಹಪಾಠಿ. |
| ಪ್ರಹಸ್ತ, ಅಕಂಪನ, ಧೂಮ್ರಾಕ್ಷ, ಸುಪಾರ್ಶ್ವ | ಮಾಲಿ ಹಾಗೂ ಮಾಲ್ಯವಂತನ ಸೋದರ. ಈತ ಈತನ ಮಕ್ಕಳು ರಾವಣನ ಭೃತ್ಯರಾಗಿದ್ದರು. ದುಷ್ಟರಾದ ಇವರು ಯುದ್ಧದಲ್ಲಿ ಹನುಮಂತ, ರಾಮರಿಂದ ಸತ್ತರು. ಇವನು ಇಂದ್ರನಿಂದಲೂ ಸೋತಿದ್ದ. ಇವನಿಗೆ ಪುಷ್ಪೋತ್ಕಟಿ, ಕೈಕಸಿ, ಕುಂಭೀನಸಿ ಹಾಗೂ ಬಾಲೆ ಎಂಬ ನಾಲ್ವರು ಪುತ್ರಿಯರಿದ್ದರು. |
| ಲಕ್ಷ್ಮಣ, ಶತ್ರುಘ್ನ | ದಶರಥನ ಎರಡನೆಯ ರಾಣಿ. ಮಘದ ದೇಶದ ರಾಜನ ಮಗಳು. ಪುತ್ರಕಾಮೇಷ್ಠಿಯಾಗದ ಪಾಯಸವನ್ನು ಸೇವಿಸಿ ಇಬ್ಬರು ಮಕ್ಕಳನ್ನು ಪಡೆದಳು. ರಾಮನಲ್ಲಿ ಬಹುಪ್ರೀತಿ ಇಟ್ಟವಳು. ರಾಮಸೀತೆ ವನವಾಸಕ್ಕೆ ಹೊರಟಾಗ ಲಕ್ಷ್ಮಣನಿಗೆ ಬುದ್ಧಿವಾದ ಹೇಳಿ ಕಳಿಸಿದಳು. ಭರತ ರಾಮನನ್ನು ಕರೆತರಲು ಹೋದಾಗ ಇವಳೂ ಹೋಗಿದ್ದಳು. ಕಡೆಗೆ ಸ್ವರ್ಗವನ್ನು ಸೇರಿದಳು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಸುರಥ | ಅರಸು | -- | ದ್ವಾ. | ಮ.ಭಾ. | ಜಯದ್ರಥ ದುಃಶಲೆ | - |
| ಸುರಭಿ | ಧೇನು | -- | ದ್ವಾ. | ಮ.ಭಾ. | ದಕ್ಷಪ್ರಜಾಪತಿ | ಕಶ್ಯಪ |
| ಸುವಜ್ರ | ಅರಸು | -- | ದ್ವಾ | ಮ.ಭಾ. | - | - |
| ಸುರಸಾ | ಮುನಿಪತ್ನಿ | -- | ತ್ರೇ. | ಭಾ. | ದಕ್ಷಪ್ರಜಾಪತಿ | ಕಶ್ಯಪ, ಪ್ರಧಾ |
| ಸುರುಚಿ | ರಾಣಿ | -- | ತ್ರೇ. | ಭಾ. | - | ಉತ್ತಾನಪಾದ |
| ಸುವರ್ಚಲಾ | ಋಷಿಪತ್ನಿ | -- | ದ್ವಾ. | ಮ.ಭಾ. | ದೇವಲರು, | ಶ್ವೇತಕೇತು |
| ಸುಲೋಚನಾ | - | -- | ತ್ರೇ. | ರಾ. | - | ಇಂದ್ರಜಿತ್ |
| ಸುಶರ್ಮ | ಅರಸು | -- | ದ್ವಾ. | ಮ.ಭಾ. | ವೃದ್ಧಕ್ಷೇಮ | - |
| ಸುಷೇಣ | ವಾನರ | -- | ತ್ರೇ. | ರಾ. | - | - |
| ಸುಹೋತ್ರ | ಅರಸು | -- | ತ್ರೇ. | ರಾ. | ಭುಮನ್ಯು, ಪುಷ್ಕರಿಣೀ | - |
| ಸುಹೋತ್ರ | ಕ್ಷತ್ರಿಯ | ಚಿತ್ರಗುಪ್ತ | ದ್ವಾ | ಮ.ಭಾ. | ಯುಧಿಷ್ಠಿರ, ದೇವಕಿ | - |
| ಸೂತ | ಮಹರ್ಷಿ | -- | ದ್ವಾ. | ಮ.ಭಾ. | - | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| - | ದುರ್ಯೋಧನನ ಮೊಮ್ಮಗ. ಭಾರತ ಯುದ್ಧದ ನಂತರ ಬದುಕಿದ್ದ. ಪಾಂಡವರ ಅಶ್ವಮೇಧ ಕುದುರೆಯನ್ನು ಅವರ ರಾಜ್ಯದಲ್ಲಿ ಬಂದುದ್ದನ್ನು ಅದರ ಹಿಂದೆ ಧನುರ್ಧಾರಿ ಅರ್ಜುನ ಬರುತ್ತಿರುವನೆಂಬ ಸುದ್ಧಿ ತಿಳಿದ ಮಾತ್ರಕ್ಕೆ ಸತ್ತ. |
| ನಂದಿನಿಧೇನು | ದೇವಲೋಕದ ಆಕಳಿಗೂ ಈ ಹೆಸರಿದೆ - ಕಾಮಧೇನುವೆಂದು ಇದು ಸಮುದ್ರಮಥನದ ಕಾಲದಲ್ಲಿ ಹುಟ್ಟಿತು. |
| ಒಬ್ಬಮಗಳು | ಕಳಿಂಗ ದೇಶದ ರಾಜ. ಸ್ವಯಂವರದಲ್ಲಿ ಇವನ ಮಗಳನ್ನು ದುರ್ಯೋಧನ ಅಪಹರಿಸಿದ. ಶಿವನ ವರ ಬಲದಿಂದ ಎಲ್ಲರನ್ನೂ ಹಿಡಿದು ಬಂದಿ ಮಾಡಲು ಭೀಮ ಇವರೊಂದಿಗೆ ಏಕಾಕಿ ಯದ್ಧ ಮಾಡಿ ಬಿಡಿಸಿದ. ಭೀಮನಿಂದ ಇವನ ಸತ್ತ. |
| ನಾಗರು, ಯಕ್ಷರು | ನಾಗರ ಜನ್ಮಕ್ಕೆ ಮೂಲ ದೇವತೆ. ಒಮ್ಮೆ ದೇವತೆಗಳ ಸೂಚನೆಯಂತೆ ಲಂಕೆಗೆ ಹಾರುತ್ತಿದ್ದ ಹನುಮಂತನನ್ನು ಅಡ್ಡಕಟ್ಟಿದಳು. ನುಂಗಲು ಹೋದಾಗ ಹನುಮಂತ ಬೆಳೆದ. ಇಬ್ಬರೂ ಬೆಳೆಯುತ್ತಿದ್ದಂತೆ ಹನುಮಂತ ಸೂಕ್ಷ್ಮರೂಪ ತಾಳಿ ಬಾಯಲ್ಲಿ ಹೊಕ್ಕು ಹಿಂತಿರುಗಿದ. ಸುರಸೆ ಆಶೀರ್ವದಿಸಿ ಕಳುಹಿಸಿದಳು. |
| ಉತ್ತಮ | ಉತ್ತಾನುಪಾದನ ಕಿರಿಯ ಮಡದಿ. ಧ್ರುವನನ್ನು ಕಡೆಗಣಿಸಿ ದುರಹಂಕಾರದಿಂದ ಮಾತನಾಡಿದವಳು. ದ್ರುವನನ್ನು ಕಾಡಿಗೆ ಹೋಗುವಂತೆ ಮಾಡಿದಳು. |
| - | ಜ್ಞಾನಿಯಾದವಳು. ಶ್ವೇತಕೇತುವಿನೊಂದಿಗೆ ಪುರುಷಾರ್ಥಗಳ ಸಿದ್ಧಿಯ ಬಗ್ಗೆ ಸಂವಾದ ಮಾಡಿ ಮದುವೆ ಯಾದಳು. ಅನೇಕ ಜ್ಞನಿಗಳ ಪರಿಸರದಲ್ಲಿ ಬೆಳೆದವಳು. |
| - | ಗುಣವಂತೆ, ಆದರೆ ಗಂಡನನ್ನು ಸರಿಪಡಿಸಲಾಗದವಳಾದಳು. ಯುದ್ಧದಲ್ಲಿ ಇಂದ್ರಜಿತ್ ಸತ್ತಾಗ ಅವನ ದೇಹದೊಂದಿಗೆ ಸಹಗಮನ ಮಾಡಿದಳು. |
| - | ತ್ರಿಗರ್ತದೇಶದ ರಾಜ. ದುರ್ಯೋಧನನ ಆಪ್ತಮಿತ್ರ. ದ್ರೌಪದಿ ಸ್ವಯಂವರಕ್ಕೆ ಹೋಗಿದ್ದ. ದುರ್ಯೋಧನನ ಜೊತೆ ಗೋಗ್ರಹಣಕ್ಕೆ ವಿರಾಟನಗರಕ್ಕೆ ಹೋಗಿ ವಿರಾಟನನ್ನು ಸೆರೆಹಿಡಿದ. ಅಣ್ಣನ ಆಜ್ಞೆಯಂತೆ ಭೀಮಸೇನ ವಿರಾಟನನ್ನು ಸೆರೆಯಿಂದ ಬಿಡಿಸಿ ಇವನನ್ನು ಸೆರೆಹಿಡಿದ. ಆದರೆ ವಧಿಸದೇ ಬಿಟ್ಟ ಭಾರತಯುದ್ಧದಲ್ಲಿ ದ್ರೋಣರ ಮುಂದೆ ಅರ್ಜುನನಿಂದ ಮರಣ ಹೊಂದಿದ. ಇವನ ತಮ್ಮಂದಿರಾದ ಸತ್ಯರಥ, ಸತ್ಯವರ್ಮ, ಸತ್ಯವ್ರತ್, ಸತ್ಯೇಷು, ಸತ್ಯಕರ್ಮ ಇವರೂ ಇವನೊಂದಿಗೆ ಮಹಾ ಯುದ್ಧದಲ್ಲಿ ಅರ್ಜುನನಿಂದ ಸತ್ತರು. ಇವರೆ ಸಂಶಪ್ತಕರು. |
| ತಾರಾ | ವಾಲಿಯ ಮಾವ, ಸುಗ್ರೀವನ ಸೇನಾಪತಿಯೂ ಆಗಿದ್ದ. ಯುದ್ಧದಲ್ಲಿ ಇವನ ವಾನರ ಸೈನ್ಯ ಬಂದಿತ್ತು. ವೈದ್ಯನೂ ಆಗಿದ್ದ. ಹನುಮಂತ ತಂದ ಔಷಧಿ ಪರ್ವತ ತರಿಸಿ ಲಕ್ಷ್ಮಣಾದಿಗಳನ್ನು ಬದುಕಿಸಿದ. |
| - | ಭರತನ ಮೊಮ್ಮಗ. ಇವನು ರಾಜಸೂಯ, ಅಶ್ವಮೇಧಾದಿ ಯಾಗಗಳನ್ನು ಮಾಡಿದ. ಇವನು ದಾನಶೂರನೂ ಆಗಿದ್ದ. ಭೂಮಂಡಲವನ್ನು ಆಳಿದ. ಇವನ ರಾಜ್ಯದಲ್ಲಿ ಇಂದ್ರ ಸುವರ್ಣದ ಮಳೆ ಸುರಿಸಿದ. |
| - | ಯುದ್ಧದಲ್ಲಿ ಭಾಗವಹಿಸಿ ಉಳಿದವನು. ಸೂರ್ಯವಂಶವನ್ನು ಬೆಳೆಸಿದ. |
| - | ರೋಮಹರ್ಷಣ ನಾಮಾಂತರ, ವ್ಯಾಸರ ಶಿಷ್ಯ, ನೈಮಿಷಾರಣ್ಯ ಜ್ಞಾನಸತ್ರದಲ್ಲಿ ಅನೇಕ ಶೌನಕಾದಿ ಋಷಿಮುನಿಗಳಿಗೆ ಪುರಾಣ ಇತಿಹಾಸಗಳನ್ನು ಹೇಳಿದವರು. ಬ್ರಾಹ್ಮಣ ಸ್ತ್ರೀಯಲ್ಲಿ ಕ್ಷತ್ರಿಯ ಬೀಜದಿಂದ ಹುಟ್ಟಿದವರು. |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಸೂರ್ಯ | ದೇವತೆ | -- | ಕೃ. | ಭಾ. | ಕಶ್ಯಪ, ಅದಿತಿ | ಸಂಜ್ಞಾದೇವಿ, ಛಾಯಾ |
| ಸೃಗಾಲ ವಾಸುದೇವ | ಅರಸು (ಅಸುರ) | ದುಂಧು | ದ್ವಾ | ಮ.ಭಾ. | ವಸುದೇವ, ವಡವಾ (ಕರವೀರ ರಾಜನ ಮಗಳು) | - |
| ಸೈಂಧವ (ಜಯದ್ರಥ) | ಅರಸು | ಕಾಲಕೇಯ | ದ್ವಾ. | ಮ.ಭಾ. | ವೃದ್ಧಕ್ಷತ್ರ | ದುಶ್ಶಲೆ |
| ಸೃಂಜಯ | ಅರಸು | -- | ದ್ವಾ. | ಮ.ಭಾ. | ಶೈಬ್ಯ | ಕೈಕಯೀ |
| ಸೋಮಕ | ಕ್ಷತ್ರಿಯ | -- | ದ್ವಾ. | ಮ.ಭಾ. | ಸಹದೇವ | ನೂರು ಹೆಂಡತಿಯರು |
| ಸೈರಂಧ್ರಿ | ಭಾರತಿ | -- | ದ್ವಾ. | ಮ.ಭಾ. | ದ್ರುಪದ | ಪಂಚ ಪಾಂಡವರು |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಯಮ, ಯಮುನೆ ವೈವಸ್ವತಮನು (ಶನಿ ಸುವರ್ಣಾ) ಅಶ್ವಿನಿ ದೇವತೆಗಳು. | ನವಗ್ರಹಗಳಲ್ಲಿ ಪ್ರಧಾನನಾದ ದೇವತೆ. ಸೂರ್ಯ ಮಂಡಲಾಧಿಪತಿ. ಸವಿತಾ, ಮಾರ್ತಾಂಡ, ದಿವಃಪುತ್ರ, ರವಿ ಮೊದಲಾದ ಹನ್ನೆರಡು ನಾಮಾಂತರಗಳಿವೆ. ಮೋಸದಿಂದ ಅಮೃತವನ್ನು ಕುಡಿಯಲಿಚ್ಛಿಸಿದ ರಾಹುವನ್ನು ಗುರುತಿಸಿದ. ರಾಹುವು ಶತೃವಾಗಿ ಪೀಡಿಸತೊಡಗಿದ. ಅರುಣ ಇವನ ರಥದ ಸಾರಥಿ. ತ್ವಷ್ಟ್ರು ಇವನ ಮಾವ. ಇವನ ಮಂತ್ರ ಜಪಿಸಿದ ಕಾರಣ ಕುಂತಿಗೆ ಕರ್ಣನಾಗಿ ಹುಟ್ಟಿ ಬಂದ. ಸಂವರಣ ಇವನ ಅಳಿಯ. ಧರ್ಮರಾಜ ಇವನನ್ನು ಸೇವಿಸಿ ಸಂತುಷ್ಟಪಡಿಸಿ ಇವನಿಂದ ಅಕ್ಷಯಪಾತ್ರೆ (ವನವಾಸದಲ್ಲಿದ್ದಾಗ) ಯನ್ನು ಪಡೆದ. ದ್ರೌಪದಿಯ ರಕ್ಷಣೆಗಾಗಿ (ವಿರಾಟದಲ್ಲಿದ್ದಾಗ) ಒಬ್ಬ ರಾಕ್ಷಸನನ್ನು ನೇಮಿಸಿದ್ದ. ಕಶ್ಯಪರಿಗೆ ದಕ್ಷಿಣಾರೂಪದಲ್ಲಿ ಒಂದು ದಿಕ್ಕನ್ನು ದಾನವಾಗಿ ಕೊಡಲು ಆ ದಿಕ್ಕು ದಕ್ಷಿಣ ದಿಕ್ಕೆನಿಸಿತು. ಗಾಯತ್ರೀ ಮಂತ್ರದ ಪ್ರತಿಪಾದ್ಯನಾದ ನಾರಾಯಣರೂಪಿ ಭಗವಂತ ಸೂರ್ಯಮಂಡಲ ಮಧ್ಯಸ್ಥನಾಗಿರುವ. ಸುಗ್ರೀವನು ಸೂರ್ಯನ ಅಂಶದಿಂದ ಅವತರಿಸಿದನು. ಕಿಷ್ಕಿಂಧೆಗೆ ರಾಜನಾಗಿ ಶ್ರೀರಾಮನ ಸೇವೆ ಮಾಡಿದ. ಇವನು ಸೂರ್ಯವಂಶಕ್ಕೆ ಮೂಲ ಪುರುಷ. ಇವನ ಅತಿ ತೀಕ್ಷ್ಣ ತೇಜಸ್ಸನ್ನು ತಾಳಲಾರದೆ ಸಂಜ್ಞಾದೇವಿ ಛಾಯ ಎಂಬುವಳನ್ನು ತನ್ನಂತೆ ಸೃಷ್ಟಿಸಿ ಬಿಟ್ಟು ತವರಿಗೆ ಹೋದಳು. ಇವಳಲ್ಲಿ ಶನೈಶ್ಚರನನ್ನು ಪಡೆದ. ಹಿರಿಯ ಹೆಂಡತಿ ಸಂಜ್ಞಾದೇವಿ ಕುದುರೆ ರೂಪದಲ್ಲಿದ್ದಾಗ ಸಂಗಮಾಡಿ ಅಶ್ವಿನೀದೇವತೆಗಳನ್ನು ಪಡೆದ. ನಂತರ ಬಂದ ಛಾಯಾ ಮಡದಿಯ ನಿಜಸ್ವರೂಪ ತಿಳಿದು ಅವಳನ್ನು ತ್ಯಜಿಸಿದ. ಪ್ರತಿ ಮನ್ವಂತರದಲ್ಲೂ ಸೂರ್ಯರು ಬದಲಾಗುತ್ತಿರುತ್ತಾರೆ. |
| ಶಕ್ರದೇವ | ಕರವೀರಪುರದ ಅರಸ. ದುಷ್ಟದೈತ್ಯ. ಪುತ್ರಿಕಾ ಪುತ್ರ ಧರ್ಮದಿಂದ ಅಲ್ಲೇ ಉಳಿದ. ಇವನಿಗೆ ಸೂರ್ಯನ ವರವಿತ್ತು. ಸ್ತ್ರೀರಾಜ್ಯಕ್ಕೆ ಅಧಿಪತಿಯಾದ. ಯಾದವರಿಗೆ ಶತ್ರುವಾಗಿದ್ದ. ಕೃಷ್ಣದ್ವೇಷಿ. ಮಗನನ್ನು ರಾಜನನ್ನಾಗಿಸಿದ. ಕಡೆಗೆ ಶ್ರೀಕೃಷ್ಣ ಇವನ ತಲೆ ತೆಗೆದು ಸಂಹರಿಸಿದ. |
| – | ಸಿಂಧು ದೇಶದ ರಾಜ. ಜಯದ್ರಥನೆಂಬ ನಾಮಾಂತರ. ಧೃತರಾಷ್ಟ್ರನ ಅಳಿಯ. ಅನೇಕ ತಮ್ಮಂದಿರನ್ನು ಹೊಂದಿದ್ದ. ದುರ್ಯೋಧನನ ಆಪ್ತಮಿತ್ರನಲ್ಲದೆ ಮೈದುನ. ಒಮ್ಮೆ ವನದಲ್ಲಿ ಇದ್ದ ದ್ರೌಪದಿಯನ್ನು ನೋಡಿ ಮೋಹಿತನಾಗಿ, ಪಾಂಡವರ ಆಶ್ರಮಕ್ಕೆ ಬಂದು ಒಬ್ಬಂಟಿಯಾಗಿದ್ದ ದ್ರೌಪದಿಯನ್ನು ಬಲಾತ್ಕಾರದಿಂದ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಹೋದ. ಇದನ್ನು ತಿಳಿದ ಭೀಮ ಹಿಡಿದು ಧರ್ಮಜನ ಆಶಯದಂತೆ ಕೊಲ್ಲದೆ ಬಿಟ್ಟ. ಈ ಸಿಟ್ಟಿನಿಂದ ಗಂಗಾದ್ವಾರದಲ್ಲಿ ಶಿವನನ್ನು ಕುರಿತು ತಪಸ್ಸನ್ನು ಮಾಡಿ ಒಂದು ದಿನ ಪಾಂಡವರನ್ನು ಗೆಲ್ಲುವ ವರ (ಅರ್ಜುನನನ್ನು ಬಿಟ್ಟು) ಬೇಡಿದ. ಭಾರತಯುದ್ಧದಲ್ಲಿ ದ್ರೋಣರು ಹದಿಮೂರನೇ ದಿನ ಪದ್ಮವ್ಯೂಹ ರಚಿಸಿ ಇವನನ್ನು ಮಹಾದ್ವಾರದಲ್ಲಿ ನಿಲ್ಲಿಸಿದರು. ಅಭಿಮನ್ಯುವಿನ ಸಾವಿಗೆ ಇವನೇ ಕಾರಣನೆಂದು ಅರ್ಜುನ ಇವನನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿ ಅಗ್ನಿಕುಂಡವನ್ನು ಸಿದ್ಧಪಡಿಸಿದ. ಕಡೆಗೆ ಶ್ರೀಕೃಷ್ಣನ ಕೃಪೆಯಿಂದ ಸೂರ್ಯನನ್ನು ಮರೆ ಮಾಡಿದಕ್ಕೆ ಅರ್ಜುನ ಇವನನ್ನು ಇವನ ತಂದೆಯನ್ನು ಏಕಕಾಲದಲ್ಲಿ ಸಂಹರಿಸಿದ. |
| ಸುವರ್ಣಷ್ಠೀವಿ ದಮಯಂತೀ | ಇವನ ಮಗ ಸುವರ್ಣಷ್ಠಿವಿ ದೇಹದಿಂದ ಪ್ರತಿದಿನ ಚಿನ್ನ ಹೊರಡುತ್ತಿದ್ದ ಕಾರಣ ಕಳ್ಳರು ಆಶೆಯಿಂದ ಕೊಂದರು. ಇವನ ವಿಲಾಪವನ್ನು ನಾರದರು ಉಪದೇಶ ಮಾಡಿ ಸಮಾಧಾನಿಸಿದರು. ಮಗನನ್ನು ಬದುಕಿಸಿ ಕೊಟ್ಟರು. ಇವರ ಮಗಳಾದ ಸುಕುಮಾರಿಯನ್ನು ನಾರದರು ವಿವಾಹವಾದರು. |
| ಜಂತು | ಚಂದ್ರವಂಶಜ. ಯಜ್ಞದಲ್ಲಿ ಇವನು ಮಗನನ್ನೇ ಬಲಿಕೊಟ್ಟ ಮಹಾದಾನಿಯಾಗಿದ್ದ. ಇವನಿಗೆ ನೂರು ಜನ ಪುತ್ರರಾದರು. ಇವನು ದಿವೋದಾಸನ ಮೊಮ್ಮಗ. |
| ಉಪ ಪಾಂಡವರು | ದ್ರೌಪದಿ ಅಜ್ಞಾತವಾಸಕ್ಕೆಂದು ವಿರಾಟನ ಪತ್ನಿಯ ಬಳಿಯಿರುವಾಗ ಗುಪ್ತವಾಗಿ ಇಟ್ಟುಕೊಂಡ ಹೆಸರು. ಮಾಲಿನಿ ಎಂಬ ಹೆಸರನ್ನು ಹೊಂದಿದ್ದಳು. (ನೋಡಿ - ದ್ರೌಪದಿ) |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಸೋಮದತ್ತ | ಅರಸು | ಪತ್ರತಾಪ ರುದ್ರ | ದ್ವಾ. | ಮ.ಭಾ. | ಬಾಹ್ಲೀಕ, | – |
| ಸೌತಿ | ಮಹರ್ಷಿ | -- | ದ್ವಾ. | ಮ.ಭಾ. | ರೋಮಹರ್ಷಣ | – |
| ಸೌದಾಸ | ಅರಸು | -- | ತ್ರೇ. | ರಾ. | ಸುದಾಸ | ಮದಯಂತಿ |
| ಸೌಭರಿ | ಮಹರ್ಷಿ | -- | ತ್ರೇ. | ಭಾಗವತ | – | ಐವತ್ತುಮಡದಿಯರು |
| ಸ್ಕಂದ | ದೇವತೆ | -- | ಕೃ. | ಭಾಗವತ | ಶಿವ, ಪಾರ್ವತಿ | ದೇವಸೇನೆ |
| ಸ್ಥೂಲಾಕರ್ಣ | ಯಕ್ಷ | -- | ದ್ವಾ. | ಮ.ಭಾ. | – | – |
| ಸ್ವಾಹಾ | ದೇವತೆ | | ಕೃ. | ಭಾಗವತ | ದಕ್ಷ | ಅಗ್ನಿ |
| ಸ್ವಾರೋಚಿಷ | ಮನು | -- | – | ಭಾ | ಸ್ವರೋಚಿ | ಮನೋರಮೆ, ಕಲಾವ |
| ಹಂಸ | ದೇವಗಂಧರ್ವ | ಧೃತರಾಷ್ಟ್ರ | ದ್ವಾ. | ಮ.ಭಾ. | ಕಶ್ಯಪ, ಅರಿಷ್ಟ | – |
| ಹಂಸ ಡಿಭಿಕರು | ಮಧು ಕೈಟಭ | -- | ದ್ವಾ. | ಮ.ಭಾ. | ಬ್ರಹ್ಮದತ್ತ(ಸಾಲ್ವ) | – |
| ಹಂಸಧ್ವಜ | ಅರಸು | -- | ದ್ವಾ. | ಮ.ಭಾ. | – | – |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| ಭೂರಿ, ಭೂರಿಶ್ರವ, ಶಲ | ಕುರುವಂಶಜ ಪ್ರತೀಪನ ಮೊಮ್ಮಗ. ಭೀಷ್ಮರಿಗಿಂತಲೂ ಹಿರಿಯವನು. ಪರಾಕ್ರಮಿಯಾದ ಇವನು ದುರ್ಯೋಧನನ ಪರವಾಗಿ ಯುದ್ಧವಾಡಿ ಹದಿನೈದನೇ ದಿನ ಸಾತ್ಯಕಿಯಿಂದ ಮಡಿದ. |
| - | ಉಗ್ರಸೇನನೆಂಬ ನಾಮಾಂತರ. ಸೂತಪುರಾಣಿಕರ ಮಗ. ನೈಮಿಷಾರಣ್ಯದಲ್ಲಿ ಜ್ಞಾನಸತ್ರದಲ್ಲಿ ಭಾಗವಹಿಸಿದ. ಶೌನಕಾದಿ ಮುನಿಗಳಿಗೆ ಪುರಾಣೇತಿಹಾಸಗಳನ್ನು ಹೇಳಿದ. ಬಲರಾಮ ತನಗೆ ಗೌರವಿಸಲಿಲ್ಲವೆಂದು ದರ್ಭೆಯಿಂದ ಹೊಡೆದು ಸಾಯಿಸಿದ. ಬ್ರಾಹ್ಮಣರ ಪ್ರಾರ್ಥನೆಗೆ ಮತ್ತೆ ಬದುಕಿಸಿದ. |
| ಅಶ್ಮಕ | ಇಕ್ಷ್ವಾಕುವಂಶದ ರಾಜ. ಋತುಪರ್ಣನ ಮೊಮ್ಮಗ. ಕಲ್ಮಾಷಪಾದನೆಂಬ ಇವನ ಹೆಸರು. ಒಮ್ಮೆ ವನದಲ್ಲಿ ಶಕ್ತಿ ಎಂಬ ಋಷಿಯನ್ನು ತಿರಸ್ಕರಿಸಿದಾಗ ಶಾಪ ಹೊಂದಿದ. ರಾಕ್ಷಸನಾಗೆಂದು ಶಪಿಸಿದರು. ವಿಶ್ವಾಮಿತ್ರರು ರಕ್ಷಣೆಗೆ ಬಂದರು. ಇವನಿಂದ ವಶಿಷ್ಠರ ಮಕ್ಕಳ ಸಂಹಾರ, ಕಡೆಗೆ ವಶಿಷ್ಠರಿಂದಲೇ ಉದ್ಧಾರ ಹೊಂದಿದ. ಬ್ರಾಹ್ಮಣದ್ವೇಷಕೂಡದೆಂದು ಉಪದೇಶ. ಒಮ್ಮೆ ವಶಿಷ್ಠರಿಗೇ ಶಾಪ ಕೊಡಲು ಕೈಯಲ್ಲಿ ಹಾಕಿಕೊಂಡಿದ್ದ ನೀರು ತನ್ನ ಕಾಲಿನ ಮೇಲೆ ಬಿದ್ದು ಕಲ್ಮಾಷಪಾದನಾಗಿದ್ದ. ಶಿವನನ್ನು ಪೂಜಿಸಿ ಬ್ರಹ್ಮಹತ್ಯ ದೋಷದಿಂದ ಮುಕ್ತನಾದ. |
| ಸಾವಿರ ಮಕ್ಕಳು | ಮಹಾತಪಸ್ವಿಗಳು. ಒಮ್ಮೆ ಜಲದಲ್ಲಿ ಗಂಡು ಹೆಣ್ಣು ಮೀನುಗಳು ಕ್ರೀಡೆಯಲ್ಲಿದ್ದುದನ್ನು ಕಂಡು ಗೃಹಸ್ಥರಾಗಲು ಬಯಸಿ ಆಗಿನ ಮಾಂಧತರಾಜನಲ್ಲಿಗೆ ಹೋಗಿ ತನ್ನ ಹೆಣ್ಣುಮಕ್ಕಳನ್ನು ಮದುವೆಯಾಗಲು ಬಯಸಿದರು. ಇಕ್ಕಟ್ಟಿಗೆ ಸಿಕ್ಕ ರಾಜ ಮಕ್ಕಳು ಒಪ್ಪಿದರೆ ಆಗಬಹುದೆಂದ. ದಿವ್ಯ ಸೌಂದರ್ಯವನ್ನು ತೋರಿ ಐವತ್ತು ರಾಜಕುಮಾರಿಯರನ್ನು ಮದುವೆಯಾಗಿ ಎಲ್ಲರನ್ನೂ ಸುಖದಿಂದಿರಿಸಿದ. ಇದನ್ನು ಕಂಡ ಮಾಂಧಾತನೂ ಬೆರಗಾದ. ಕಡೆಗೆ ವೈರಾಗ್ಯ ಹೊಂದಿ ಎಲ್ಲರನ್ನೂ ಉದ್ಧರಿಸಿ ತಪಸ್ಸಿಗೆ ತೆರಳಿದರು. |
| - | ದೇವತೆಗಳ ಸೇನಾಧಿಪತಿ. ಕೃತ್ತಿಕೆಯರನ್ನು ತಾಯಂದಿರಾಗಿ ಸ್ವೀಕರಿಸಿದ. ಬಲಶಾಲಿ. ಇವನು ಮಹಿಷಾಸುರ, ತಾರಕಾಸುರ, ತ್ರಿಪಾದ ಮೊದಲಾದ ರಾಕ್ಷಸರನ್ನು ಸಂಹರಿಸಿ ಲೋಕಹಿತವನ್ನು ಮಾಡಿದ. ಶಿವ ಇವನನ್ನು ಭೂತಗಳ ಅಧಿಪತಿಯನ್ನಾಗಿ ಮಾಡಿದರು. ಇಂದ್ರ ದೇವತೆಗಳ ಸೇನಾನಿಯನ್ನಾಗಿಸಿದ. ಇವನಿಗೆ ಸುಬ್ರಹ್ಮಣ್ಯ, ಕುಮಾರ, ಗುಹ, ಷಣ್ಮುಖ, ಕಾರ್ತಿಕೇಯ ಮೊದಲಾದ ಹೆಸರುಗಳಿವೆ. |
| - | ಇವನೊಬ್ಬ ಕುಬೇರನ ಅನುಚರ. ದ್ರುಪದನ ಮಗನಾದ ಶಿಖಂಡಿಗೆ ತನ್ನ ಪುರುಷತ್ವವನ್ನು ಕೊಟ್ಟು ಸ್ತ್ರೀತ್ವವನ್ನು ತಾನು ಪಡೆದು ಸಹಕರಿಸಿದ. ಆದರೆ ಇದನ್ನು ಕಂಡ ಕುಬೇರನ ಶಾಪದಿಂದ ಸ್ತ್ರೀಯಾಗಿಯೇ ಉಳಿದ. |
| ಸ್ಕಂಧ | ಅಗ್ನಿ ಸಪ್ತಋಷಿ ಪತ್ನಿಯರನ್ನು ಮೋಹಿಸಿದಾಗ, ಅವರ ರೂಪದಲ್ಲಿ ಬಂದು (ಅರುಂಧತಿಯನ್ನು ಬಿಟ್ಟು) ಅಗ್ನಿಯನ್ನು ತೃಪ್ತಿಪಡಿಸಿದಳು. |
| ದ್ಯುಮತು, ಸುಶೇಣ | ಇವನು ಮನ್ವಂತರಾಧಿಪತಿ. ಎಲ್ಲ ವಿದ್ಯೆಗಳಲ್ಲೂ ಪಾರಂಗತನಾಗಿದ್ದ. ಇವನ ಮನ್ವಂತರದಲ್ಲಿ ವಿಷ್ಣು ಉಪೇಂದ್ರ ರೂಪದಿಂದ ಇಂದ್ರನಾಗಿದ್ದ |
| - | ಇವನೇ ವ್ಯಾಸರಿಂದ ಅಂಬಿಕೆಯಲ್ಲಿ ಜನ್ಮತಾಳಿದ. (ಧೃತರಾಷ್ಟ್ರನಾಗಿ) |
| - | ಸಹೋದರರು. ಕೃಷ್ಣದ್ವೇಷಿಗಳು. ಮಹಾಶಿವಭಕ್ತರು, ಮಹಾ ದೈತ್ಯರು. ಜರಾಸಂಧನ ಮಂತ್ರಿ ಹಾಗೂ ಹಿತೈಷಿಗಳು. ಇವರಿಗೆ ಶಿವ ಮಹೋದರ ಮತ್ತು ಕುಂಡಧಾರಿ ಎಂಬ ಎರಡು ಭೂತಗಳನ್ನು ಸಹಾಯಕ್ಕಾಗಿ ಕೊಟ್ಟಿದ್ದ. ಇವು ಕೃಷ್ಣನೊಂದಿಗೆ ಯುದ್ಧವಾಡಲು ಕೃಷ್ಣ ಕೈಲಾಸಕ್ಕೆ ಎತ್ತಿ ಒಗೆದ. ಇವರು ಕೃಷ್ಣನನ್ನು ಯುದ್ಧಕ್ಕೆ ಆಹ್ವಾನಿಸಿ ಅಂತ್ಯ ಕಂಡರು. ಹಂಸ ಕೃಷ್ಣಗೆ ಭಯಗೊಂಡು ಯಮುನೆಗೆ ಹಾರಿ ಒಂದು ಸರ್ಪದ ಬಾಯಲ್ಲಿ ಬಿದ್ದ. ಡಿಬಿಕನೂ ಹೀಗೇ ಬಿದ್ದು ಸತ್ತ. ಇವರ ಬಳಿ ಇದ್ದ 10 ಅಕ್ಷೋಹಿಣಿ ಸೈನ್ಯವನ್ನು ನಾಶಮಾಡಿದ. |
| ಸುಧನ್ವ, ಸುರಥ | ಚಂಪಕಾವತಿಯ ಅರಸ. ಯುಧಿಷ್ಠಿರನ ಅಶ್ವಮೇಧಯಾಗದ ಕುದುರೆಯನ್ನು ಕಟ್ಟಿಹಾಕಿದ. ತನ್ನ ಮಗ ಸುಧನ್ವ ಅರ್ಜುನನ ಮೇಲೆ ಯುದ್ಧಸಾರಿ ಮಡಿದ. ಇವನೂ ಯುದ್ಧಕ್ಕೆ ಹೋಗಿ ಕಡೆಗೆ ಶರಣಾದ. ಶಂಖ-ಲಿಖಿತರೆಂಬುವರನ್ನು ಪುರೋಹಿತರನ್ನಾಗಿಸಿಕೊಂಡಿದ್ದ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಹನುಮಂತ | ವಾಯು | ನಾರಾಯಣ | ತ್ರೇ. | ರಾ. | ಕೇಶರಿ, ಅಂಜನಾ - | |

### ರಾಮಾಯಾಣದ ಪ್ರಮುಖ ಸರಾಸುರರ ಅಂಶಾವತಾರ

ಶ್ರೀರಾಮಚಂದ್ರ - ಶ್ರೀಮನ್ನಾರಾಯಣ (ವಾಸುದೇವ)

ಹನುಮಂತ - ವಾಯುದೇವರು

ಲಕ್ಷ್ಮಣ - ಶೇಷ (ಸಂಕರ್ಷಣ)

ಭರತ - ಕಾಮ (ಪ್ರದ್ಯುಮ್ನ)

ಶತೃಘ್ನ - ಅನಿರುದ್ಧ(ಅನಿರುದ್ಧ)

ವಾಲಿ - ಇಂದ್ರ

ಸುಗ್ರೀವ - ಸೂರ್ಯ (ಬ್ರಹ್ಮರ ಅಂಶ)

ದಶರಥ - ಸ್ವಾಯಂಭುವ ಮನು

ಅಂಗದ - ಚಂದ್ರ (ಇಂದ್ರಿವೇಶ)

ತಾರ - ಬೃಹಸ್ಪತಿ

ಜಾಂಬವಂತ - ಯಮಧರ್ಮರಾಜ

ಸುಷೇಣ - ವರುಣ

ನೀಲ - ಅಗ್ನಿ

ಕತ್ಥನ - ಕುಬೇರ

ನಳ - ವಿಶ್ವಕರ್ಮ

ದುರ್ಮುಖ - ನಿರ್ಋತಿ

ಮೈಂದವಿವಿದರು - ಅಶ್ವಿನೀ ದೇವತೆಗಳು

ಕುಶ - ಇಂದ್ರ

ಲವ - ಅಗ್ನಿ

ಗಜ - ಪ್ರಾಣ

ಗವಾಕ್ಷ - ಅಪಾನ

ಗವಯ - ವ್ಯಾನ

ವೃಷ - ಉದಾನ

ಗಂಧಮಾದ - ಸಮಾನ

ದುರ್ವಾಸರು - ರುದ್ರದೇವರು

ವಿರಾಧ - ತುಂಬುರ

ಕಬಂಧ - ವಿಶ್ವಾವಸು

ವಾಮನ - ಜಯಂತ

ಕೇಶರಿ - ಮರುತ್ (ಧ್ರುವ)

ಶ್ವೇತ - ಮರುತ್

ಸಂಪಾತಿ (ಕಪಿ) - ಮರುತ್

ಸಂಪಾತಿ (ಪಕ್ಷಿ) - ಅರುಣ ಪುತ್ರ

ಜಟಾಯು - ಅರುಣ ಪುತ್ರ

ವಿಭೀಷಣ - ಕಣ್ವಮುನಿ

ಪನಸ - ವಸು

ಶತಬಲಿ - ವಸು

ಶರಭ - ಪರ್ಜನ್ಯ

ಸೀತಾ - ಮಹಾಲಕ್ಷ್ಮೀ, ತಾರಾ - ಶಚೀ, ಅಂಜನಾ - ಪುಂಜಕಸ್ಥಲೀ (ಅಪ್ಸರೆ),
ಶಬರಿ - ಅಪ್ಸರೆ, ತ್ರಿಜಟಾ (ಮುಂದಿನ ಸುಭದ್ರೆ),

ರಾವಣ - ಹಿರಣ್ಯ ಕಶಿಪು (ಜಯನ ಆವೇಶ)

ಕುಂಭಕರ್ಣ - ಹಿರಣ್ಯಾಕ್ಷ (ವಿಜಯನ ಆವೇಶ)

ಮಂಥರಾ - ಅಲಕ್ಷ್ಮೀ (ಕಲಿಯ ಹೆಂಡತಿ)

ನಿಕೃತಿ - ಕೈಕೇಯಿಯ ಒಳಗಿದ್ದ ಅಸುರೆ.

ಇಂದ್ರಜಿತ್ (ಮುಂದೆ ದುಶ್ಯಾಸನ)

ತಾಟಕಿ - ಮುಂದೆ ಪೂತನಿ ಆಗುವಳು

| | | | | | | |
|---|---|---|---|---|---|---|
| ಹರಿಶ್ಚಂದ್ರ | ಸಾಮ್ರಾಟ್ | -- | ತ್ರೇ | ಭಾಗವತ | ತ್ರಿಶಂಕು, (ಸತ್ಯ ವ್ರತ) ಸತುವತಿ | ಚಂದ್ರಮತಿ |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| - | ವಾಯುದೇವರ ಅವತಾರ. ಶ್ರೀರಾಮನ ಸೇವಾರ್ಥವಾಗಿ ಅವತರಿಸಿ ಬಂದವ. ಚಿರಂಜೀವಿ. ಅಲ್ಲದೆ ಅಸಾಮಾನ್ಯ ಬಲಶಾಲಿ ಹಾಗೂ ಮಹಾ ವ್ಯಾಕರಣ ಪಟು. ಜೀವೋತ್ತಮನೆನಿಸಿದ ಇವನ ದೈವಭಕ್ತಿ ಅಪಾರವಾದದ್ದು. ಅಂಜನೆ ತೀವ್ರವ್ರತವನ್ನಾಚರಿಸಲು ವಾಯುದೇವರು ಫಲವನ್ನು ನೀಡಲು, ಅಂಜನಾ ದೇವಿಯಲ್ಲಿ ಹನೂಮಂತ ಜನಿಸಿದ. ಆಂಜನೇಯನೆಂದು ಕರೆದರು. ಹನು ಎಂದರೆ ಜ್ಞಾನ, ಇದನ್ನು ಪೂರ್ಣವಾಗಿ ಉಳ್ಳವನಾದ್ದರಿಂದ ಹನುಮಂತ. ಈ ಮಾರುತಿ ಬಾಲ್ಯದಲ್ಲಿ ಸೂರ್ಯಮಂಡಲವನ್ನು ಹಣ್ಣೆಂದು ತಿಳಿದು ಹಿಡಿಯಲು ಹಾರಲು ಇಂದ್ರ ತನ್ನ ವಜ್ರಾಯುಧದಿಂದ ತಡೆಯಲೆಂದು ಇವನ ಮುಖಕ್ಕೆ ಹೊಡೆದ. ಶಿಶುವು ಕೆಳಗೆ ಬೀಳಲು ವಾಯುದೇವರತು ಸಂತೈಸಿದರು. ಇದರಿಂದಾಗಿ ಜಗತ್ತಿಗೆ ವಾಯು ನಿಯಂತ್ರಿತವಾಯಿತು. ಬ್ರಹ್ಮಾದಿಗಳು ಈ ಬಾಲಕನನ್ನು ಅನುಗ್ರಹಿಸಲು ಎಲ್ಲವೂ ಸರಿಹೋಯಿತು. ವರಗಳನ್ನೂ ನೀಡಿದರು. ಸೂರ್ಯಾಂತರ್ಗತ ಭಗವಂತನಿಂದ ಎಲ್ಲ ಶಾಸ್ತ್ರಗಳನ್ನು ಅಧ್ಯಯನ ಮಾಡಿದ. ಕಿಷ್ಕಿಂದಾದಲ್ಲಿ ಸುಗ್ರೀವನಿಗೆ ಮಂತ್ರಿಯಾಗಿದ್ದನು. ಶ್ರೀರಾಮ ಸೀತಾನ್ವೇಷಣೆಯಿಂದ ಇಲ್ಲಿಗೆ ಬರಲು, ರಾಮನನ್ನು ಸಂದರ್ಶಿಸಿ ಭಕ್ತಿಭರಿತನಾಗಿ ಸುಗ್ರೀವನಲ್ಲಿಗೆ ಕರೆ ತಂದು ಮೈತ್ರಿಯನ್ನು ಮಾಡಿಸಿದ. ಸೀತಾಶೋಧನೆಯಲ್ಲಿ ನೆರವಾಗಲು ರಾಮನಿಂದ ಮುದ್ರಿಕೆಯನ್ನು ಪಡೆದು ಲಂಕೆಗೆ ಹಾರಿದ. ರಾಮಾಯಣದ ಸುಂದರಕಾಂಡ ಹನುಮಂತನ ವರ್ಣನೆಗಾಗಿ ಮೀಸಲಾಗಿದೆ. ನೂರುಯೋಜನ ಸಮುದ್ರವನ್ನು ಉಲ್ಲಂಘಿಸಿ ಲಂಕೆಯನ್ನು ಪ್ರವೇಶಿಸಿದ. ಸಮುದ್ರದಲ್ಲಿ ಮೈನಾಕ, ಸರಸಾರನ್ನು ಮೆಚ್ಚಿಸಿ, ಸಿಂಹಿಕೆಯನ್ನು ಕೊಂದು ಬಂದು ಲಂಕಿಣಿಯನ್ನು ನಿಗ್ರಹಿಸಿದ. ಅಶೋಕವನದಲ್ಲಿ ಸೀತಾಳನ್ನು ಕಂಡು ಮುದ್ರಿಕೆ ಕೊಟ್ಟು ಚೂಡಾಮಣಿಯನ್ನು ಪಡೆದ. ಅಶೋಕವನವನ್ನು ಧ್ವಂಸಮಾಡಿ ರಾವಣನ ಸೈನ್ಯವನ್ನು ಪುಡಿಮಾಡಿದ. ಅಕ್ಷಕುಮಾರನನ್ನು ಕೊಂದು ಇಂದ್ರಜಿತ್‌ಗೆ ಉದ್ದೇಶಪೂರ್ವಕ ಸಿಕ್ಕ. ರಾವಣನನ್ನು ಕಂಡು ಈ ದೂತಸೇವಕ ರಾಮನ ಗುಣಗಾನ ಮಾಡಿದ. ಲಂಕೆಯನ್ನು ಸುಟ್ಟು ಮತ್ತೆ ಹಾರಿ ಹಿಂತಿರುಗಿ ಬಂದ. ಶ್ರೀರಾಮನಲ್ಲಿ ಚೂಡಾಮಣಿಯನ್ನಿಟ್ಟು ಎಲ್ಲರ ಮೆಚ್ಚುಗೆಗೆ ಪಾತ್ರನಾಗಿ ರಾಮನ ಆಲಿಂಗನವೆಂಬ ಸಹಯೋಗಕ್ಕೆ ಭಾಗಿಯಾದ. ವಿಭೀಷಣನನ್ನು ಸ್ವಾಗತಿಸಿ ರಾಮನ ಭೃತ್ಯನನ್ನಾಗಿಸಿದ. ರಾಮ ರಾವಣರ ಯುದ್ಧದಲ್ಲಿ ಮುಖ್ಯಪಾತ್ರ ಇವನದಾಗಿತ್ತು. ನಿಕುಂಭ, ಧೂಮ್ರಾಕ್ಷ ಮೊದಲಾದ ರಾಕ್ಷಸರನ್ನು ಕೊಂದ. ಲಕ್ಷ್ಮಣನು ಮೂರ್ಛೆಹೋದಾಗ ಗಂಧಮಾಧನ ಪರ್ವತಕ್ಕೆ ಹಾರಿ ಸಂಜೀವಿನೀ ಪರ್ವತವನ್ನೇ ಎತ್ತಿ ರಣರಂಗಕ್ಕೆ ತಂದ ಧೀರ. ಎಲ್ಲ ವಾನರರನ್ನೂ ಬದುಕಿಸಿ ಹಾಗೆಯೇ ಪರ್ವತವನ್ನು ಹಿಂದಕ್ಕೆ ಒಗೆದ ವೀರ. ರಾಮನ ಆಗಮನವನ್ನು ಭರತನಿಗೆ ತಿಳಿಸಿದ. ರಾಮನ ನಿಜ ಭಕ್ತ ಇವನೇ ಎಂದು ತೋರಿದ. ಮುಂದಿನ ಬ್ರಹ್ಮಪಟ್ಟಕ್ಕೆ ಬರುವವನು ಇವನೆಂದು ನಿರೂಪಿಸಿದ. ದ್ವಾಪರದಲ್ಲಿ ಭೀಮ ಸೌಗಂಧಿಕಾ ಪುಷ್ಪ ತರಲು ಹೋದಾಗ ಮಾರ್ಗದಲ್ಲಿ ಸಂದಿಸಿ ತಾನು ಅವನೇ ಎಂದು ನಿರೂಪಿಸಿದ. ಭೀಮನಿಗೆ ಯುದ್ಧದಲ್ಲಿ ಅವನ ತಮ್ಮನ ರಥದ ಮೇಲೆ ಬಾವುಟದಂತಿದ್ದು ರಕ್ಷಿಸುವುದಾಗಿ ಹೇಳಿದ. ನಿಸ್ಸೀಮ ರಾಮಭಕ್ತನಾದ ಹನುಮಂತ ಚಿರಂಜೀವಿಯಾಗಿ ಕಲ್ಪಾಂತರದವರೆಗೆ ಶ್ರೀರಾಮನ ಚಿಂತನೆಯಲ್ಲೇ ಮುಳುಗಿ ಲೋಕರಕ್ಷಕನಾಗಿ, ಜಗತ್ತಿನ ತ್ರಾಣನಾಗಿ ಬ್ರಹ್ಮಚರ್ಯದಿಂದ ಕಿಷ್ಕಿಂದೆಯಲ್ಲಿ ಶ್ರೀರಾಮ ಸೇವಾಧುರಂದರನಾಗಿರುವ. ಇವನೇ ದ್ವಾಪರದಲ್ಲಿ ಭೀಮನಾಗಿ ಕಲಿಯುಗದಲ್ಲಿ ಮಧ್ವರಾಗಿ ಅವತರಿಸಿ ಬಂದ. |
| ರೋಹಿತ | ಸೂರ್ಯವಂಶಜ. ಮಹಾಪರಾಕ್ರಮಿ, ಸತ್ಯವಂತ, ದಾನಶೂರನಾಗಿದ್ದ. ವರುಣನ ವರದಿಂದ ಮಗನನ್ನು ಪಡೆದ. ಜೊತೆಗೆ ಮಗನನ್ನು ವರುಣನಿಗಾಗಿ ಬಲಿಕೊಡುವುದಾಗಿಯೂ ಮುಂಚೆ ಮಾತು ಕೊಟ್ಟಿದ್ದ. ಪ್ರತಿಸಲ ವರುಣ ಕೇಳಲು ನೆಪವಡ್ಡಿ ಮುಂದಕ್ಕೆ ಹಾಕುತ್ತಿದ್ದ. ಇದನ್ನರಿತ ರೋಹಿತ ಅರಣ್ಯ ಸೇರಿದ. ಕೆಲಕಾಲದ ನಂತರ |

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಹಯಗ್ರೀವ | ಮಹಾವಿಷ್ಣು | -- | ಕೃ. | ಭಾಗವತ | - | ಮಹಾಲಕ್ಷ್ಮೀ |
| ಹರ್ಯಶ್ವ | ಅರಸು | -- | ತ್ರೇ. | ಭಾಗವತ | ಅನರಣ್ಯ | ಮಾಧವಿ, ಮಧುಮತಿ |
| ಹಸ್ತಿ | ಅರಸು | -- | ದ್ವಾ. | ಮ.ಭಾ. | ಸುಹೋತ್ರ ಸುವರ್ಣಾ | ಯಶೋಧರೆ |
| ಹಿಡಿಂಬ | ರಾಕ್ಷಸ | -- | ದ್ವಾ | ಮ.ಭಾ. | - | - |
| ಹಿಡಿಂಬಾ | ರಾಕ್ಷಸಿ | ಭಾರತಿ (ಶ್ರೀಅಪ್ಸರೆ) | ದ್ವಾ. | ಮ.ಭಾ. | - | ಭೀಮಸೇನ |
| ಹಿರಣ್ಯಕಶಿಪು | ರಾಕ್ಷಸ | ಜಯ | ತ್ರೇ. | ಭಾಗವತ | ಕಶ್ಯಪ, ದಿತಿ | ಕಯಾದು |
| ಹಿರಣ್ಯಾಕ್ಷ | ರಾಕ್ಷಸ | ವಿಜಯ | ತ್ರೇ. | ಭಾಗವತ | ಕಶ್ಯಪ,ದಿತಿ | ರುಶದ್ಭಾನು |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| | ಶುನಶ್ಯೇಫನನ್ನು ವರುಣನಿಗೆ ಬಲಿಕೊಟ್ಟು ತಂದೆಯ ಜಲಂದರರೋಗದಿಂದ ಮುಕ್ತನನ್ನಾಗಿಸಲು ಪ್ರಯತ್ನಿಸಿದ. ಇದು ಸಫಲವಾಯಿತು. ಒಮ್ಮೆ ಸ್ವರ್ಗದಲ್ಲಿ ಇಂದ್ರ ಹಾಗೂ ವಿಶ್ವಾಮಿತ್ರರು ಹರಿಶ್ಚಂದ್ರನಿಂದಾಗಿ ವ್ಯಾಜ್ಯಾ ಹೂಡಿದರು. ವಿಶ್ವಾಮಿತ್ರ ಇವನ ಸತ್ಯಸಂಧತೆಯನ್ನು ಪರೀಕ್ಷಿಸಲು ಸಾಕಷ್ಟು ಕಷ್ಟಗಳನ್ನು ಒಡ್ಡಿದ. ಎಲ್ಲ ಪರೀಕ್ಷೆಗಳಲ್ಲೂ ಜಯಸಾಧಿಸಿದ ಹರಿಶ್ಚಂದ್ರ ಅಜರಾಮರನಾಗಿ ದೇವತೆಗಳ ಅನುಗ್ರಹಕ್ಕೆ ಪಾತ್ರನಾದ. |
| - | ಭಗವಂತನ ಅವತಾರಗಳಲ್ಲಿ ಒಂದು. ಈ ರೂಪ ಜ್ಞಾನದ ಸಂಕೇತ. ಸಕಲ ವೇದಗಳನ್ನು ತನ್ನ ಹಯ ಮುಖದಿಂದ ಹೊರಗೆಡೆದವನು. ಹಯಗ್ರೀವಾಸುರನನ್ನು ಸಂಹರಿಸಿದ. |
| ವಸುಮನ | ಸೂರ್ಯವಂಶಜ. ಅಯೋಧ್ಯೆಗೆ ಅರಸನಾಗಿದ್ದ ಬೃಹದಶ್ವನ ಅಣ್ಣ. ಇವನ ತಂದೆಯನ್ನು ರಾವಣ ಕೊಂದಿದ್ದ. ಹೀಗಾಗಿ ಇವನ ವಂಶದಲ್ಲೇ ಬಂದ ರಾಮ ರಾವಣನನ್ನು ಕೊಂದ. |
| ವಿಕುಂಜನ | ಚಂದ್ರವಂಶಜ. ಇವನು ನಿರ್ಮಿಸಿದ ದೊಡ್ಡ ಪಟ್ಟಣವೇ ಹಸ್ತಿನಾವತಿ. |
| - | ನರಮಾಂಸ ಭಕ್ಷಕ. ಕಿರ್ಮೀರನ ಸೋದರ. ಲೋಕಕಂಟಕ. ಶಿವನ ವರವೂ ಇತ್ತು. ಪಾಂಡವರು ಅರಗಿನ ಮನೆಯಿಂದ ಪಾರಾಗಿ ರಾತ್ರಿ ಸಮಯದಲ್ಲಿ ಇವನಿರುವ ವನಕ್ಕೆ ಬಂದರು. ಇವನ ತಂಗಿ ಹಿಡಿಂಬಾ. ಇವನು ಭೀಮನನ್ನು ಕೆಣಕಿ ಯುದ್ಧವಾಡಿ ಅವನಿಂದ ಸತ್ತ. ಹಿಂದೊಂಮ್ಮೆ ಇವನು ಬಲರಾಮನಿಂದ ಯುದ್ಧವಾಡಿ ಉಳಿದಿದ್ದ. ಇವನಲ್ಲಿದ್ದ ಒಂದು ಅಕ್ಷೋಹಿಣಿ ಸೈನ್ಯವನ್ನು ಕೃಷ್ಣಬಲರಾಮರು ನಾಶಪಡಿಸಿದ್ದರು. |
| ಘಟೋತ್ಕಚ | ಹಿಡಿಂಬನ ತಂಗಿ. ಹಿಂದೆ ಶ್ರೀ ಎಂಬ ಅಪ್ಸರೆಯಾಗಿದ್ದು ಶಚಿಯ ಶಾಪದಿಂದ ರಾಕ್ಷಸಿಯಾದಳು. ಇವಳನ್ನು ಮಲಗಿದ್ದ ಪಾಂಡವರನ್ನು ಕೊಂದು ತರಲು ಹಿಡಿಂಬ ಕಳಿಸಿದ್ದ. ಭೀಮನ ರೂಪಕ್ಕೆ ಮೋಹಿತಳಾಗಿ ಮದುವೆಯಾಗಬಯಸಿದಳು. ಕುಂತಿ ಧರ್ಮರಲ್ಲಿ ಪ್ರಾರ್ಥಿಸಿದಳು. ಕೆಲವು ನಿಯಮಗಳ ಮೇಲೆ ವಿವಾಹವಾಯಿತು. ಮಾಯಾವಿಯಾದ ಇವಳು ಭೀಮನನ್ನು ವಿಹಾರಕ್ಕೆ ಕರೆದೊಯ್ಯುತ್ತಿದ್ದಳು. ಘಟೋತ್ಕಚನ ತಾಯಿಯಾದಳು. ಮುಂದೆ ಮಗನಿಗೆ ಎಲ್ಲ ವಿದ್ಯೆಗಳನ್ನೂ ಕಲಿಸಿ ಬೆಳೆಸಿದಳು. |
| ಪ್ರಹ್ಲಾದ, ಸಂಹ್ಲಾದ ಅನುಹ್ಲಾದ, ಶಿಬಿ, ಭಾಷ್ಕಲಿ, ಹರಿಣಿ(ಪುತ್ರಿ) | ಸಮಸ್ತ ದೈತ್ಯರ ರಾಜನಾಗಿ ದೇವತೆಗಳ ಶತ್ರುವಾಗಿದ್ದ. ಲೋಕ ಕಂಟಕನಾಗಿದ್ದ. ಇವನ ತಮ್ಮ ಹಿರಣ್ಯಾಕ್ಷನನ್ನು ಕೊಂದ ವರಾಹನಲ್ಲಿ ಅತಿಯಾದ ದ್ವೇಷವಿತ್ತು. ಕಾಡಿನಲ್ಲಿ ಬ್ರಹ್ಮನನ್ನು ಕುರಿತು ಕಠಿಣ ತಪಸ್ಸು ಮಾಡಿದ. ಸಾವಿಲ್ಲದ ಅಮರತ್ವ ಪಡೆಯಲು ನಾನಾ ವಿಧದ ವರಗಳನ್ನು ಪಡೆದ. ಉನ್ಮತ್ತನಾಗಿ ತ್ರಿಲೋಕವನ್ನು ಜಯಿಸಿ ಸ್ವರ್ಗವನ್ನೂ ಆಕ್ರಮಿಸಿದ. ವಿಷ್ಣು ಹಾಗೂ ವಿಷ್ಣುಭಕ್ತರಲ್ಲಿ ದ್ವೇಷ ಹೆಚ್ಚಿತು. ತನ್ನ ಮಗ ಪ್ರಹ್ಲಾದ ಪರಮ ವಿಷ್ಣುಭಕ್ತನಾದುದೇ ಇವನ ಮೃತ್ಯುವಿಗೆ ಕಾರಣವಾಯಿತು. ಶಂಡಾಕರ್ಮದಲ್ಲಿ ಪಾಠಕ್ಕೆ ಹಾಕಿದ. ಮಗ ಇತರ ಬಾಲಕರನ್ನು ಹರಿಭಕ್ತರನ್ನಾಗಿಸಿದ್ದು ಇವನ ಕೋಪ ಇಮ್ಮಡಿಸಿತು. ಅನೇಕ ರೀತಿಯಲ್ಲಿ ಮಗನಿಗೆ ಚಿತ್ರಹಿಂಸೆ ಕೊಟ್ಟ, ಕೊಲ್ಲಿಸಲು ಪ್ರಯತ್ನಪಟ್ಟು ವಿಫಲನಾದ. ಕಡೆಗೆ ಮಗನಿಂದಲೇ ಶ್ರೀಹರಿ ಎಲ್ಲೆಲ್ಲೂ ಇರುವನೆಂದು ತಿಳಿದು ಕಂಭಕ್ಕೆ ತನ್ನ ಮುಷ್ಟಿಯಿಂದ ಹೊಡೆದ. ಸಂಧ್ಯಾಕಾಲದಲ್ಲಿ ನರಸಿಂಹ ರೂಪದಿಂದ ಕಂಭದಿಂದಲೇ ಬಂದು ಯಾವ ಆಯುಧಗಳನ್ನು ಬಳಸದೆ ಕೇವಲ ಉಗುರುಗಳಿಂದ ಹೊಸ್ತಿಲ ಮೇಲೆ ಕುಳಿತು ಬ್ರಹ್ಮನಿಂದ ಸೃಷ್ಟಿಸಲ್ಪಡದ ರೂಪದಿಂದ ಸಂಧ್ಯಾಕಾಲದಲ್ಲಿ ಇವನನ್ನು ಸಂಹರಿಸಿದ. |
| ಶಕುನಿ, ಶಂಬರ, ವೃಕ ದೃಷ್ಟಿ ಕಾಲನಾಭ, ಉತ್ಕಟ, ಮುಂ. | ಇವನು ಬ್ರಹ್ಮನಿಂದ ವರ ಪಡೆದು ಲೋಕಕಂಟಕನಾಗಿದ್ದ. ಹಿರಣ್ಯಕಶಿಪುವಿನ ಅಣ್ಣ. ವಿಷ್ಣು ದ್ವೇಷಿ. ಸಾಧನ ಭೂಮಿಯನ್ನೇ ಸಮುದ್ರದಲ್ಲಿ ಅಡಗಿಸಲು ಯತ್ನಿಸಿದ. ಭಗವಂತ ವರಾಹಾವತಾರ ತಾಳಿ ಇವನನ್ನು ಸಂಹರಿಸಿದ. |

ತಿಳಿದಿರೋಣ : ಭಾಗ -2

| ಅವತಾರ | ಯಾರು ? | ಅಂಶ/ಆವೇಶ | ಕಾಲ | ಪಾತ್ರ | ತಂದೆ-ತಾಯಿ | ಹೆಂ./ಗಂ. |
|---|---|---|---|---|---|---|
| ಹಾಹಾ | ಗಂಧರ್ವ | -- | ತ್ರೇ. | ಭಾಗವತ | ಕಶ್ಯಪ, ಅರಿಷ್ಟೆ | - |
| ಹೂಹೂ | ಗಂಧರ್ವ | ಅವಹ | - | ಭಾಗವತ | ಪೃಷತ(ಅರಿಷ್ಟೆ) | - |
| ಹೃದಿಕ | ಯಾದವ | -- | ದ್ವಾ. | ಮ.ಭಾ. | ಭೋಜನವಂಶಜ | - |
| ಹೇತಿ | ರಾಕ್ಷಸ | ವಾಯು | ತ್ರೇ | ಭಾಗವತ | - | - |
| ಹೈಹಯ | ಅರಸು | -- | ತ್ರೇ. | ಭಾಗವತ | ವತ್ಸ | ಹತ್ತುಪತ್ನಿಯರು |
| ಕ್ಷೇಮಧೂರ್ತಿ | ಅಸುರ ಕ್ಷತ್ರಿಯ | ದ್ವಾ | ಮ.ಭಾ. | - | - | - |
| ಕ್ಷೇಮಕ | ಅರಸು | -- | ಕಲಿಯುಗ | ಭಾ. | - | - |

| ಸಂತಾನ | ಇತರ ಮಾಹಿತಿ (ಸಂಕ್ಷಿಪ್ತ) |
|---|---|
| – | ಒಮ್ಮೆ ಋಷಿಗಳಿಗೆ ಅಪಮಾನಿಸಿದಾಗ ದೇವಲ ಋಷಿಗಳು ಮೊಸಳೆಯಾಗಲು ಶಾಪವಿತ್ತರು. ಇವನು ಸರೋವರದಲ್ಲಿ ಮೊಸಳೆಯಾಗಿ ಗಜೇಂದ್ರನನ್ನು ಹಿಡಿದ. ಗಜೇಂದ್ರನ ಪ್ರಾರ್ಥನೆಗೆ ಭಗವಂತ ಗರುಡಾ ರೂಢನಾಗಿ ಬಂದು ತನ್ನ ಚಕ್ರದಿಂದ ಮೊಸಳೆಯನ್ನು ಕತ್ತರಿಸಿದ. ಆಗ ಇವನು ಮೂಲರೂಪ ಪಡೆದು ಉದ್ಧಾರನಾದ. |
| – | ಬ್ರಹ್ಮಲೋಕದ ಗಾಯಕ. ದ್ರುಪದನ ಅವತಾರಿ. ಹಿಂದಿನ ಜನ್ಮದಲ್ಲಿ ದೇವಲದ ಶಾಪದಿಂದ ಮೊಸಳೆಯಾಗಿ ಗಜೇಂದ್ರನ ಕಾಲು ಹಿಡಿದ. ಶ್ರೀಹರಿಯಿಂದ ಶಾಪವಿಮೋಚನೆ ಆಯಿತು. |
| ಕೃತವರ್ಮ | ಚಂದ್ರವಂಶಜ. ಕೃಷ್ಣ ಬಲರಾಮರಿಗಿಂತಲೂ ಹಿರಿಯ ಇವನ ಮಗನನ್ನು ಬಲರಾಮ ದುರ್ಯೋಧನನಿಗೆ ಯುದ್ಧದಲ್ಲಿ ಸಹಾಯಕನನ್ನಾಗಿ ಕಳಿಸಿದ್ದ. |
| – | ರಾಕ್ಷಸನಾದರೂ ಸಾತ್ವಿಕ. ಸೂರ್ಯ ರಥಚಕ್ರ ರಕ್ಷಕನು. ದ್ರೌಪದಿಯನ್ನು ಕೀಚಕ ಕೆಣಕಿದಾಗ ಅವನನ್ನು ಬೀಳಿಸಿ ಮೂರ್ಛೆಗೊಳಿಸಿದ. |
| ನೂರು ಮಕ್ಕಳು | ಸೂರ್ಯವಂಶಜ. ವೀತಹವ್ಯನೆಂದು ನಾಮಾಂತರ. ಭೃಗು ಋಷಿಗಳ ಶಿಷ್ಯ. ಅವರಿಂದ ಬ್ರಾಹ್ಮಣ್ಯ ಪಡೆದ. |
| – | ಕರೂಶ ದೇಶದ ರಾಜ. ಮಹಾ ಯುದ್ಧದಲ್ಲಿ'ದುರ್ಯೋದನನಿಗೆ ಸಹಕರಿಸಿ ಭೀಮನಿಂದ ಸತ್ತ. |
| – | ಅಭಿಮನ್ಯುವಿನಿಂದ ಮುಂದುವರೆದ ಪಾಂಡವರ ವಂಶದ ಕಡೆಯ ರಾಜ. ಕಲಿಯುಗದ ಸಂಧಿಕಾಲದಲ್ಲಿ ರಾಜ್ಯವಾಳಿದ. ಇಲ್ಲಿಗೆ ಪಾಂಡವರ ವಂಶ ಮುಕ್ತಾಯಗೊಂಡಿತು. |

## ಪರಿಶಿಷ್ಠ - 1

# ಶ್ರೀಕೃಷ್ಣಕಥಾ ಮಣಿಮಾಲಾ

ಶ್ರೀಮಹಾವಿಷ್ಣುವು ದೇವತೆಗಳ ಪ್ರಾರ್ಥನೆಯಂತೆ ಸುಜೀವಿಗಳನ್ನು ಉದ್ಧರಿಸಿ ದುಷ್ಟರನ್ನು ಶಿಕ್ಷಿಸುವುದಕ್ಕಾಗಿ ಅವತರಿಸಿ ಬಂದ ವಿಶಿಷ್ಟರೂಪ ಶ್ರೀ ಕೃಷ್ಣ ಈಗಿನ ವೈವಸ್ವತ ಮನ್ವಂತರದ 28 ನೇ ದ್ವಾಪರಯುಗದ ಅಂತ್ಯಭಾಗದಲ್ಲಿ ಆದ ಅವತಾರ. ಚಂದ್ರವಂಶದ ಯದುಕುಲದಲ್ಲಿ ಅವತರಿಸಿ ಬಂದ. ದಶಾವತಾರದಲ್ಲಿ ಎಂಟನೆಯ ಅವತಾರವೆನಿಸಿದ ಶ್ರೀಕೃಷ್ಣ ವೈಕುಂಠದ ದ್ವಾರಪಾಲಕರಾದ ಜಯವಿಜಯರನ್ನು ಉದ್ಧರಿಸುವದೂ ಒಂದಾಗಿತ್ತು. ಭೂಭಾರಹರಣದ ಕಾರ್ಯದೊಂದಿಗೆ ಪುನಃ ಧರ್ಮವನ್ನು ಸ್ಥಾಪಿಸಿದ. ಪುರುಷೋತ್ತಮನೆನಿಸಿದ ಕೃಷ್ಣ ಮಹಾಭಾರತದ ಸೂತ್ರಧಾರಿಯಾಗಿ ಸಜ್ಜನೋತ್ತಮರಾದ ಧರ್ಮಿಷ್ಠ ಪಾಂಡವರ ಪಕ್ಷ ವಹಿಸಿ ದುರಾತ್ಮರಾದ-ಕೌರವರನ್ನು ವಿನಾಶಗೊಳಿಸಿ ಎಂದಿಗೂ ಧರ್ಮಕ್ಕೇ ಜಯವೆಂದು ಸಮರ್ಥಿಸಿದ. ವಸುದೇವ ದೇವಕಿಯರಲ್ಲಿ ಎಂಟನೆಯ ಮಗನಾಗಿ ಆವಿರ್ಭವಿಸಿ ತೋರಿದ ಬಾಲಲೀಲೆಗಳು ಅದ್ಭುತ ಹಾಗೂ ಶ್ರವಣಾದಿಗಳು ಮೋಕ್ಷದಾಯಕವಾದದ್ದು. ಹುಟ್ಟಿನಿಂದಾರಂಭಿಸಿ ಪರಂಧಾಮಕ್ಕೆ ತೆರಳುವವರೆಗೂ ತೋರಿದ ಪರಮಾದ್ಭುತ ಮಹಿಮೆಗಳು, ಮಾಡಿದ ಕಾರ್ಯಗಳು ಸ್ಮರಣೆಮಾತ್ರದಿ ಪಾಪಹರ ಹಾಗೂ ಪುಣ್ಯವರ್ಧಕ. ಸರ್ವೋತ್ತಮನಾದ ಶ್ರೀ ಕೃಷ್ಣನ, ಜೀವೋತ್ತಮರಾದ ಭೀಮಸೇನ ಹಾಗೂ ದ್ರೌಪದಿಯ ಚರಿತಾನುವಾದವೆ ಮಹಾಭಾರತ. ಇಲ್ಲಿಲ್ಲದ್ದು ಬೇರೆಲ್ಲೂ ಇರದು. ವೇದವ್ಯಾಸರೂಪಿ ಭಗವಂತ ತನ್ನದೇ ಆದ ಕೃಷ್ಣರೂಪದ ವರ್ಣನೆಯನ್ನು ಮಾಡಬಲ್ಲವ. ಅದರ ಸಂಗ್ರಹ ಇಲ್ಲಿದೆ. ಮಹಾಭಾರತ ಒಂದು ಅಧ್ಯಾತ್ಮ. ಇದು ಪಂಚಮವೇದ ಎನಿಸಿದೆ. ವೇದಕ್ಕೂ ಮಿಗಿಲಾದದ್ದಾಗಿದೆ. ಈ ಜಯವೆಂಬ ಇತಿಹಾಸವನ್ನು ತಿಳಿದವರಿಗೆ ಎಂದಿಗೂ ಜಯವೆಂದು ಜಯರೂಪಿಗಳಾದ ಕೃಷ್ಣ ಭೀಮರು ಜಯಘೋಷ ಮಾಡಿರುವರು. ಇಲ್ಲಿ ಶ್ರೀಕೃಷ್ಣನ ಕಥಾವನ್ನು ವಿಶಿಷ್ಟರೀತಿಯಲ್ಲಿ ಸಂಗ್ರಹವಾಗಿ ತಿಳಿದದ್ದನ್ನು ಕೊಡಲು ಪ್ರಯತ್ನಿಸಿದೆ.

ತಂದೆ - ವಸುದೇವ (ಶೂರಸೇನನ ಮಗ - ಯದುವಂಶಜ)

ತಾಯಿ - ದೇವಕಿ (ದೇವಕನ ಮಗಳು - ಭೋಜವಂಶಜಳು)
ಕಾರಾಗೃಹದಲ್ಲಿ ಬ್ರಹ್ಮರುದ್ರೇಂದ್ರಾದಿಗಳಿಂದ ಪ್ರಾರ್ಥನೆ - ಪ್ರಾದುರ್ಭಾವ.

- ದೇವಕಿಯ ಎಂಟನೇ ಮಗ (ಕಂಸನ ಕಾರಾಗೃಹದಲ್ಲಿ ಜನನ)
(ವಸುದೇವ ಕೃಷ್ಣನ್ನ ನಂದಗೋಪನಲ್ಲಿಟ್ಟು - ದುರ್ಗೆಯನ್ನು ತಂದ)
ಧರ್ಮಸ್ಥಾಪನೆಯೊಂದಿಗೆ ದುಷ್ಟನಿಗ್ರಹದ ಭೂಭಾರ ವಿನಾಶಾರ್ಥವಾಗಿ ಅವತರಿಸಿದ.
- ಪೂತನೆಯನ್ನು ಕೊಂದ (ಹತ್ತುದಿನಗಳಲ್ಲಿ)
- ಬಂಡಿಯ ರೂಪದ ಶಕಟಾಸುರನನ್ನು ಸಂಹರಿಸಿದ.
- ತಾಯಿಗೆ ತನ್ನ ಪುಟ್ಟ ಬಾಯಲ್ಲಿ ವಿಶ್ವವನ್ನು ತೋರಿದ (6 ತಿಂಗಳ ಮಗು)
- ತೃಣಾವರ್ತನವಧ (ಸುಂಟರಗಾಳಿ ರೂಪದಲ್ಲಿ ಬಂದ ದೈತ್ಯ)

- ನಾಮಕರಣ – ಗರ್ಗಮುನಿಯಿಂದ (ಕೃಷ್ಣನಾಮ)
- ಮಣ್ಣನ್ನು ತಿಂದು ಯಶೋದೆಗೆ ಪುಟ್ಟ ಬಾಯಲ್ಲಿ ಬ್ರಹ್ಮಾಂಡ ತೋರಿದ.
- ಯಮಲಾರ್ಜುನರಭಂಜನ (ಮತ್ತಿಯ ಯುಗಳ ಮರಗಳು)
- ಬೃಹದ್ ವನದಿಂದ ವೃಂದಾವನಕ್ಕೆ ಪ್ರಯಾಣ – ಗೋಪಾಲಕನಾದ.
- ವತ್ಸಾಸುರನ ವಧ (ಆಕಳರೂಪ)
- ಬಕನ ವಧ – (ಬಕನ ರೂಪದ ಅಸುರ)
- ಕಾಳಿಯ ಮರ್ದನ (ಯಮುನಾ ಮಡುವಿನಲ್ಲಿದ್ದ ಕಾಳಿಂಗ)
- ವನದಲ್ಲಿ ಕಾಡ್ಗಿಚ್ಚನ್ನು ಪಾನ ಮಾಡಿದ.
- ಉಗ್ರಾಸುರನ ವಧ (ಭಯಂಕರ ದೈತ್ಯ)
- ಏಳು ಗೂಳಿಗಳನ್ನು (ಅಸುರರನ್ನು) ಮರ್ದಿಸಿ, ಕುಂಭಕನ ಮಗಳಾದ ಸೀತೆಯನ್ನು ಮದುವೆಯಾದ.
- ಧೇನುಕನ ವಧ (ಕತ್ತೆಯ ರೂಪದ ಅಸುರ)
- ಪ್ರಲಂಬಾಸುರ ವಧ (ಬಲರಾಮನಿಂದ ಕೊಲ್ಲಿಸಿದ – ಗೋಪಾಲಕನ ರೂಪಿ)
- ಕಾಡ್ಗಿಚ್ಚನ್ನು ಕುಡಿದ (ಎರಡನೆಯ ಸಲ)
- ವಿಪ್ರಪತ್ನಿಯರಿಂದ ಸನ್ಮಾನಿತನಾದ.
- ಗೋವರ್ಧನೋದ್ಧರಣ – ಇಂದ್ರನಿಂದ ಪೂಜಿತನಾದ. (ಗೋವಿಂದ ಎಂದು ಸ್ತುತ್ಯನಾದ) (ಏಳು ವರ್ಷದ ಬಾಲಕ ಏಳು ದಿನಗಳ ಕಾಲ ಕಿರಿಬೆರಳಲ್ಲಿ ಪರ್ವತನನ್ನು ಎತ್ತಿ ಹಿಡಿದಿದ್ದ)
- ಗೋಪಿಕಾ ಸ್ತ್ರೀಯರನ್ನು (ಕಾತ್ಯಾಯಿನಿ ಪೂಜಿಸಿದವರನ್ನು) ಕೈ ಹಿಡಿದ. ರಾಸಲೀಲೆ ಗೋಪಿಯರೊಂದಿಗೆ. ಗೋಪೀನಾಂ ವಸ್ತ್ರಾಪಹರಣಮ್
- ಶಂಖಚೂಡನ ವಧ (ಯಕ್ಷ)
- ಅರಿಷ್ಟಾಸುರನ ವಧ (ಗೂಳಿರೂಪ)
- ಅಘಾಸುರನ ವಧ (ಹೆಬ್ಬಾವಿನ ರೂಪ)
- ನಂದನನ್ನು ಹೆಬ್ಬಾವಿನಿಂದ ಬಿಡಿಸಿದ. (ವರುಣನ ದೂತರ ಶಾಪವಿಮೋಚನೆ)
- ಗೊಲ್ಲರಿಗೆ ವೈಕುಂಠದ ದೃಶ್ಯ ತೋರಿಸಿದ.
- ಕೇಶಿಯವಧ (ಕುದುರೆ ರೂಪದ ದೈತ್ಯ)
- ವ್ಯೋಮಾಸುರನ ವಧ. (ಪಕ್ಷಿರೂಪಿ)
- ಅಕ್ರೂರನಿಂದ ಧನುರ್ಯಾಗಕ್ಕೆ ಮಧುರೆಗೆ ಆಹ್ವಾನ (ಕಂಸ ಪ್ರೇರಿತ) (ಎಂಟು ವರ್ಷದ ಬಾಲಕ)
- ಅಕ್ರೂರ, ಬಲರಾಮರ ಜೊತೆ ಮಧುರೆಗೆ ಪ್ರಯಾಣ

- ಅಕ್ರೂರಗೆ ನೀರೊಳಗೆ ದರ್ಶನ ಕೊಟ್ಟ, ತನ್ನ ಶೇಷಶಾಯಿರೂಪ ತೋರಿದ.
- ತ್ರಿವಕ್ರೆಯ ವಕ್ರತ್ವ ಕಳೆದು ರುಜುವನ್ನಾಗಿಸಿ ಅವಳ ಸೇವೆ ಸ್ವೀಕರಿಸಿದ.
- ಮಧುರೆಯಲ್ಲಿ ಕಂಸನ ಬಿಲ್ಲನ್ನು ನಗಾರಿಯನ್ನು ಧ್ವಂಸಮಾಡಿದ.
- ಮಧುರೆಯಲ್ಲಿ ಪಾರ್ವತೀ ವರವಿದ್ದ ದುಷ್ಟ ರಜಕನನ್ನು ಸಂಹರಿಸಿದ.
- ಕಂಸನ ಆನೆ (ಕುವಲಯಾಪೀಡ) ಮಾವುತನನ್ನು ಕೊಂದ.
- ಚಾಣೂರ ಮಲ್ಲರನ್ನು ಕೊಂದ.
- ಕೂಟ, ಕೋಶಲ, ಛಲಾದಿ ಮಲ್ಲರನ್ನು ಕೊಂದ. ಸೈನ್ಯಾಧಿಪತಿ ಸುನಾಮನ ವಧೆ.
- ಕಂಸನ ತಮ್ಮಂದಿರನ್ನು ಸೇನೆಯನ್ನು ಕೃಷ್ಣ ಬಲರಾಮರು ನಾಶಪಡಿಸಿದರು.
- ಇಂದ್ರ ಆಯುಧಗಳಿಂದ ತುಂಬಿದ ದಿವ್ಯರಥವನ್ನು ಕೃಷ್ಣನಿಗಾಗಿ ಕಳುಹಿಸಿದ.
- ದುಷ್ಟ ಕಂಸನನ್ನು ಸಂಹರಿಸಿದ. (ಕಾಲ ನೇಮಿ ದೈತ್ಯ-ಭೃಗು ಆವಿಷ್ಟ)
- ಉಗ್ರಸೇನನನ್ನು ಸಂತೈಸಿ, ಸಿಂಹಾಸನದಿ ಕೂಡಿಸಿ ಮರು ಪಟ್ಟಾಭಿಷೇಕ ಮಾಡಿದ.
- ವಸುದೇವ ದೇವಕಿಯರನ್ನು ಬಂಧಮುಕ್ತರನ್ನಾಗಿಸಿದ.
- ಕುಬ್ಜೆಯಲ್ಲಿ ವಿಶೋಕನನ್ನು ಪಡೆದ.
- ಕೃಷ್ಣಬಲರಾಮರಿಗೆ ಉಪನಯನ ಸಂಸ್ಕಾರವಾಯಿತು. (ಗರ್ಗಾಚಾರ್ಯರ ಪೌರೋಹಿತ್ಯ)
- ವಿದ್ಯಾಭ್ಯಾಸ ಗುರುಕುಲವಾಸ (ಉಜ್ಜಯಿನಿಯಲ್ಲಿದ್ದ ಸಂದೀಪನಿ ಗುರುಗಳಲ್ಲಿ)

64 ದಿನಗಳಲ್ಲಿ ಚತುಷಷ್ಟಿಕಲಾ ವಿದ್ಯೆಗಳನ್ನು ಕೃಷ್ಣರಾಮರು ಕಲಿತರು.

- ಮೃತನಾಗಿದ್ದ ಗುರುಪುತ್ರನನ್ನು ಯಮಲೋಕದಿಂದ ತಂದು ಗುರುದಕ್ಷಿಣೆಯಾಗಿ ಕೊಟ್ಟ
- ಮಧುರೆ ಮೇಲೆ ದಂಡೆತ್ತಿ ಬರುತ್ತಿದ್ದ ಜರಾಸಂಧನನ್ನು 18 ಬಾರಿ ಸೋಲಿಸಿ ಬರಿಗೈಯಲ್ಲಿ ಕಳಿಸಿದ. ಪ್ರತಿಸಲವೂ 23 ಅಕ್ಷೋಹಿಣಿ ಸೈನ್ಯದಿಂದ, ದುಷ್ಟ ಹಾಗೂ ಭಯಗೊಂಡ ರಾಜರೊಡನೆ ಬಂದು ಸೋತು ಹಿಂತಿರುಗುತ್ತಿದ್ದ. ಪ್ರತಿಸಲವೂ ಜರಾಸಂಧನ ಸ್ಥಿತಿ ಶೋಚನೀಯದಂತೆ, ಎಲ್ಲವನ್ನೂ ಕಳೆದುಕೊಂಡು ಬರಿಕಾಲಲ್ಲಿ ಹಿಂತಿರುಗುವಂತೆ ಮಾಡುತ್ತಿದ್ದ.
- ಅಕ್ರೂರನನ್ನು ಪಾಂಡವರ ಬಳಿ ಕಳುಹಿಸಿದ, ಭೀಮಾರ್ಜುನರನ್ನು ಕರೆಸಿಕೊಂಡ ದ್ವಾರಕೆಗೆ.
- ಗರುಡ ತಂದ ಮೂಲ ರೂಪದ ಕಿರೀಟವನ್ನು ಧರಿಸಿ ಅವನೇ ತಾನೆಂದು ನಿರೂಪಿಸಿದ.
- ದ್ವಾರಕಾ ಮೇಲೆ ದಂಡೆತ್ತಿ ಬಂದ ಹಂಸ, ಡಿಬಿಕ ವಿಚಕ್ರರ ಸಾವಿಗೆ ಕಾರಣನಾದ.
- ಸೃಗಾಲವಾಸುದೇವನ ವಧ. (ಧುಂಧುನಾಮಕ ಅಸುರ)
- ದ್ವಾರಕಾ ನಗರವನ್ನು ನಿರ್ಮಿಸಿ ಸ್ವಜನರನ್ನು ಅಲ್ಲಿ ಸ್ಥಾಪನೆ ಮಾಡಿದ. ಸುವರ್ಣ ನಗರವನ್ನು ದೇವಶಿಲ್ಪಿ ವಿಶ್ವಕರ್ಮನಿಂದ ನಿರ್ಮಿಸಿದ.

- ಕೃಷ್ಣನನ್ನು ಅವಮಾನಿಸಲು ಮಾಡಿದ ದುಷ್ಟರ ಯತ್ನ ವಿಫಲಗೊಳಿಸಿದ. ಜರಾಸಂಧ, ಶಿಶುಪಾಲ, ರುಕ್ಮಿ ಮೊದಲಾದವರನ್ನು ನಿಗ್ರಹಿಸಿದ.
- ರುಕ್ಮಿಣಿ ತಂದೆ ಭೀಷ್ಮಕನಿಗೆ ವಿಶ್ವರೂಪ ತೋರಿಸಿ ತಾನು ಯಾರೆಂದು ನಿರೂಪಿಸಿದ.
- ಜರಾಸಂಧನ ಆದೇಶದಂತೆ ಕೃಷ್ಣನ ಮೇಲೆ ದಂಡೆತ್ತಿ ಬಂದ ಕಾಲಯವನನ ಸೈನ್ಯವನ್ನು ಕೃಷ್ಣ ಬಲರಾಮರು ನಿರ್ನಾಮ ಮಾಡಿದರು. ಇವನನ್ನು ಗೋಮಂತ ಪರ್ವತಕ್ಕೆ ಕರೆದೊಯ್ದು ಕೃಷ್ಣ ಮಲಗಿದ್ದ ಮುಚುಕುಂದನಿಂದ ಭಸ್ಮವನ್ನಾಗಿಸಿದ. ಮುಚಕುಂದನಿಂದ ಸ್ತುತಿಗೊಂಡ.
- ಕಾಲಯವನನನ್ನು ಪಡೆದ ಮೇಲೆ ಪಶ್ಚಾತ್ತಾಪ ಪಟ್ಟ ಗರ್ಗಾಚಾರ್ಯರು ಬಂದು ಶರಣಾದರು.
- ಜರಾಸಂಧಾದಿಗಳು ರುಕ್ಮಿಣಿ ದಕ್ಕದಿರಲು ಮಾಡಿದ ಎಲ್ಲ ಪ್ರಯತ್ನಗಳನ್ನೂ ವಿಫಲಗೊಳಿಸಿದ.
- ಭೀಷ್ಮಕನ ಪುತ್ರಿ ರುಕ್ಮಿಣಿಯು ಪತ್ರ ಬರೆದು ಬ್ರಾಹ್ಮಣನ ಮೂಲಕ ಕಳಿಸಲು, ಬರುವ ಸೂಚನೆಕೊಟ್ಟು ನಂತರ ತಂದು ಮದುವೆಯಾದ. ಅಡ್ಡಿ ಬಂದ ಜರಾಸಂಧಾದಿ ಅನೇಕರನ್ನು ಪರಾಭವಗೊಳಿಸಿ, ರುಕ್ಮಿಯನ್ನು ವಿರೂಪಗೊಳಿಸಿದ.
- ಜಾಂಬವಂತನನ್ನು ಮರ್ದಿಸಿ - ತನ್ನ ನಿಜರೂಪ ತೋರಿ ಸ್ಯಮಂತಕ ಮಣಿಯೊಂದಿಗೆ ಜಾಂಬವತಿಯನ್ನು ಮದುವೆಯಾದ.
- ಅಕ್ರೂರನ ಮೂಲಕ ಧೃತರಾಷ್ಟ್ರನಿಗೆ, ಎಲ್ಲ ಕುವರರನ್ನೂ ಒಂದೇ ರೀತಿ ನೋಡಿಕೊಳ್ಳುವಂತೆ ಆದೇಶ ನೀಡಿದ.
- ಸತ್ಯಭಾಮೆಯೊಂದಿಗೆ ಮದುವೆ. (ಸತ್ರಾಜಿತ್ರಾಜನ ಮಗಳು)
- ಸೂರ್ಯಪುತ್ರಿ ಕಾಲಿಂದಿ, ಕುಂಭಕನ ಪುತ್ರಿ ನೀಲಾ ಹಾಗೂ ನಗ್ನಜಿತನ ಮಗಳಾದ ಸೀತಾ (ಸತ್ಯ) ಇವರನ್ನು ಮದುವೆಯಾದ.
- ಜಯತ್ಸೇನನ ಮಗಳಾದ ಮಿತ್ರವಿಂದೆ, ಧೃಷ್ಟಕೇತುವಿನ ಮಗಳು ಭದ್ರಾ ಹಾಗೂ ಮದ್ರರಾಜನ ಮಗಳಾದ ಲಕ್ಷಣೆಯರನ್ನು ಮದುವೆಯಾದ.
- ಜಾಂಬವಂತೆಯಿಂದ ಸಾಂಬನನ್ನು ಪಡೆದ. (ಕಾಮನ ಅವತಾರಿ)
- ಹಂಸ ಡಿಬಿಕರೊಂದಿಗೆ ಬಂದ ವಿಚಕ್ರ ಅಸುರನ ತಲೆ ತೆಗೆದ, ಹಂಸಡಿಬಿಕರನ್ನೂ ತಮಸ್ಸಿಗೆ ಹಾಕಿದ.
- ಬಲರಾಮನಿಂದ ಹಿಡಿಂಬನನ್ನು ಓಡಿಸಿ, ಸಾತ್ಯಕಿಯಿಂದ ಬ್ರಹ್ಮದತ್ತನನ್ನು ಕೊಲ್ಲಿಸಿದ.
- ಕೃತವರ್ಮನನ್ನು ಭೀಮಾರ್ಜುನರನ್ನು ಅಭಿನಂದಿಸಲೆಂದು ಅವರಲ್ಲಿಗೆ ಕಳುಹಿಸಿದ. (ಪಾಂಡವರು ದ್ರುಪದನನ್ನು ಗೆದ್ದು ಸೆರೆ ಹಿಡಿದಾಗ)
- ದ್ರೌಪದೀ ಸ್ವಯಂವರದಲ್ಲಿ ಪಾಂಡವರನ್ನು ಗುರುತಿಸಿ ಅಭಿನಂದಿಸಿ ಶುಭ ಹಾರೈಸಿದ.
- ಪಾಂಡವರನ್ನು ಹಸ್ತಿನಾಪುರಕ್ಕೆ ಕರೆತಂದು ಧರ್ಮರಾಜಗೆ ಪಟ್ಟಾಭಿಷೇಕ ಮಾಡಿಸಿದ.
- ಪಾಂಡವರನ್ನು ಇಂದ್ರಪ್ರಸ್ಥಕ್ಕೆ ಕರೆದೊಯ್ದು ಅಲ್ಲಿ ಎಲ್ಲ ವ್ಯವಸ್ಥೆಗಳನ್ನೂ ಮಯಾಸುರನಿಗೆ ಆಜ್ಞೆ ಮಾಡಿ ಮಾಡಿಸಿದ. ದಿವ್ಯ ಭವನಗಳನ್ನು ಭವ್ಯ ಸಭೆ, ನಗರವು ನಿರ್ಮಾಣವಾಯಿತು.

- ದ್ವಾರಕೆಯಲ್ಲಿ ಸತ್ರಾಜಿತನನ್ನು ಕೊಂದ ಶತಧನ್ವನನ್ನು ಸಂಹರಿಸಿದ.
- ಸಭೆಯಲ್ಲಿ ನಾರದರು ಶ್ರೀಕೃಷ್ಣನನ್ನು 'ನೀನೇ ಆಶ್ಚರ್ಯ, ನೀನೇ ಧನ್ಯತಮ' ನೆಂದು ಕೊಂಡಾಡಿ ಇವನನ್ನು ಸರ್ವೋತ್ತಮನೆಂದು ಸಾರಿದರು.
- ನರಕಾಸುರನ ಪ್ರಾಗ್ಜೋಷಿಷಪುರಕ್ಕೆ ಹೋಗಿ ಅವನನ್ನು ಅವನ ಪರಿವಾರವನ್ನು ಸಂಹರಿಸಿ ಕನ್ಯೇಯರ ವಿಮೋಚನೆ ಮಾಡಿದ. ಅಲ್ಲಿದ್ದ 16000 ರಾಜಕುಮಾರಿಯರನ್ನು ಗಾಂಧರ್ವವಿಧಿಯಿಂದ ಮದುವೆಯಾದ.
- ರುಕ್ಮಿಣಿ ಪುತ್ರ ಪ್ರದ್ಯುಮ್ನನೊಂದಿಗೆ ರುಕ್ಮಿಪುತ್ರಿ ರುಕ್ಮಾವತಿಯ ಮದುವೆ ಮಾಡಿದ.
- ಸ್ವರ್ಗಲೋಕಕ್ಕೆ ಹೋಗಿ ಸತ್ಯಭಾಮೆಗಾಗಿ ಇಂದ್ರಾದಿಗಳನ್ನು ಗೆದ್ದು ಅಲ್ಲಿಂದ ಪಾರಿಜಾತ ಪುಷ್ಪವನ್ನು ತಂದ.
- ಶೋಣಿತಪುರದಲ್ಲಿ ಶಿವನೊಂದಿಗೆ ಯುದ್ಧಮಾಡಿ ಅವನನ್ನು ಪರಾಜಿತಗೊಳಿಸಿದ.
- ಎಲ್ಲ ಹೆಂಡಂದಿರಲ್ಲಿ ಹತ್ತು ಗಂಡು, ಒಂದು ಹೆಣ್ಣನಂತೆ ಮಕ್ಕಳನ್ನು ಪಡೆದ. ಒಬ್ಬೊಬ್ಬರಲ್ಲೂ ಒಬ್ಬ ಕೃಷ್ಣ ರೂಪದಿಂದಿದ್ದು ಎಲ್ಲರನ್ನು ಸಂತೋಷಪಡಿಸಿದ.
- ಮಹಾರಕ್ಕಸರಾದ ಗೋಪತಿ, ತಾಲಕೇತು ಮೊದಲಾದವರನ್ನು ಸಂಹರಿಸಿದ.
- ಸಾಂಬ ಹಾಗೂ ಪ್ರದ್ಯುಮ್ನರಿಂದ ನಾಗಲೋಕ ಹಾಗೂ ಸುರಲೋಕಗಳನ್ನು ಗೆಲ್ಲುವಂತಾಗಿಸಿದ.
- ಪೌಂಡ್ರಕ ವಾಸುದೇವನನ್ನು (ವೇನನಾಮಕ ಅಸುರ ) ಸಂಹರಿಸಿದ.
- ಬಹುರೂಪಗಳಿಂದಿದ್ದ ಶ್ರೀಕೃಷ್ಣ ದ್ವಾರಕೆಯಲ್ಲಿ ನಾರದರಿಗೆ ವಿಶ್ವರೂಪ ತೋರಿದ.
- ಅರ್ಜುನನಿಗೆ ಮರ್ಮ ತಿಳಿಸಿ ತನ್ನ ತಂಗಿ ಸುಭದ್ರೆಯೊಂದಿಗೆ ಮದುವೆ ಮಾಡಿಸಿದ.
- ಅರ್ಜುನನಿಂದ ಖಾಂಡವವನವನ್ನು ದಹಿಸುವಂತೆ ಮಾಡಿದ. ಅಗ್ನಿಯಿಂದ ದಿವ್ಯ ಚಕ್ರವನ್ನು ಪಡೆದ. ವರುಣನಿಂದ ಕೌಮೋದಕಿ ಗದೆ ಪಡೆದ.
- ಒಂದೇ ದಿನದಲ್ಲಿ ಅಶ್ವಮೇಧಯಾಗವನ್ನು (ಸಮಂತ ಪಂಚಕದಲ್ಲಿ) ಮಾಡಿ ಅದ್ಭುತ ಚರ್ಯೆಯನ್ನು ಪ್ರಕಟಿಸಿದ.
- ದಂತವಕ್ರ (ಹಿರಣ್ಯಾಕ್ಷ-ವಿಜಯಾವೇಶಿ) ಹಾಗೂ ವಿದೂರಥ (ದೈತ್ಯ) ರನ್ನು ಸಂಹರಿಸಿದ.
- ತನ್ನ ಬಾಲ್ಯಸ್ನೇಹಿತನಾದ ಕುಚೇಲನು (ಸುಧಾಮ) ದ್ವಾರಕೆಗೆ ಬಂದಾಗ ಸತ್ಕರಿಸಿ ಅವನನ್ನು ಉದ್ಧಾರಮಾಡಿದ.
- ಭೀಮಸೇನನಿಂದ ಜರಾಸಂಧನನ್ನು ಕೊಲ್ಲಿಸಿದ.
- ಜರಾಸಂಧ ಸೆರೆಯಲ್ಲಿಟ್ಟಿದ್ದ ನಿರಪರಾಧಿ 20 ಸಾವಿರ ರಾಜಪುತ್ರರನ್ನು ಬಿಡಿಸಿ ಅವರನ್ನು ಸಂಕಷ್ಟದಿಂದ ಪಾರುಮಾಡಿದ.
- ಧರ್ಮರಾಜನಿಂದ ಭೀಷ್ಮರ ಆದೇಶದಂತೆ ರಾಜಸೂಯಯಾಗದಲ್ಲಿ ಅಗ್ರಪೂಜೆ ಸಹದೇವನಿಂದ ಮಾಡಿಸಿ ಕೊಂಡ.
- ಹದ್ದುಮೀರಿ ನಡೆದ ಶಿಶುಪಾಲನನ್ನು ತನ್ನ ಚಕ್ರದಿಂದ ತಲೆತೆಗೆದ. (ಹಿರಣ್ಯಕಶಿಪುವಿನ ಅವತಾರಿ - ಜಯಾವೇಶ)
- ರಾಜಸೂಯಯಾಗದಲ್ಲಿ ತನ್ನ ರೂಪಗಳಾದ ಪರಶುರಾಮ ಹಾಗೂ ವೇದವ್ಯಾಸರೊಂದಿಗಿದ್ದು ಅವರಲ್ಲಿ ಭೇದವಿಲ್ಲವೆಂದು ಜ್ಞಾನಿಗಳಿಗೆ ತೋರಿಸಿದ.

- ದ್ವಾರಕೆಗೆ ಮುತ್ತಿಗೆ ಹಾಕಲು ಬಂದ ಸಾಲ್ವನನ್ನು ಸಂಹರಿಸಿದ.
- ದ್ರೌಪದಿಗೆ ವಸ್ತ್ರಾಪಹಾರ ಸಂದರ್ಭದಲ್ಲಿ ಅಕ್ಷಯ ವಸ್ತ್ರವಿತ್ತು ಅವಳ ಮಾನ ಸಂರಕ್ಷಣೆ ಮಾಡಿದ.
- ವನವಾಸದಲ್ಲಿದ್ದ ಪಾಂಡವರನ್ನು ಕಾಮ್ಯಕವನದಲ್ಲಿ ಸಪರಿವಾರನಾಗಿ ಹೋಗಿ ಸಂತೈಸಿ ಧೈರ್ಯ ತುಂಬಿ ಶುಭ ಕೋರಿದ.
- ಪುತ್ರಪ್ರಾಪ್ತಿಗಾಗಿ ಹಿಮಾಲಯದಲ್ಲಿ ಶಿವನನ್ನು ಕುರಿತ ತಪಸ್ಸನ್ನಾಚರಿಸುವ ನಾಟಕ ಮಾಡಿದ. (ಸಾವಿರಾರು ಮಕ್ಕಳಾಗಿದ್ದರು)
- ಧರ್ಮರಕ್ಷಣೆಗಾಗಿ ಬಿಂದುಸರೋವರದ ಬಳಿ ಅನೇಕ ಯಾಗಗಳನ್ನು ಮಾಡಿದ.
- ದ್ವಾರಕೆಯ ಮೇಲೆ ದಂಡೆತ್ತಿಬಂದ ಉನ್ಮತ್ತ ದುಷ್ಟ ಅಸುರ ಪೌಂಡ್ರಕ (ವೇನ ಅಸುರ) ವಾಸುದೇವನನ್ನು ಸಂಹರಿಸಿದ.
- ಅಸುರ ಏಕಲವ್ಯ(ಮಣಿಮಾನ್) ನನ್ನು ಹಾಗೂ ಸುದಕ್ಷಿಣ(ಕಾಶಿರಾಜನ ಮಗ)ರು ಯುದ್ಧಕ್ಕೆ ಬರಲು ಅವರನ್ನು ಸಂಹರಿಸಿದ.
- ಪಾಂಡವರು ವನವಾಸದಲ್ಲಿದ್ದಾಗ ದುರ್ವಾಸರು ಪರಿವಾರದೊಂದಿಗೆ ಬಂದು ಪರೀಕ್ಷಿಸಲು, ದ್ರೌಪದಿಯ ಪ್ರಾರ್ಥನೆಗೆ ಬಂದು ಅಕ್ಷಯ ಪಾತ್ರೆಯಿಂದ ಅಕ್ಷಯ ಮಾಡಿ ಅವರ ಮಾನ ಉಳಿಸಿದ.
- ಬಾಣಾಸುರನನ್ನು ಹಾಗೂ ಅವನ ಸಹಾಯಕ್ಕೆ ಬಂದ ಅಗ್ನಿದೇವತೆಗಳನ್ನು ಸೋಲಿಸಿ ಹಿಮ್ಮೆಟ್ಟಿದ.
- ಪಾಂಡವರು ವನವಾಸಕಾಲದಲ್ಲಿ ಪ್ರಭಾಸಕ್ಕೆ ಬಂದಾಗ ಕಂಡು ಸಂತೈಸಿದ.
- ಪಾಂಡವರು ಅಜ್ಞಾತವಾಸದಲ್ಲಿದಾಗ (ನಂತರ) ಅಭಿಮನ್ಯುವಿಗೆ ಉತ್ತರೆಯೊಂದಿಗೆ ವಿವಾಹ ಮಾಡಿಸಿದ.
- ಸಂಜಯನ ಮೂಲಕ ಧೃತರಾಷ್ಟ್ರನಿಗೆ ಎಚ್ಚರಿಕೆಯ ಸಂದೇಶವನ್ನು ಕಳಿಸಿದ.
- ಕೌರವರೊಂದಿಗಿನ ಯುದ್ಧದ ಬಗ್ಗೆ ಪಾಂಡವರಲ್ಲಿ ಮಂತ್ರಾಲೋಚನೆ.
- ದುರ್ಯೋಧನ, ಹಾಗೂ ಅರ್ಜುನ ದ್ವಾರಕೆಗೆ ಯುದ್ಧ ಸಹಾಯ ಕೇಳಲು ಬಂದಾಗ ಅವರವರ ಯೋಗ್ಯತೆಗೆ ತಕ್ಕಂತೆ ಸಹಾಯ ಹಸ್ತ ನೀಡಿದ.
- ಅರ್ಜುನನ ರಥದ ಸಾರಥಿಯಾಗಲು ಒಪ್ಪಿ ಯುದ್ಧದ ಸೂತ್ರಧಾರನಾದ.
- ಪಾಂಡವರ ಹಾಗೂ ದ್ರೌಪದಿಯ ಅಭಿಪ್ರಾಯಗಳನ್ನಾಲಿಸಿ ಸಂಧಿಗೆಂದು ಹಸ್ತಿನಾವತಿಗೆ ತೆರಳಿದ.
- ಹಸ್ತಿನಾವತಿಯಲ್ಲಿ ಸ್ವಾಗತ. ಆದರೆ ವಿದುರನ ಮನೆಯಲ್ಲಿ ಆತಿಥ್ಯವನ್ನು ಸ್ವೀಕರಿಸಿದ.
- ಕೌರವ ಸಭಾಪ್ರವೇಶ ಮಾಡಿದ. ಸಂಧಿಯ ಸಂದರ್ಭದಲ್ಲಿ ಕಟ್ಟಿ ಹಾಕಲು ಬಂದ ದುರ್ಯೋಧನಾದಿಗಳ ದುಷ್ಟಬುದ್ಧಿಗೆ ಉತ್ತರಿಸಿ, ಧೃತರಾಷ್ಟ್ರಾದಿಗಳಿಗೆ ತನ್ನ ವಿಶ್ವರೂಪವನ್ನು ತೋರಿಸಿದ.
- ದುಷ್ಟದ್ಯುಮ್ನನನ್ನು ಪಾಂಡವರ ಸೈನ್ಯಾಧಿಪತಿಯನ್ನಾಗಿ ಮಾಡಿದ.
- ಕರ್ಣನಿಗೆ ಹಿತೋಪದೇಶ ಮಾಡಿ, ಕುಂತಿಯೊಂದಿಗೆ ಸಮ್ಮಿಲನ ಮಾಡಿಸಿದ.
- ಕುರುಕ್ಷೇತ್ರ ಯುದ್ಧಭೂಮಿಯಲ್ಲಿ ಅರ್ಜುನನಿಗೆ ಗೀತೋಪದೇಶ. ತನ್ನ ವಿಶ್ವರೂಪವನ್ನು ತೋರಿಸಿದ.

- ವಿಶ್ವರೂಪ ತೋರಿಸಿದಾಗ ಕೃಷ್ಣನ ವಯಸ್ಸು 68 ವರ್ಷ 7 ತಿಂಗಳು.
- ತನ್ನ ಕುಡಿನೋಟದಿಂದ ಶಂಖನಾದದಿಂದ ಹದಿನೆಂಟು ಅಕ್ಷೋಹಿಣಿ ಸೈನ್ಯ ಹಾಗೂ ವೀರರ ಆಯುಷ್ಯವನ್ನು ಸೆಳೆದುಕೊಂಡ.
- ಭೀಷ್ಮನ ಪ್ರತಿಜ್ಞೆಯಾದ 'ಕೃಷ್ಣನ ಕೈಯಲ್ಲಿ ಆಯುಧ ಹಿಡಿಸುವೆ' ಎಂಬುದನ್ನು ಸತ್ಯ ಮಾಡಿದ.
- ಅರ್ಜುನನನ್ನು ಕನಸಿನಲ್ಲಿ ಶಿವನ ಬಳಿ ಕರೆದೊಯ್ದು ಅವನ ಅನುಗ್ರಹ ಕೊಡಿಸಿದ.
- ಭಗದತ್ತ ಬಿಟ್ಟ ವೈಷ್ಣವಾಸ್ತ್ರವನ್ನು ಮಾಲೆಯನ್ನಾಗಿಸಿ ಕೊರಳಲ್ಲಿ ಧರಿಸಿದ. ತನ್ನ ಮಾಯೆಯಿಂದ ಅಂಧಕಾರವನ್ನು ಸೃಷ್ಟಿಸಿ ಅಭಿಮನ್ಯುವಿನ ಸಾವಿಗೆ ಕಾರಣನಾದ.
- ಜಯದ್ರಥನನ್ನು ಅರ್ಜುನನಿಂದ ಕೊಲ್ಲಿಸಿ ಜೊತೆಗೆ ಅವನ ತಂದೆಯನ್ನು ಕೊಲ್ಲಿಸಿದ.
- ಘಟೋತ್ಕಚನನ್ನು ಕರೆಸಿ ಕರ್ಣ ದುರ್ಯೋಧನಾದಿಗಳೊಂದಿಗೆ ಘೋರ ಯುದ್ಧವಾಡಿಸಿ ಶಕ್ತ್ಯಾಯುಧದಿಂದ ಅರ್ಜುನನನ್ನು ಉಳಿಸಿದ.
- ಅಶ್ವತ್ಥಾಮರು ಬಿಟ್ಟ ನಾರಾಯಣಾಸ್ತ್ರವನ್ನು ಧರಿಸಿ ಎಲ್ಲರನ್ನು ಕಾಪಾಡಿದ.
- ಕರ್ಣ ಬಿಟ್ಟ ಸರ್ಪಾಸ್ತ್ರದಿಂದ ಅರ್ಜುನನನ್ನು ಕಾಪಾಡಿದ.
- ಯುಧಿಷ್ಠಿರ ಹಾಗೂ ಅರ್ಜುನರಲ್ಲಿ ಉಂಟಾದ ಭಿನ್ನಾಭಿಪ್ರಾಯವನ್ನು ಪರಿಹರಿಸಿದ.
- ಅರ್ಜುನನಿಂದ ಕರ್ಣನನ್ನು ಕೊಲ್ಲಿಸಿ ಇದು ಧರ್ಮವೆಂದು ಸಾರಿದ.
- ಭೀಮಸೇನ ದುರ್ಯೋಧನನನ್ನು ಕೊಂದದ್ದು ಸರಿಯೆಂದು ಸಮರ್ಥಿಸಿ ಬಲರಾಮನನ್ನು ಸಮಾಧಾನ ಮಾಡಿದ.
- ಯುದ್ಧ ಮುಗಿದ ನಂತರ ಮೊದಲು ಅರ್ಜುನನನ್ನು ರಥದಿಂದಿಳಿಸಿ ನಂತರ ತಾನು ಇಳಿದು ಆ ದಿವ್ಯರಥವು ದಗ್ಧವಾದವನ್ನು ತೋರಿಸಿದ.
- ಯುದ್ಧದ ಅಂತ್ಯದವರೆಗೂ ಹೆಜ್ಜೆ ಹೆಜ್ಜೆಗೂ ಪಾಂಡವರನ್ನು ಕಾಪಾಡಿ ಧರ್ಮಕ್ಕೆ ಜಯ ಕೊಡಿಸಿದ.
- ಬ್ರಹ್ಮಶಿರೋಸ್ತ್ರವನ್ನು ಬಿಟ್ಟ ಅಶ್ವತ್ಥಾಮರನ್ನು ಶಪಿಸಿದ, ದ್ರೌಪದಿಗೆ ಸಂತೈಸಿ ಕಾಪಾಡಿದ.
- ಧೃತರಾಷ್ಟ್ರ ಗಾಂಧಾರಿಯನ್ನು ಸಂತೈಸಿ ಸಮಾಧಾನ ಪಡಿಸಿದ. ಗಾಂಧಾರಿಯಿಂದ ಶಾಪವನ್ನು ಪಡೆದ.
- ಭೀಮನಿಂದ ಅಶ್ವತ್ಥಾಮರನ್ನು ಬಂಧಿಸಿ ಅವರು ಮಾಡಿದ ತಪ್ಪಿಗೆ ಶಿಕ್ಷೆ ಕೊಡಿಸಿದ.
- ಧರ್ಮರಾಜನಿಗೆ ಹಸ್ತಿನಾವತಿಯ ಸಾಮ್ರಾಟನಾಗಿ ವ್ಯಾಸರೊಂದಿಗೆ ಪಟ್ಟಾಭಿಷೇಕ ಮಾಡಿದ.
- ಭೀಷ್ಮರ ಬಳಿಗಿದ್ದು ಧರ್ಮರಾಜಾದಿಗಳಿಗೆ ವಿಷ್ಣುಸಹಸ್ರನಾಮ, ಅನೇಕ ತತ್ತ್ವಗಳನ್ನು ಬೋಧಿಸಿದ.
- ಅರ್ಜುನನಿಗೆ ಅನುಗೀತೆಯನ್ನು ಉಪದೇಶ ಮಾಡಿದ.
- ಭೀಮನ ಮೂಲಕ ಕಲಿಯನ್ನು ನಿಗ್ರಹಿಸುವಂತೆ ಮಾಡಿದ.
- ಉದಂಕನಿಗೆ ತನ್ನ ನಿಜರೂಪವನ್ನು ತೋರಿ ಅನುಗ್ರಹಿಸಿದ.
- ಕುಂತಿಯ ಪ್ರಾರ್ಥನೆಗೆ ಉತ್ತರಾಗರ್ಭದಲ್ಲಿ ಜನಿಸಿದ ಸತ್ತ ಪರೀಕ್ಷಿತನನ್ನು ಬದುಕಿಸಿ ವಂಶ ಮುಂದುವರೆಯುವಂತಾಗಿಸಿದ.

- ಧರ್ಮರಾಜನಿಂದ ಅಶ್ವಮೇಧಾದಿ ಯಾಗಗಳನ್ನು ಮಾಡಿಸಿದ.
- ಕುರುಕ್ಷೇತ್ರದಲ್ಲಿ ಬೃಹತ್ ಯಾಗವನ್ನು ಮಾಡಿದ. ಬ್ರಹ್ಮರುದ್ರಾದಿ ದೇವತೆಗಳು ಋಷಿಮುನಿಗಳು ಆಗಮಿಸಿ ಕೃಷ್ಣನ ಅನುಗ್ರಹ ಪಡೆದರು. ಕೃಷ್ಣ ಯಾಗಮಾಡಿದ್ದು 12 ವರ್ಷಕಾಲ.
- ಉದ್ಧವನಿಗೆ ಜ್ಞಾನೋಪದೇಶ ಮಾಡಿ ಉದ್ಧರಿಸಿದ.
- ತನ್ನ ಯಾದವ ಕುಲವನ್ನು ಮುಗಿಸಲು ಋಷಿಗಳಿಂದ ಶಾಪ ಕೊಡಿಸಿ ಪರಿಹಾರ ಸೂಚಿಸಿದ. ಹಾಗೂ ಪ್ರಭಾಸಕ್ಕೆ ಕರೆದೊಯ್ದು ಕುಲವನ್ನು ಉಪಸಂಹರಿಸಿದ.
- ತಾನು ಜರ ಬಿಟ್ಟ ಬಾಣದ ನೆಪದಿಂದ ತನ್ನ ದೇಹವನ್ನು ಬಿಟ್ಟವನಂತೆ ನಟಿಸಿ ಪರಂಧಾಮಕ್ಕೆ ತೆರಳಿದ. ದೇವತೆಗಳ ಪ್ರಾರ್ಥನೆಯಂತೆ ತನ್ನ ಅವತಾರದ ಕಾರ್ಯವನ್ನು ಮುಕ್ತಾಯ ಮಾಡಿದ.
- ಶ್ರೀಕೃಷ್ಣ ಭೂಮಿಯಲ್ಲಿ ಎಲ್ಲರಿಗೂ ಕಾಣಿಸಿಕೊಂಡದ್ದು ನೂರಾಆರುವರ್ಷ ಆರುತಿಂಗಳು. ಭಗವಂತನ ಎಲ್ಲ ಅವತಾರಗಳೂ ನಿತ್ಯ. (ಪ್ರಾದುರ್ಭಾವವೇ ಕಾಣಿಸಿಕೊಳ್ಳುವುದಾಗಿದೆ.)
- ಈ ಕಲಿಯುಗದ ಪರದೈವ ಶ್ರೀಕೃಷ್ಣ. ತುಂಬಾ ಹತ್ತಿರದ ಅವತಾರವೂ ಇದೇಯಾಗಿದೆ. ಹೀಗಾಗಿ ಜಗತ್ತಿನ ಆರಾಧ್ಯದೈವನೂ ಇವನೇ ಆಗಿರುವ. ಇವನ ಬೇರೆ ರೂಪಗಳಾದ ಪರಶುರಾಮ ಹಾಗೂ ವೇದವ್ಯಾಸರು ಚಿರಂಜೀವಿಗಳಾದರೆ ಅದೃಶ್ಯರೂಪ ಈ ಯಾದವ ಕೃಷ್ಣ
- ಶ್ರೀ ವ್ಯಾಸರಿಂದ ರಚಿತ ಮಹಾಭಾರತವೆ ಶ್ರೀಕೃಷ್ಣನ ಆಕೃತಿ. ಇದರಂತೆ ಶ್ರೀಮದ್ಭಾಗವತವೂ ಕೃಷ್ಣನ ದಿವ್ಯಾಕೃತಿಯಾಗಿದೆ. ಸರ್ವಾತ್ಮನಾ ನೆಲೆಸಿ ಹೇಳುವ, ಕೇಳುವ ಮತ್ತು ಇವೆರಡಕ್ಕೂ ಅನುಕೂಲ ಮಾಡಿಕೊಡುವರಿಗೆ ಪರಮಸುಖ ಗತಿಯನ್ನು ಕಲ್ಪಿಸಲು ಕಟಿಬದ್ಧನಾಗಿರುವ.
- ಶ್ರೀಕೃಷ್ಣ ಗ್ರಂಥಗಳಲ್ಲಲ್ಲದೆ ನಂಬಿದ ಭಕ್ತರ ಹೃದಯಗುಹಾವಾಸಿಯಾಗಿರುವ, ಭಾರತದ ನೆಲದ ಕಣಕಣಗಳಲ್ಲಿ ಅಣುರೇಣುತೃಣಕಾಷ್ಠಗಳಲ್ಲಿ ಸರ್ವತ್ರ ನೆಲೆಸಿ, ಶ್ರೀಮದಾಚಾರ್ಯ ಮಧ್ವರಿಂದ ಸರ್ವದಾ ಆರಾಧಿತನಾಗಿರುವ. ಇದಕ್ಕೆ ಸಂಕೇತವಾಗಿ ಉಡುಪಿಯಲ್ಲಿ ಮುದ್ದುಕೃಷ್ಣನನ್ನು ಪ್ರತಿಷ್ಠಾಪಿಸಿ ಆರಾಧಿಸುತ್ತಾ ಸಮಾಜಕ್ಕೂ ಅಭೀಷ್ಟಗಳು ವೃಷ್ಟಿಸಲೆಂದು ಪ್ರಾರ್ಥಿಸುತ್ತ ಅನುಗ್ರಹಿಸಿರುವರು.

ಶ್ರೀಕೃಷ್ಣನ ಆಯುಧಗಳು : ಶಾರ್ಙ್ಗ (ಧನಸ್ಸು), ನಂದಕ (ಕಡ್ಗ), ಸುದರ್ಶನ (ಚಕ್ರ), ಪಾಂಚಜನ್ಯ (ಶಂಖ)

(ಈ ಮೇಲಿನ ಅಂಶಗಳು ಶ್ರೀಮದಾನಂದತೀರ್ಥರು ರಚಿಸಿದ ಮಹಾಭಾರತ ತಾತ್ಪರ್ಯ ನಿರ್ಣಯಾನುಸಾರವಾಗಿ ಸಂಗ್ರಹಿಸಿದೆ. ಇಲ್ಲಿ ಕೆಲವು ಹಿಂದೆ ಮುಂದೆ ಆಗಿರಬಹುದು. ದೋಷ ಕಂಡಲ್ಲಿ ನನ್ನಿಂದಾಗಿರುತ್ತದೆ. ಸ್ತ್ರೀಪುರುಷರು ಆಗಾಗಲಾದರೂ ಈ ಸಂಗ್ರಹವನ್ನು ಓದುತ್ತಿದ್ದಲ್ಲಿ ಶ್ರೀಕೃಷ್ಣನ ಅನುಗ್ರಹ ನಿಶ್ಚಿತವೆಂದು ಭಾವಿಸಬಹುದು).

# ಪರಿಶಿಷ್ಟ - 2

## ಪಂಚಪಾಂಡವರ ಕಿರುದರುಶನ

| ಪಾಂಡವರು | ಯುಧಿಷ್ಠಿರ | ಭೀಮ | ಅರ್ಜುನ | ನಕುಲ | ಸಹದೇವ |
|---|---|---|---|---|---|
| ಮೂಲರೂಪ | ಯಮಧರ್ಮ | ವಾಯುದೇವ | ಇಂದ್ರ | ಅಶ್ವಿನಿದೇವತೆ | ಅಶ್ವಿನಿ ದೇವತೆ |
| ಕಕ್ಷಾ (ತಾರತಮ್ಯ) | 12 | 3 | 8 | 18 | 18 |
| ವಾಯುದೇವರ ಆವೇಶ | ಸೌಮ್ಯರೂಪ | ಪೂರ್ಣರೂಪ | ವೀರರೂಪ | ಶೃಂಗಾರರೂಪ | ಸುನೀತರೂಪ |
| ಇಂದ್ರರಾಗಿದ್ದಾಗ (ಹೆಸರು) | ಸತ್ಯಜಿತ್ | ರೋಚನ | ಪುರಂದರ (6,7ನೇ ಮನ್ವಂತರ) | ತ್ರಿಶಿಖ | ಶಂಭು |
| ಆಧ್ಯಾತ್ಮದಲ್ಲಿ (ಸಂಕೇತ) | ಧರ್ಮ | ಜ್ಞಾನಾದಿ ದಶ ಗುಣ | ಶ್ರವಣಾದಿ ತ್ರಯಗುಣ | ವಿನಯ | ಶೀಲ |
| ತಂದೆ/ತಾಯಿ | ಪಾಂಡುರಾಜ/ಕುಂತಿ | ಪಾಂಡುರಾಜ/ಕುಂತಿ | ಪಾಂಡುರಾಜ/ಕುಂತಿ | ಪಾಂಡುರಾಜ/ಮಾದ್ರಿ | ಪಾಂಡುರಾಜ/ಮಾದ್ರಿ |
| ಜನನಕಾಲ | ಪಂಚಮಿ, ಜ್ಯೇಷ್ಠ ನಕ್ಷತ್ರ, ಅಭಿಜಿತ್ ಮುಹೂರ್ತ | ಫಾಲ್ಗುಣ ಮಾಸದ ಶುದ್ಧ ತ್ರಯೋದಶಿ ಮಧ್ಯಾಹ್ನ | ಫಾಲ್ಗುಣಮಾಸ, ಫಲ್ಗುಣನಕ್ಷತ್ರ ಸಂಧಿಕಾಲ | ನಕುಲ ಸಹದೇವರ ಜನನ ಏಕಕಾಲದಲ್ಲಾಯಿತು (ಅವಳಿ ಮಕ್ಕಳು) | |

| ಪಾಂಡವರು | ಯುಧಿಷ್ಠಿರ | ಭೀಮ | ಅರ್ಜುನ | ನಕುಲ | ಸಹದೇವ |
|---|---|---|---|---|---|
| ಪಾಂಡು ದೇಹ ತ್ಯಾಗದಲ್ಲಿ ಪಾಂಡವರ ವಯಸ್ಸು | 16 ವರ್ಷ | 15 ವರ್ಷ | 14 ವರ್ಷ | 13 ವರ್ಷ | 13 ವರ್ಷ |
| ಹಸ್ತಿನಾವತಿಗೆ ಬಂದಾಗ(17 ದಿನಗಳ ನಂತರ) | 16 ವರ್ಷ | 15 ವರ್ಷ | 14 ವರ್ಷ | 13 ವರ್ಷ | 13 ವರ್ಷ |
| ಬಾಲ್ಯ-ಶಿಕ್ಷಣ (ನಾರಾಯಣಾಶ್ರಮದಲ್ಲಿ) | ಶುಕಾಚಾರ್ಯ | ಶುಕಾಚಾರ್ಯ | ಶುಕಾಚಾರ್ಯ | ಶುಕಾಚಾರ್ಯ | ಶುಕಾಚಾರ್ಯ |
| ಹಸ್ತಿನಾವತಿಯಲ್ಲಿ ಪ್ರಾರಂಭಿಕ ಗುರು | ಕೃಪಾಚಾರ್ಯ ಭೀಷ್ಮ | ಕೃಪಾಚಾರ್ಯ ಭೀಷ್ಮ | ಕೃಪಾಚಾರ್ಯ ಭೀಷ್ಮ | ಕೃಪಾಚಾರ್ಯ ಭೀಷ್ಮ | ಕೃಪಾಚಾರ್ಯ ಭೀಷ್ಮ |
| ನಂತರದ ಗುರು (ಶಸ್ತ್ರಾಭ್ಯಾಸ) | ದ್ರೋಣಾಚಾರ್ಯ | ದ್ರೋಣಾಚಾರ್ಯ ಬಲರಾಮ | ದ್ರೋಣಾಚಾರ್ಯ ಶ್ರೀಕೃಷ್ಣ | ದ್ರೋಣಾಚಾರ್ಯ | ದ್ರೋಣಾಚಾರ್ಯ ಉದ್ಧವ |
| ಅರಗಿನ ಮನೆಯಲ್ಲಿದ್ದಾಗ | 29 ವರ್ಷ | 28 ವರ್ಷ | 27 ವರ್ಷ | 26 ವರ್ಷ | 26 ವರ್ಷ |
| ದ್ರೌಪದೀ ಸ್ವಯಂವರದಲ್ಲಿ | 31 ವರ್ಷ | 30 ವರ್ಷ | 29 ವರ್ಷ | 28 ವರ್ಷ | 28 ವರ್ಷ |

| ಪಾಂಡವರು | ಯುಧಿಷ್ಠಿರ | ಭೀಮ | ಅರ್ಜುನ | ನಕುಲ | ಸಹದೇವ |
|---|---|---|---|---|---|
| ಮಡದಿಯರು | ದ್ರೌಪದಿ (ಶ್ಯಾಮಲ), ದೇವಕಿ, ಶೈಭ್ಯ | ದ್ರೌಪದಿ (ಭಾರತಿ), ಹಿಡಿಂಬಾ, ಜಲಂಧರಾ (ಕಾಳಿ), 24 ಮಡದಿಯರು | ದ್ರೌಪದಿ(ಶಚಿ),ಸುಭದ್ರಾ, ಉಲೂಪಿ, ಚಿತ್ರಾಂಗದೆ | ದ್ರೌಪದಿ (ಉಷಾ), ಪಾರ್ವತಿ, | ದ್ರೌಪದಿ (ಉಷಾ), ವಿಜಯಾ, ಭಾನುಮತಿ |
| ಮಕ್ಕಳು | ಪ್ರತಿವಿಂಧ್ಯ (ದ್ರೌ), ಯೌಧೇಯ | ಶ್ರುತಸೋಮ(ದ್ರೌ), ಘಟೋತ್ಕಚ, ಸರ್ವಗ, ಶರ್ವತ್ರಾತ | ಶ್ರುತಕೀರ್ತಿ(ದ್ರೌ), ಅಭಿಮನ್ಯು, ಇರಾ-ವಾನ್, ಬಭ್ರುವಾಹನ | ಶತಾನೀಕ(ದ್ರೌ), ನಿರಮಿತ್ರ | ಶ್ರುತಸೇನ(ದ್ರೌ), ಸುಹೋತ್ರ |
| ಇಂದ್ರಪ್ರಸ್ಥದಲ್ಲಿ ಪಟ್ಟಾಭಿಷೇಕ | 37 ವರ್ಷ (ಮಹಾರಾಜ) | 36 ವರ್ಷ (ಯುವರಾಜ) | – | – | – |
| ಜರಾಸಂಧ ಬಳಿ ದ್ವಂದ್ವಯುದ್ಧಕ್ಕೆ ಹೋದಾಗ | – | 56 ವರ್ಷ | 55 ವರ್ಷ | – | – |
| ರಾಜಸೂಯದಲ್ಲಿ ವಿಜಯಯಾತ್ರೆ | – | ಪೂರ್ವದಿಕ್ಕಿಗೆ, ದಾಶಾರ್ಣ, ಪುಲಿಂದ ಚೇದಿ, ವಿದೇಹ, ಕಿರಾತ ಅಂಗ, ಮಗಧ, ಪುಂಡ್ರ, ಯವನ, ಮುಂ | ಉತ್ತರದಿಕ್ಕಿಗೆ ಪಾಗ್ಜ್ಯೋತಿಷ, ತ್ರಿಗರ್ತ ಕಿಂಪುರುಷ, ಇಲಾವೃತ ಪಾಂಚಾಲ, ಉಶೀನರ, ಕೇಕಯ, ಚೀನ, ಸಾಲ್ವ, ಮುಂ. | ಪಶ್ಚಿಮದಿಕ್ಕಿಗೆ, ರೋಹಿತ, ಶಿಬಿ, ಪಾಂಚಾಲ ಮದ್ರದೇಶ, ದಶಾರ್ಣ, ಮಾಳವ, ಬ್ರಹ್ಮವರ್ತ, ಯಾಮುನ, ಮತ್ಸ್ಯ ಸೌವೀರ, ಗಾಂಧಾರ ಆನರ್ತ, ಮುಂ. | ದಕ್ಷಿಣದಿಕ್ಕಿಗೆ, ಶೂರಸೇನ, ಆಂಧ್ರ ಮಾಹಿಷ್ಮತಿ, ಲಂಕಾ ಪಾಂಡ್ಯ, ದ್ರಮಿಲ, ಅಶ್ಮಕ, ವಿದರ್ಭ ಮುಂ. |

| | | | | | |
|---|---|---|---|---|---|
| ಯಾಗದಲ್ಲಿ | 58 ವರ್ಷ | 57 ವರ್ಷ | 56 ವರ್ಷ | 55 ವರ್ಷ | 55 ವರ್ಷ |
| ರಥ/ಧ್ವಜ/ ಸಾರಥಿ | | ವಿಶೋಕ | ದಿವ್ಯರಥ/ಹನುಮಂತ ಪೂರು, ಶ್ರೀಕೃಷ್ಣ | ಶರಭ, (ಕಾಂಭೋಜ-ದೇಶದ ಕುದುರೆಗಳು) | |
| ಮಾಡಿದ ಪ್ರತಿಜ್ಞೆ (ದ್ರೌಪದಿ ವಸ್ತ್ರಾಪಹರಣ ಸಂದರ್ಭ) | – | ದುರ್ಯೋಧನನ ತೊಡೆಮುರಿಯಲು, ದುಃಶಾಸನನ ಎದೆ ಸೀಳಲು, ಎಲ್ಲ ನೂರು ಕೌರವರ ವಧ | ಕರ್ಣನ ಸಂಹಾರ | – | ಶಕುನಿಯ ಸಂಹಾರ |
| ಪ್ರಧಾನ ಆಯುಧ | – | ಗದಾ (ಸರ್ವವಿದ್ಯಾಪ್ರವೀಣ) | ಗಾಂಡೀವ, ಅಕ್ಷಯ ಬತ್ತಳಿಕೆ ಪಾಶು ಪತಾಸ್ತ್ರಮುಂ. | ವೈಷ್ಣವ ಧನಸ್ಸು | |
| ಶಂಖದ ಹೆಸರು | ಅನಂತವಿಜಯ | ಪೌಂಡ್ರ | ದೇವದತ್ತ | ಸುಘೋಷ | ಮಣಿಪುಷ್ಪ |
| ಅಜ್ಞಾತವಾಸದಲ್ಲಿದ್ದಾಗಿನ ಹೆಸರು | ಕಂಕ (ತ್ರಿದಂಡಿ) | ಬಲ್ಲವ (ವಲಲ) | ಬೃಹನ್ನಳೆ | ಗ್ರಂಥಿಕ (ದಾಮಗ್ರಂಥಿ) | ತಂತ್ರಿಪಾಲ (ಅರಿಷ್ಟನೇಮಿ) |
| ಕೆಲಸ | ರಾಜಹಿತೈಷಿ (ಯತಿ) | ಅಡಿಗೆ (ಸೂದ) | ನರ್ತನಾದಿ (ನಪುಂಸಕ) | ಅಶ್ವಪಾಲಕ (ಸೂತ) | ಗೋರಕ್ಷಕ (ಗೋಪಾಲಕ) |
| ಗುಪ್ತನಾಮ | ಜಯ | ಜಯಂತ | ವಿಜಯ | ಜಯತ್ಸೇನ | ಜಯದ್ಬಲ |

| ಪಾಂಡವರು | ಯುಧಿಷ್ಠಿರ | ಭೀಮ | ಅರ್ಜುನ | ನಕುಲ | ಸಹದೇವ |
|---|---|---|---|---|---|
| ವಿಶೇಷ ಗುಣ | ಧರ್ಮಾತ್ಮ ಸತ್ಯವಾದಿ ಶೀಲವಂತ, ಸದಾಚಾರಿ | ಬಲಶ್ರೇಷ್ಠ ಜ್ಞಾನಿಶ್ರೇಷ್ಠ ಸರ್ವವಿದ್ಯಾಪ್ರವೀಣ | ಶ್ರೇಷ್ಠಧನುರ್ಧಾರಿ, ಕೃಷ್ಣಭಕ್ತ | ಅನುಪಮ ರೂಪ ಹಾಗೂ ಗುಣವಂತರು | |
| ಮಹಾಯುದ್ಧದಲ್ಲಿ | 74 ವರ್ಷ | 73 ವರ್ಷ | 72 ವರ್ಷ | 71 ವರ್ಷ | 71 ವರ್ಷ |
| ಮಹಾಪ್ರಸ್ಥಾನ ಕೈಗೊಂಡಾಗ | 108 ವರ್ಷ | 107 ವರ್ಷ | 106 ವರ್ಷ | 105 ವರ್ಷ | 105 ವರ್ಷ |
| ಇದ್ದ ವಿಶೇಷ ನಾಮಗಳು | ಅಜಾತ ಶತ್ರು, ಭಾರತ ಪಾರ್ಥ, ಧರ್ಮ, ಧರ್ಮಜ, ಧರ್ಮ ನಂದನ, ಧರ್ಮಸೂನ ಕೌಂತೇಯ, ಕೌರವ ಕುಂತಿನಂದನ, ಕುರು ಸತ್ತಮ, ಪಾಂಡವ ಪಾಂಡವಾದ್ಯ ಮುಂ. | ಬಲಭೀಮ, ವೃಕೋಧರ ವಾಯುನಂದನ, ಅನಿಲಾ ತ್ಮಜ ಪಾರ್ಥ, ಭರತ ಪಾಂಡು-ನಂದನ, ಮಧ್ಯಮ, ಜಯ, ಕೌಂತೇಯ, ಬಲ್ಲವ, ಕೌರವ, ಮರುತಾತ್ಮಜ, ಪಾಂಡವ, ಪವನಾತ್ಮಜ, ಪ್ರಭಂಜನ, ವಾಯುಪುತ್ರ, ಕುರುಶಾರ್ದೂಲ, ಮುಂ. | ಭಾರತ, ಇಂದ್ರಸುತ ಧನಂಜಯ, ಕಪಿಧ್ವಜ ವಿಜಯ, ಕಿರೀಟಿ ಕೌಂತೇಯ, ಗುಡಾಕೇಶ ಪಾಂಡವ, ಪಾರ್ಥ, ಭೀಮಾನುಜ, ವಾಸವಿ ಶಕ್ರಸೂನು, ಸವ್ಯಸಾಚಿ ಮುಂ. | ಭಾರತ, ಪಾರ್ಥ, ಮಾದ್ರಿಸುತ, ಪಾಂಡವ, ಮಾದ್ರಿನಂದನ ಅಶ್ವಪಾಲ, ಮುಂ. | ಅಶ್ವಿನೀಸುತ, ಭಾರತ ಭರತಸತ್ತಮ, ಕೌರವ್ಯ ಮಾದ್ರಿಪುತ್ರ, ಮಾದ್ರೇಯ, ಮಾದ್ರಿ ನಂದನ, ನಕುಲಾನುಜ ಪಾಂಡವ, ಪಾಂಡು ಸುತ, ತಂತಿಪಾಲ, ಯಮ, ಮುಂ. |

*ಪಾಂಡವರು ಇಂದ್ರಪ್ರಸ್ಥದಲ್ಲಿ ಸುಮಾರು 20 ವರ್ಷ ಹಾಗೂ ಮಹಾಯುದ್ಧದ ನಂತರ ಹಸ್ತಿನಾವತಿಯಲ್ಲಿ ಸುಮಾರು 36 ವರ್ಷ ರಾಜ್ಯಭಾರಮಾಡಿದರು. 12 ವರ್ಷ ವನವಾಸ ಹಾಗೂ ಒಂದು ವರ್ಷ ಅಜ್ಞಾತವಾಸದಲ್ಲಿದ್ದರು. 18 ದಿನಗಳು ಕುರುಕ್ಷೇತ್ರದಲ್ಲಿ ಮಹಾಯುದ್ಧ ನಡೆಯಿತು. {ಇಲ್ಲಿ ಕೊಟ್ಟ ಕಾಲ, ವಯಸ್ಸು ಸುಮಾರು ಎಂದು ತಿಳಿಯಬೇಕು.}

## ಪರಿಶಿಷ್ಟ - 3

# ಮಹಾಭಾರತದ ಕಾಲದಲ್ಲಿದ್ದ ರಾಜ್ಯ ಪಟ್ಟಣಗಳ ಸೂಚಿ
## (ಕೆಲವನ್ನು ಕೊಡಲಾಗಿದೆ)

**ಅನಂತಶಯನ** - ತಿರುವನಂತಪುರಂ (ಕೇರಳದ ರಾಜಧಾನಿ) ಅನಂತಶಯನ ಕ್ಷೇತ್ರ.

**ಅಂಗದೇಶ** - ಬಾಗಲ್ಪುರ, ಗಂಗಾ ಸರಯೂ ನಡುವಿನ ಪ್ರದೇಶ ಇದರ ರಾಜಧಾನಿ ಚಂಪಾಪುರಿ (ಕರ್ಣರಾಜ್ಯಭಾರಮಾಡಿದ್ದ ದೇಶ).

**ಅನೂಪದೇಶ** - ಕಾರ್ತಿವೀರ್ಯಾರ್ಜುನನ ದೇಶ. ಈಗ ಮೋಹೋ ಎನ್ನುತ್ತಾರೆ. ನರ್ಮದಾ ತಟದ ಪ್ರದೇಶ. ಮಾಹಿಷ್ಮತಿ ರಾಜಧಾನಿ.

**ಅಯೋಧ್ಯಾ** - ಸರಯೂ ನದೀ ತೀರ. ಕೋಸಲರಾಜಧಾನಿ. ಶ್ರೀರಾಮಜನ್ಮಭೂಮಿ. ಉತ್ತರ ಪ್ರದೇಶ. ಇಕ್ವಾಕು ವಂಶಜರು ರಾಜ್ಯವಾಳಿದ್ದರು.

**ಆವಂತಿ** - ಮಾಲವದ ಪ್ರಾಂತ, ನರ್ಮದಾನದಿಯ ದಕ್ಷಿಣದಲ್ಲಿತ್ತು. ಉಜ್ಜಯನಿಯು ರಾಜಧಾನಿ (ಶ್ರೀಕೃಷ್ಣ ಬಲರಾಮರು ಸಂದೀಪಿನ್ಯಾಚಾರ್ಯರಲ್ಲಿ ವಿದ್ಯಾಭ್ಯಾಸ ಮಾಡಿದ ಸ್ಥಳ). ಕೃಷ್ಣನ ಸೋದರತ್ತೆ ರಾಜಾಧಿದೇವಿ ಮಕ್ಕಳಾದ ವಿಂದ ಅನುವಿಂದರು ಆಳದ ದೇಶ. ಇಂದಿನ ಉಜ್ಜಯಿನ ಪ್ರದೇಶ.

**ಅಭೀರದೇಶ** - ಸಿಂಧು ಸರಸ್ವತಿ ನಡು ದೇಶ. ಮ್ಲೇಂಚ್ಛ ವರ್ಗದವರ ರಾಜ್ಯ. ನಕುಲ ಗೆದ್ದಿದ್ದ. ಇವರೇ ದ್ವಾರಕಸ್ತ್ರೀಯರನ್ನು ಕದ್ದೊಯ್ಯುವಾಗ ಅರ್ಜುನ ಎದುರಿಸಿದ್ದ.

**ಅಹಿಚ್ಛತ್ರ** - ಉತ್ತರಪಾಂಚಾಲ ದೇಶ. ಇಂದಿನ ಬರೇಲಿ ಹತ್ತಿರವಿದೆ. ರೋಹಿಲಖಂಡ ರಾಜಧಾನಿ. ದ್ರೋಣಪುತ್ರ ಆಳಿದ.

**ಆಂಧ್ರಪ್ರದೇಶ** - ಕೃಷ್ಣಾಗೋದಾವರೀ ನಡುವಿನ ಪ್ರದೇಶ. (ಪಾಂಡವರು ಗೆದ್ದಿದ್ದ ದೇಶ)

**ಆನರ್ತದೇಶ** - ಗುಜರಾತ್ ಮತ್ತು ಮಾಳವದ ಒಂದು ಭಾಗ ಪ್ರದೇಶ. ಶರ್ಯಾತಿ ನಿರ್ಮಿಸಿದ ದೇಶ. ಗುರ್ಜರದೇಶವೆನ್ನುವರು. ಇದನ್ನು ಅರ್ಜುನ ಗೆದ್ದಿದ್ದ.

**ಇಂದ್ರಪ್ರಸ್ಥ** - ಪಾಂಡವರ ರಾಜಧಾನಿಯಾಗಿತ್ತು. ಹಸ್ತಿನಾಪುರದ ಹತ್ತಿರದ ನಗರ. (ವಿರಾಟನಿಗೆ ಸೇರಿದ ಸ್ಥಳ) ವಿಶ್ವಕರ್ಮ ನಿರ್ಮಿತ, ಅನಿರುದ್ಧನ ಪುತ್ರ ವಜ್ರ ನಂತರ ರಾಜನಾದ. (ಹಳೆಯ ದೆಹಲಿ-ಯಮುನಾತೀರ) ಇಲ್ಲಿಂದ ಕೃಷ್ಣ ಸಂಧಾನಕ್ಕೆ ಹೋದ (ಜಯಪುರಕ್ಕೆ ಹತ್ತಿರವಾಗಿದ್ದ ನಗರ)

**ಉತ್ತರಪಾಂಚಾಲ** - ಗಂಗಾದಡದ ಪ್ರದೇಶ. ದ್ರೋಣರು ಕಸಿದುಕೊಂಡದ್ದು ಬಿಟ್ಟು ಉಳಿದ ಅರ್ಧ ಭಾಗ. ಚಂಬಲ್ ಕಣಿವೆಯಲ್ಲಿದೆ. ದ್ರುಪದರಾಜನಾಗಿದ್ದ (ದಕ್ಷಿಣ ಪಾಂಚಾಲ)

ಉಲೂಕಪುರ - ಹಸ್ತಿನಾವತಿ ಉತ್ತರಕ್ಕಿದೆ. ಬೃಹಂತನ ರಾಜ್ಯ. ಅರ್ಜುನ ಗೆದ್ದಿದ್ದ.

ಉಶೀನರ ದೇಶ - ಕಾಶಿಯ ಬಳಿಯಲ್ಲಿದ್ದ ಕಚ್ಛರಾಜ್ಯ. ಶಿಬಿ ರಾಜನಾಗಿದ್ದ. ನಂತರ ಶೂದ್ರರಾಜರು ಬಂದರು.

ಋಷ್ಯಮೂಕ - ಬಳ್ಳಾರಿಜಿಲ್ಲೆಯ ಆನೆಗೊಂದದ ಬಳಿಯಲ್ಲಿ ತುಂಗಬದ್ರಾನದಿಯ ದಡದಲ್ಲಿದೆ. (ಮತಂಗ ಋಷಿಗಳ ಆಶ್ರಮದ ಸ್ಥಳ ಹನುಮನೊಂದಿಗಿದ್ದ ಸ್ಥಳ).

ಏಕಚಕ್ರನಗರ - ಒಂದು ಪಟ್ಟಣ (ದೃಪದನ ರಾಜ್ಯದ ಹತ್ತಿರದ ಊರು) ರೋಹಿಲಖಂಡದಲ್ಲಿದೆ.

ಕಚ್ಚದೇಶ - ಅಹಮದಾಬಾದ್ ಮತ್ತು ಕೇಂಬೆಯ ನಡುವಿದ್ದ ದೇಶ.

ಕಾಂಪಿಲ್ಯ - ಫತೇಘರ್‌ನ ಹತ್ತಿರ (ಫರೂಕಾಬಾದ್ ಜಿಲ್ಲಾ) ದ ಪಾಂಚಾಲದ ರಾಜಧಾನಿ. ದೃಪದ ರಾಜನಾಗಿದ್ದ.

ಕಟದೇಶ - ಬದ್ವಾರ್ ಜಿಲ್ಲೆ(ಕಟ್ವ)ಯ ಪ್ರದೇಶ. (ಸುನಾಭ ರಾಜನಾಗಿದ್ದ ಪ್ರದೇಶ)

ಕನ್ಯಾಕುಬ್ಜ - ಗಂಗಾತಟದ ದೇಶ. ಗಾಧಿಯ ರಾಜಧಾನಿಯಾಗಿತ್ತು. ರೋಹಿಲಖಂಡಪ್ರಾಂತ.

ಕನ್ಯಾಕುಮಾರಿ - ಕನ್ಯಾಕುಮಾರಿ (ದಕ್ಷಿಣದ ಕೆಳಭಾಗ). ರಾಜಸೂಯಯಾಗದ ಮುನ್ನ ಸಹದೇವ ಬಂದಿದ್ದ.

ಕರವೀರಪುರ - ಮಹಾಲಕ್ಷ್ಮೀ ಸನ್ನಿಧಾನ. ಇದು ಮಹಾರಾಷ್ಟ್ರದ ಕೊಲ್ಹಾಪುರವಾಗಿದೆ. ಮೀರಜ್‌ನ ಸಮೀಪದ ಊರು. (ಕಲಿಯುಗ ಪ್ರಾರಂಭದ 10 ಸಾವಿರ ವರ್ಷ ಮುಂಚೆಯೇ ಲಕ್ಷ್ಮೀ ಇಲ್ಲಿಗೆ ಬಂದು ನೆಲೆಸಿದ್ದಳು). ಇಲ್ಲಿ ಸೃಗಾಲವಾಸುದೇವ ರಾಜನಾಗಿದ್ದ.

ಕರೂಶ ದೇಶ - ಬಿಹಾರ ಪೂರ್ವದ ಷಹಬಾದ್ ಹತ್ತಿರ. ದಂತವಕ್ರ ರಾಜನಾಗಿದ್ದ. ಬಘೆಲ-ಬಂದೇಲಖಂಡದ ಒಂದು ಭಾಗ.

ಕಪಿರಾಜ್ಯ - ತುಂಗಭದ್ರಾ ತಟದಲ್ಲಿ ಹಂಪಿಯ ಬಳಿ. ವಾಲಿಸುಗ್ರೀವರಿದ್ದ ಸ್ಥಳ.

ಕುಂತಳದೇಶ - ಪಾಂಡ್ಯದೇಶದ ಮದ್ರಾಸಿನಿಂದೀಚೆ ಬಳ್ಳಾರಿಯ ಪ್ರಾಂತ. ಹಿಂದೆ ಚಂದ್ರಹಾಸನ ಪ್ರದೇಶವಾಗಿತ್ತು.

ಕುಂದಿನ - ವಿದರ್ಭದ ರಾಜಧಾನಿ, ಬಿಹಾರದ ಪ್ರದೇಶ. ಅಮರಾವತಿಗೆ ಸಮೀಪದಲ್ಲಿದೆ. (ರುಕ್ಮಿಣಿಯ ತಂದೆ ಭೀಷ್ಮಕ ರಾಜ್ಯವಾಳುತ್ತಿದ್ದ).

ಕಲಿಂಗದೇಶ - ಆಂಧ್ರಪ್ರದೇಶ, ಕೃಷ್ಣಾನದಿ ಸುತ್ತಮುತ್ತಲ ಪ್ರಾಂತ, ಕಲಿಂಗರಾಜರ ಆಧಿಪತ್ಯ ಗಂಜಾಂ-ವಿಶಾಖಪಟ್ಟಣ ಪ್ರಾಂತ. ಶ್ರುತಾಯು, ಶ್ರುತದೇವ, ಸತ್ಯದೇವ,.... ರಾಜರು ಕೌರವ ಪಕ್ಷವಹಿಸಿ ಭೀಮನಿಂದ ಸತ್ತರು. (ದುರ್ಯೋಧನನ ಸೋದರಮಾವ ಚಿತ್ರಾಂಗದನ ರಾಜ್ಯಭಾರವಿತ್ತು).

**ಕರ್ನಾಟಕ ದೇಶ** - ಭಾರತದ ದಕ್ಷಿಣ ಭಾಗ. (ಮೈಸೂರಿನ ಪ್ರಾಂತ). ಆಂಧ್ರದ ತಮಿಳುನಾಡಿನ ಕೇರಳದ ಮಧ್ಯ ಪ್ರದೇಶ.

**ಕಂಚಿ** - ಕಾಂಜೀವರಂ, ದ್ರವಿಡದೇಶದ ರಾಜಧಾನಿಯಾಗಿತ್ತು. ವಿಷ್ಣುಕಂಚಿಯಲ್ಲಿ ವರದರಾಜ, ಶಿವಕಾಂಚಿಯಲ್ಲಿ ಏಕಾಮ್ರೇಶ್ವರರು. (ಚೋಳರಾಜರ ರಾಜಧಾನಿಯೂ ಆಗಿತ್ತು) ಮದ್ರಾಸಿಗೆ ಸಮೀಪದಲ್ಲಿದೆ.

**ಕಾಂಭೋಜದೇಶ** - ಆಫ್ಘಾನಿಸ್ಥಾನದ ಪ್ರದೇಶ. (ಸುದಕ್ಷಿಣ ರಾಜ್ಯವಾಳುತ್ತಿದ್ದ) (ರಾಜಸೂಯದ ಮುನ್ನ ಅರ್ಜುನ ಹೋಗಿ ಗೆದ್ದು ಬಂದಿದ್ದ.)

**ಕಿಂಪುರುಷ ಖಂಡ** - ಹಿಮಾಲಯದ ಉತ್ತರದಲ್ಲಿದೆ. ಹನುಮಂತ ಇಂದಿಗೂ ಇರುವ ಸ್ಥಳ.

**ಕಿರಾತ ದೇಶ** - ಬೆಂಗಾಳದ ಪ್ರಾಂತ. ಗುಡ್ಡಗಾಡಿನ ಪ್ರದೇಶ. (ಅರ್ಜುನ ಶಿವನನ್ನು ಒಲಿಸಿ ಪಾಶುಪತಾಸ್ತ್ರ ಪಡೆದ ಸ್ಥಳ).

**ಕಿಷ್ಕಿಂಧ** - ಆನೆಗೊಂದೆ-ಹಂಪಿಯ ಬಳಿ, ಪಂಪಾಸರೋವರವೂ ಇದೆ. (ರಾಮ ಲಕ್ಷ್ಮಣರು ಹನುಮಂತನನ್ನು ಪ್ರಥಮ ಬಾರಿಗೆ ಕಂಡ ಪ್ರದೇಶ).

**ಕುಂಡಿನ** - ಅಮ್‌ರಾತಿ ಹತ್ತಿರ. ಮಧ್ಯಭಾರತ. ವಿದರ್ಭದೇಶದ ರಾಜಧಾನಿ. ಭೀಷ್ಮಕ ರಾಜನಾಗಿದ್ದ.

**ಕುಂತಯ** - ಅಶ್ವನದಿ ತಟ. ಕುಂತಿಯ ಹುಟ್ಟೂರು. ಮಾಳವದೇಶದ ರಾಜಧಾನಿಯಾಗಿತ್ತು. ಭೋಜರಾಜ ರಾಜ್ಯವಾಳಿದ.

**ಕುರುಕ್ಷೇತ್ರ** - ಸರಸ್ವತೀ - ದೃಷದ್ವತೀ ನದೀತೀರ. ಕುರುರಾಜನಿಂದ ನಿರ್ಮಿತ. ಅನೇಕ ತೀರ್ಥಗಳ ಕ್ಷೇತ್ರ. (ಭಾರತ ಮಹಾಯುದ್ಧ ನಡೆದ ಸ್ಥಳ). (ದೆಹಲಿಯಿಂದ ಸುಮಾರು 100 ಮೈಲಿ ಉತ್ತರಕ್ಕೆ 70 × 30 ಮೈಲು ಅಳತೆ ಉಳ್ಳದ್ದು.) ಈ ಕ್ಷೇತ್ರದಲ್ಲಿ ಅನೇಕ ದೇವಸ್ಥಾನಗಳು ಅನೇಕ ಸರೋವರಗಳಿವೆ. ಇಲ್ಲಿಯ ಲಕ್ಷ್ಮೀತೀರ್ಥದ ಬಳಿ ಕೃಷ್ಣ ಗೀತೋಪದೇಶ ಮಾಡಿದ್ದು.

**ಕುರುಜಾಂಗಲ** - ಹಸ್ತಿನಾಪುರದ ವಾಯುವ್ಯ, ದೆಲ್ಲಿಯ ಈಶಾನ್ಯಕ್ಕಿದೆ. (ಹಿಂದೆ ಕುರುಗಳ ರಾಜಧಾನಿಯಾಗಿತ್ತು.)

**ಕುರುಪಾಂಚಾಲ** - ದೆಹಲಿಯ ಪಶ್ಚಿಮಕ್ಕಿದ್ದ ದೇಶ. ಇಲ್ಲಿ ದ್ರುಪದನ ಆಳ್ವಿಕೆಯಿತ್ತು. ಇದಕ್ಕೆ ಪಾಂಚಾಲದೇಶ ಎಂದರು.

**ಕೇಕಯ ದೇಶ** - ಬಿಯಾಸ್ ಮತ್ತು ಸಟ್ಲೆಜ್ ನದಿಗಳ ನಡುವಿನ ಪ್ರದೇಶ. ಹಿಂದೆ ದಶರಥನ ಪತ್ನಿ ಕೈಕೇಯಿಯ ತಂದೆ ಅಶ್ವಪತಿರಾಜನ ರಾಜ್ಯವಾಗಿತ್ತು. ಪಾಂಡವರ ಕಾಲದಲ್ಲಿ ದೃಷ್ಟಕೇತು ರಾಜನಾಗಿದ್ದ. ಇದು ಪಂಜಾಬ್ ಪ್ರಾಂತ.

**ಕುಶದೇಶ** - ಈಗಿನ ಓಸ್ಟ್ರ್ಯಾನಿಯಾ ಪ್ರದೇಶ. ಸಪ್ತದ್ವೀಪಗಳಲ್ಲೊಂದು.

**ಕುಶಸ್ಥಲಿ** - ದ್ವಾರಕಾ (ಗುಜರಾತಿನ ಪಶ್ಚಿಮ ಪ್ರದೇಶ - ಸಮುದ್ರತೀರ). (ಶ್ರೀಕೃಷ್ಣ ನಿರ್ಮಿತ ಮುಖ್ಯರಾಜಧಾನಿ) ರೇವತರಾಜನಾಗಿದ್ದ.

**ಕುರುಶದೇಶ** - ಬಘೇಲ ಹಾಗೂ ಬಂದೇಲ ಖಂಡಗಳ ಭಾಗ (ಇಲ್ಲಿ ಇಲ್ಲಿ ವೃದ್ಧಶರ್ಮ ನಂತರ ದಂತವಕ್ತ್ರರಾಜ್ಯವಾಳುತ್ತಿದ್ದ). ಕೆಲಕಾಲ ಹಂಸಡಿಂಬಿಕರೂ ರಾಜ್ಯವಾಳಿದರು.

**ಕೇದಾರ** - ಕೇದಾರ (ಗಂಗಾನದಿಯಿಂದ ತಮಸಾನದಿಯವರೆಗಿನ ಪ್ರಾಂತ). 12000 ಅಡಿ ಎತ್ತರದಲ್ಲಿದೆ. ಕೇದಾರನಾಥನ ಕ್ಷೇತ್ರ. ಹಿಮಾಲಯದ ಈ ಪ್ರಾಂತಕ್ಕೆ ಹೋಗದಿರಲು ಶಿವನ ಶಾಪವಿದೆ.

**ಕೇರಳ** - ಆರ್ಯಾವರ್ತದ ದಕ್ಷಿಣಭಾಗ. ಮಲಬಾರ್ ಪ್ರದೇಶ (ಮಳೆಯಾಳ ಎಂಬ ಹೆಸರಿದೆ). (ಸುಧರ್ಮನು ರಾಜ್ಯವಾಳುತ್ತಿದ್ದ ಪ್ರಾಂತ ಸಹದೇವ ಕರ್ಣಾದಿಗಳು ಗಿದ್ವಿಜಯ ಮಾಡಿದ್ದರು).

**ಕೈಲಾಸಪರ್ವತ** - ಹಿಮಾಲಯದ ಒಂದು ಭಾಗದಲ್ಲಿದೆ (ಈಗ ಟಿಬೆಟ್‌ನಲ್ಲಿರುವ ಪ್ರಾಂತ). ಭೂಮಿಯಿಂದ 1400 ಅಡಿ ಎತ್ತರದಲ್ಲಿದೆ ಆರು ಯೋಜನ ಎತ್ತರವಿದ್ದು ಈ ಪರ್ವತ ಒಮ್ಮೆ ಪ್ರದಕ್ಷಿಣೆಗೆ ಸುಮಾರು ಮೂರು ದಿನಗಳು ಬೇಕು. ಶಿನವ-ಕುಬೇರನ ವಾಸಸ್ಥಾನ. ಸಗರನು ಭಗೀರಥ ಇಲ್ಲಿ ತಪಸ್ಸು ಮಾಡಿದ್ದರು. ಕೃಷ್ಣಾರ್ಜುನರೂ ಹೋಗಿದ್ದರು. ಶಿವಪಾರ್ವತಿಯರ ಮೂಲಸ್ಥಾನ.

**ಚಂಪಕಾವತಿ** - ಅಂಗ ದೇಶದ ರಾಜಧಾನಿ. ಕರ್ಣರಾಜನಾಗಿದ್ದ. (ಹಂಸಧ್ವಜ - ಸುಧನ್ವರಾಜರ ರಾಜಧಾನಿ).

**ಚೇದಿದೇಶ** - ಜಬ್ಬಲಪುರ ಬುಂದೇಲ ಖಂಡ ನಡುವಿನ ಪ್ರದೇಶ. (ಶಿಶುಪಾಲನ ರಾಜ್ಯ). ಚಿದು ಎಂಬ ಯದುವಂಶದ ರಾಜ ಸ್ಥಾಪಿಸಿದ್ದ ರಾಜ್ಯ. ಇದನ್ನು ರೇವಾ ಎಂದೂ ಕರೆಯುವರು. (ಶಿಶುಪಾಲನ ಮಗ ದೃಷ್ಟಕೇತು ರಾಜ್ಯವಾಳಿದ)

**ಕೋಸಲ ದೇಶ** - ಸರಯೂ ನದಿಯ ಉತ್ತರಭಾಗದ ಪ್ರದೇಶ (ಅಯೋಧ್ಯಾರಾಜಧಾನಿ) (ಇಲ್ಲಿ ಕ್ಷೇಮದರ್ಶಿರಾಜನಾಗಿದ್ದ. ಕೃಷ್ಣ ಭೀಮಾದಿಗಳು ಈ ದೇಶವನ್ನು ಗೆದ್ದಿದ್ದರು.)

**ಗಯಾ** - ಗಯಾಕ್ಷೇತ್ರ ಒರಿಸ್ಸಾರಾಜ್ಯದಲ್ಲಿದೆ. ವಿಷ್ಣುಪಾದವಿರು ಕ್ಷೇತ್ರ. ಪಿತೃಕಾರ್ಯಕ್ಕಾಗಿ ಇರುವ ಕ್ಷೇತ್ರ. ಗದಾಧರನಿಂದ ನಿರ್ಮಿತವಾದದ್ದು.

**ಗಾಂಧಾರ ದೇಶ** - ಕಾಬೂಲ್ ತೀರದ ಪ್ರದೇಶ. ಭರತನ ಮಗ ತಕ್ಷ ನಿರ್ಮಿಸಿದ ದೇಶ. ಈಗ ಅಫ್ಘಾನಿಸ್ಥಾನದಲ್ಲಿದೆ. ಗಾಂಧಾರಿಯ ತಂದೆ ಸುಬಲ ರಾಜ್ಯವಾಳುತ್ತಿದ್ದ.

**ಗಿರಿವ್ರಜ** - ಮಗಧ ರಾಜಧಾನಿ (ಬಿಹಾರದ ರಾಜಗೃಹ ಪಟ್ಟಣ). ಜರಾಸಂಧನ ಆಳ್ವಿಕೆಯಲ್ಲಿದ್ದ ಪಟ್ಟಣ. ಇವನ ನಂತರ ಇವನ ಮಗ ಸಹದೇವ ರಾಜನಾದ.

**ತಕ್ಷಶಿಲಾ** - ಜಲಂಧರ ಪ್ರದೇಶ (ಲಾಹೂರ ಜಿಲ್ಲೆ). (ಸುಶರ್ಮನ ರಾಜ್ಯವಾಗಿತ್ತು. ಸುಶರ್ಮ ದುರ್ಯೋಧನನ ಆಪ್ತ).

**ದಂಡಕಾರಣ್ಯ** - ಭಾರತದ ದಕ್ಷಿಣದ ಮಧ್ಯ ಭಾಗ. (ವಿಂಧ್ಯಾ ಶೈವಲ ಪರ್ವತಗಳನುದಿವನ ಪ್ರದೇಶ) ಸೂರ್ಯವಂಶಜ ದಂಡಕನ ರಾಜ್ಯವಾಗಿತ್ತು.

**ದಶಾರ್ಣ ದೇಶ** - ಛತ್ತಿಸ್‌ಘಡ್ ಜಿಲ್ಲೆಯ ಪ್ರದೇಶ. ಪೂರ್ವದ ಮಾಳವ ಹಾಗೂ ಭೂಪಾಲದ ಪ್ರಾಂತ ಸೇರಿಕೊಂಡಿತ್ತು. ಮಹಾಭಾರತದಲ್ಲಿ ಎರಡು ಕಡೆ ಈ ಹೆಸರಿನದ್ದೊಂದಿದೆ. (ಹಿರಣ್ಯವರ್ಮ ಈ ದೇಶದ ರಾಜನಾಗಿದ್ದ. ಈತನ ಮಗಳನ್ನ ಶಿಖಂಡಿ ಮದುವೆಯಾದ).

**ದಕ್ಷಿಣ ಪಾಂಚಾಲ** - ದ್ರುಪದನಿಗೆ ದ್ರೋಣರು ಬಿಟ್ಟುಕೊಟ್ಟ ಭಾಗದ ರಾಜ್ಯ. ಗಂಗೆಯ ದಕ್ಷಿಣದ ಚಂಬಲ್ ಕಣಿವೆ. ಗಂಗಾದಡದಲ್ಲಿದೆ. ಕಾಂಪಿಲ್ಯರಾಜಧಾನಿಯಾಗಿತ್ತು.

**ದ್ರವಿಡದೇಶ** - ಭಾರತದ ದಕ್ಷಿಣ ಪ್ರದೇಶ (ಮದ್ರಾಸಿನಿಂದ ಶ್ರೀರಂಗಪಟ್ಟಣದವರಗಿದ್ದು ಕನ್ಯಾ ಕುಮಾರಿವರೆಗೂ ಹಬ್ಬಿತ್ತು. ಕಾಂಚಿಪುರ ರಾಜಧಾನಿಯಾಗಿತ್ತು). ದ್ರವಿಡರಾಜ ರಿದ್ದರು. ರಾಜಸೂಯದ ಪ್ರಸಂಗದಲ್ಲಿ ಸಹದೇವ ಬಂದಿದ್ದ.

**ದ್ವಾರಕಾ** - ರಾಮಾಯಣದ ಕುಶಸ್ಥಲ ಪ್ರದೇಶ. ಶ್ರೀಕೃಷ್ಣ ವಿಶ್ವಕರ್ಮನಿಂದ ನಿರ್ಮಿಸಿದ ಪಟ್ಟಣ. ಗುಜರಾತ್‌ನ ಪಶ್ಚಿಮ ಸಮುದ್ರ ಮಧ್ಯ ಭಾಗದಲ್ಲಿದೆ. ಅಮರಾವತಿಗಿಂತಲೂ ರಮಣೀಯ. ಯಾದವರು ಸುರಕ್ಷಿತವಾಗಿದ್ದ ದೇಶ. ಅರ್ಜುನ ಕುಚೇಲಾದಿಗಳು ಬಂದ ಸ್ಥಳ. ಹಿಂದೆ ಆನರ್ತದೇಶದ ರಾಜಧಾನಿಯಾಗಿತ್ತು. ಶ್ರೀಕೃಷ್ಣ ಪರಂಧಾಮಕ್ಕೆ ಹೋಗಿ ಏಳುದಿನಕ್ಕೆ ಸಮುದ್ರದಲ್ಲಿ ಮುಳುಗಿತು. (ಇಂದಿಗೂ ಅವಶೇಷಗಳಿವೆ.) (10 ಯೋಜನ ವಿಸ್ತಾರ ಪ್ರದೇಶ.)

**ಧನುಷ್ಕೋಟ** - ರಾಮೇಶ್ವರದ ಪೂರ್ವಪಶ್ಚಿಮ ಸಮುದ್ರಗಳ ಕೂಡುವ ಸ್ಥಳ. ರಾಮನಾಡಿ ಯಿಂದ 24 ಮೈಲು ದೂರದ ಕ್ಷೇತ್ರ. ಅಂದು ಶ್ರೀರಾಮ ಯುದ್ಧಾನಂತರ ತನ್ನ ಧನಸ್ಸಿನ ಕೋಟಿ (ತುದಿ) ಯಿಂದ ನಾಶಪಡಿಸಿದ್ದ.

**ನೇಪಾಲದೇಶ** - ಹಿಮಾಲಯದ ಕಂದರದಲ್ಲಿರುವ ಪ್ರದೇಶ. (ಅರ್ಜುನ ಕರ್ಣಾದಿಗಳು ಜಯಿಸಿದ್ದ ಪ್ರಾಂತ). ಪುರಾತನ ಪಶುಪತಿ ಮಂದಿರವಿದೆ. ಸಾಹಸಿ ರಾಜರಿದ್ದರು. ಬಿಹಾರದ ಉತ್ತರದಲ್ಲಿದೆ. ವಿರಾಟಗೆ ಸೇರಿದ ಪ್ರಾಂತವಾಗಿತ್ತು. ಜನಕಪುರಿ ಸೀತಾ ಜನಿಸಿದ ಸ್ಥಳ ಇಲ್ಲಿದೆ.

**ನೈಮಿಷಾರಣ್ಯ** - ಗೋಮತಿನದಿಯ ಎಡಭಾಗದ ಅರಣ್ಯ ಪ್ರದೇಶ. (ಸಾಂಡಿಲಾದಿಂದ 24 ಮೈಲು ದೂರದಲ್ಲಿದೆ). ಶೌನಕಾದಿಗಳು ಜ್ಞಾನಸತ್ರ ನಡೆಸುತ್ತಿದ್ದ ಪುಣ್ಯಕ್ಷೇತ್ರ. ಸೂತರು ಎಲ್ಲ ಪುರಾಣಗಳನ್ನು ಮಹಾಭಾರತವನ್ನು ಹೇಳಿದ್ದ ಪಾಂಡವರು ಬಂದಿದ್ದ ಪರಮ ಪವಿತ್ರ ಸ್ಥಳ.

**ಪಂಚವಟಿ** - ನಾಸಿಕದ ಒಂದು ಪ್ರದೇಶ (ಗೋದಾವರಿ ಹರಿಯುತ್ತದೆ) ರಾವಣ ಸೀತೆಯನ್ನು ಅಪಹರಿಸಿದ ಸ್ಥಳ.

**ಪಾಂಚಾಲ ದೇಶ** - ಇಂದ್ರಪ್ರಸ್ಥದ ಪೂರ್ವದಲ್ಲಿದ್ದ ದೇಶ. ರೋಹಿಲಖಂಡಪ್ರಾಂತ (ಉತ್ತರ ಪಾಂಚಾಲದ್ರೋಣರದ್ದಾದರೆ ದಕ್ಷಿಣ ಪಾಂಚಾಲ ದ್ರುಪದನ ರಾಜ್ಯವಾಗಿತ್ತು) ಕಾಂಪಿಲ್ಯರಾಜಧಾನಿ. (ಯಥಾಮನ್ಯುವೂ ರಾಜನಾಗಿದ್ದ)

**ಪಾಂಡ್ಯದೇಶ (ಪಾಂಡುರಾಷ್ಟ್ರ)** - ಮಧುರೆ ಮತ್ತು ತಿರುನೆಲ್ವೇಲಿ ಪ್ರಾಂತಗಳು. ದಕ್ಷಿಣ ಭಾರತದ ಪ್ರಾಂತವು. ಇಲ್ಲಿ ಪ್ರವೀರ ರಾಜ್ಯಭಾರ ಮಾಡುತ್ತಿದ್ದ. ದಕ್ಷಿಣದ ಮಧುರೆ ರಾಜಧಾನಿಯಾಗಿತ್ತು. ಸಹದೇವ ಈ ರಾಜ್ಯಗಳನ್ನು ಗೆದ್ದಿದ್ದ. ಮಲಯಧ್ವಜ ರಾಜನಾಗಿದ್ದ.

**ಪುಲಿಂದದೇಶ** - ಪಶ್ಚಿಮದ ಬುಂದೇಲ ಖಂಡದ ಸಾಗರ ಜಿಲ್ಲೆಯಲ್ಲಿದ್ದದ್ದು. ಮ್ಲೇಂಚ್ಛ ರಾಜರಿದ್ದರು. ಭೀಮ ಸಹದೇವರು ಗೆದ್ದಿದ್ದರು.

**ಪುಂಡ್ರದೇಶ** - ಇದು ಕರೂಶ ಪ್ರದೇಶ. (ಪೌಂಡ್ರಕವಾಸುದೇವ ರಾಜನಾಗಿದ್ದ) ಕೋಸಿ ನದಿಯ ಪೂರ್ವ. ಪಾಂಡು, ಕರ್ಣ, ಅರ್ಜುನರು ಗೆದಿದ್ದ ಪ್ರದೇಶ.

**ಪುಷ್ಕರ** - ಅಜಮೀರದಿಂದ ಏಳುಮೈಲು ದೂರದಲ್ಲಿದೆ. ಇಲ್ಲಿ ಚತುರ್ಮುಖ ಬ್ರಹ್ಮರ ಮಂದಿರವಿದೆ. ಬ್ರಹ್ಮದೇವರು ಯಜ್ಞ ಮಾಡಿದ ಪವಿತ್ರಕ್ಷೇತ್ರ. ಪೋಖ್ರಾ ಸ್ಥಳವಾಗಿದೆ. ವಿಷ್ಣುವಿನ ಸ್ವಯಂವ್ಯಕ್ತ ಕ್ಷೇತ್ರ.

**ಪ್ರಭಾಸ** - ಸೋಮನಾಥ (ಗುಜರಾತ್‌ನ ಪಶ್ಚಿಮದ ಸಮುದ್ರ ತೀರದಲ್ಲಿದೆ) ಒಂದು ತೀರ್ಥಕ್ಷೇತ್ರ. ಇದು ಸೌರಾಷ್ಟ್ರಕ್ಕೆ ಸೇರಿದ ಸ್ಥಳ. ಯದುವಂಶಜರು ನಿರ್ಯಾಣ ಗೊಂಡ ಸ್ಥಳ. ಇಲ್ಲಿ ಪಾಂಡವರು ವನವಾಸಕಾಲದಲ್ಲಿ ಬಂದಿದ್ದರು. ಹಿರಣ್ಯಾ, ಸರಸ್ವತಿ ಮತ್ತು ಕಪಿಲಾನದಿಗಳ ಸಂಗಮವಿದೆ. ಯಾದವರು ಉಪಸಂಹಾರ ಮಾಡಿದ ಕ್ಷೇತ್ರ.

**ಪ್ರಾಗ್ಜ್ಯೋತಿಷಪುರ** - ಈಗಿನ ಅಸ್ಸಾಂ ಪ್ರಾಂತ. ಚೀನಾದ ಕೆಲ ಭಾಗ ಸೇರಿತ್ತು. ನರಕಾಸುರ ರಾಜ್ಯ ವಾಳುತ್ತಿದ್ದ.

**ಬದರಿಕಾಶ್ರಮ** - ನರನಾರಾಯಣರ ಕ್ಷೇತ್ರ. ಹಿಮಾಲಯದಲ್ಲಿದೆ. ವೇದವ್ಯಾಸರಿರುವ ಪುಣ್ಯಕ್ಷೇತ್ರ. ಅಲಕನಂದಾತೀರದಲ್ಲಿ ಬದರಿನಾರಾಯಣ ಮಂದಿರವಿದೆ. ಈಗ ಬದರಿ ಎನ್ನುವರು. ನರನಾರಾಯಣರು ಅವತರಿಸಿ ನೆಲೆಸಿರುವ ಕ್ಷೇತ್ರ. ಪಾಂಡವರು ಜನ್ಮ ತಾಳಿದ

ಪುಣ್ಯಭೂಮಿ. ಪಾಂಡವರು ಮಹಾಪ್ರಸ್ಥಾನ ಕೈಗೊಂಡ ಪುಣ್ಯ ಪರ್ವತ. ಉತ್ತರ ಬದರಿಯಲ್ಲಿ ವೇದವ್ಯಾಸರೊಂದಿಗೆ ಶ್ರೀ ಮದಾಚಾರ್ಯರು ಇರುವ ಪವಿತ್ರತಮ ಪುಣ್ಯ ಕ್ಷೇತ್ರ. ಭಾರತದ ಉತ್ತರದ ಪರ್ವತ ಶ್ರೇಣಿ. ಗಂಗಾ ಭೂಲೋಕಕ್ಕೆ ಇಳಿದದ್ದು ಇಲ್ಲೆ. ಭಗೀರಥಾದಿ ಅನೇಕ ರಾಜ ಮಹರಾಜರು ಕಡೆಯ ಯಾತ್ರೆಗೈದ ಸ್ಥಳ. ಜಗತ್ತಿನ ಶ್ರೇಷ್ಠತಮ ಕ್ಷೇತ್ರ.

**ಬಾಹ್ಲೀಕ ದೇಶ** - ಇಂದಿನ ಬಲೂಚಿಸ್ಥಾನ. ಬೀಯಸ್ ಮತ್ತು ಸಟ್ಲಿಜ್ ನದಿಗಳ ನಡುವಿದೆ. ಬಾಹ್ಲೀಕ, ಶಲ್ಯ, ಜನಮೇಜಯ ರಾಜರು ಆಳಿದ ದೇಶ.

**ಮಗಧದೇಶ** - ಬಿಹಾರ ಪ್ರಾಂತ (ಉತ್ತರದಲ್ಲಿ ಗಂಗಾ ದಕ್ಷಿಣ ವಿಂಧ್ಯಾ ಪಶ್ಚಿಮ ಶೋಣಾನದಿ ಇರುವ ದೇಶ). ರಾಮಾಯಣಕಾಲದಲ್ಲಿ ಶೂರಸೇನ (ಸುಮಿತ್ರೆಯ) ತಂದೆ ಇದ್ದ ರಾಜ್ಯ. ಗಿರಿವ್ರಜರಾಜಧಾನಿ. ಬೃಹದ್ರಥರಾಜ ನಂತರ ಜಯತ್ಸೇನ. ನಂತರ ಜರಾಸಂಧ ರಾಜನಾದ. ವೈಹಾರ, ವಾರಾಹ, ವೃಷಭ, ಋಷಿ, ಚೈತ್ಯಕ ಪರ್ವತಗಳ ಮಧ್ಯ ಪ್ರದೇಶ.

**ಮತ್ಸ್ಯದೇಶ** - ಜಯಪುರದ ಸುತ್ತಲ ಪ್ರದೇಶ (ವಿರಾಟರಾಜನಾಗಿದ್ದ. ಪಾಂಡವರು ಇಲ್ಲಿಯೇ ಅಜ್ಞಾತವಾಸ ಮಾಡಿದರು).

**ಮದ್ರದೇಶ** - ಪಂಜಾಬಿನ ರಾವಿ ಮತ್ತು ಚೇನಾಬ್ ನದಿಗಳ ನಡುವಿನ ಪ್ರದೇಶ. (ಇಲ್ಲಿ ಋತಾಯನ, ಶಲ್ಯ ರಾಜ್ಯಭಾರ ಮಾಡುತ್ತಿದ್ದರು.)

**ಮಥುರಾ** - ಭೋಜರ ರಾಜಧಾನಿ. ಕಂಸರಾಜನಾಗಿದ್ದ. ದಿಲ್ಲಿಗೆ ಪಶ್ಚಿಮದಲ್ಲಿದೆ. ಶತೃಘ್ನ ಮಧು ಎಂಬ ದೈತ್ಯನನ್ನು ಸಂಹರಿಸಿ ನಿರ್ಮಿಸಿದ್ದ. ಶ್ರೀಕೃಷ್ಣನ ಜನ್ಮಭೂಮಿ. ಶೂರಸೇನ ರಾಜನಾಗಿದ್ದ. ಸುರಸೇನ ದೇಶವೆಂದಿದೆ. ದಿಲ್ಲಿಗೆ ಸಮೀಪ ಪಟ್ಟಣ. ಯಮುನೆಯ ಬಲ ದಂಡೆಯಲ್ಲಿದೆ.

**ಮಾಹಿಷ್ಮತಿ** - ದಕ್ಷಿಣಾ ಪಥದ ದೇಶ. ಅನೂಪಕ್ಕೆ ಸೇರಿದ್ದು. ರಾಜಧಾನಿ. ನರ್ಮದಾ ತೀರದಲ್ಲಿದೆ. ಹಿಂದೆ ಕಾರ್ತಿವೀರ್ಯ, ನೀಲರಾಜ್ಯ ವಾಳಿದರು. ದಶಾಶ್ವನ ರಾಜಧಾನಿಯೂ ಆಗಿತ್ತು.

**ಮಾಲವದೇಶ** - ಹಸ್ತಿನಾವತಿಯ ಪಶ್ಚಿಮಕ್ಕಿರುವ ದೇಶ. ಅನೂಪದೇಶದ ವಾಯುವ್ಯದಲ್ಲಿದೆ. ಧಾರಾನಗರ ರಾಜಧಾನಿ. ಇಂದ್ರವರ್ಮ ರಾಜನಾಗಿದ್ದ.

**ವಂಗದೇಶ** - ಇದು ಇಂದಿನ ಬಂಗಾಳ ಪ್ರಾಂತ. ಸಮುದ್ರಸೇನ, ಚಂದ್ರಸೇನರು ರಾಜ್ಯವಾಳಿದರು. ಪಾಂಡವರ ಪಕ್ಷವಹಿಸಿದ್ದರು. ರಾಜಸೂಯದಲ್ಲಿ ಭೀಮ ಗೆದ್ದಿದ್ದ ಪ್ರಾಂತ.

**ವಾರಣಾಸಿ** - ಬಿಂದುಮಾಧವ, ವಿಶ್ವನಾಥರ ಕ್ಷೇತ್ರ. ಗಂಗಾತಟ, ಕಾಶಿ-ಅಲಹಾಬಾದ್ ಎನ್ನುವರು. ಜ್ಞಾನಾರ್ಜನೆಗೆ ಕೇಂದ್ರಸ್ಥಳವಾಗಿತ್ತು. ಕಾಶಿರಾಜ ಮನೆತನ ರಾಜ್ಯವಾಳಿದರು.

